# ಎಲ್ಲರೂ ಓದಬೇಕಾದ ಪುಸ್ತಕಗಳು.

| | | | ರೂ. | ಆ |
|---|---|---|---|---|
| ಶ್ರೀಕಾಂತ [ ೮ ಭಾಗ ] | ಕಾದಂಬರಿ | ಶರಚ್ಚಂದ್ರ | ೧೦ | ೦ |
| ಅರಗಿನ ಮನೆ | ,, | ,, | ೪ | ೦ |
| ಅಕ್ಕಾಜಿ | ,, | ,, | ೧ | ೪ |
| ಪರಿಣೀತಾ | ,, | ,, | ೧ | ೦ |
| ವೃಂದಾವನ | ,, | ,, | ೧ | ೧೨ |
| ಚಿತ್ರ | ,, | ,, | ೧ | ೧೨ |
| ಏಕಾದಶಿಬೈರಾಗಿ ಮತ್ತು ಗುರುಚರಣ | ,, | ,, | ೦ | ೮ |
| ಪ್ರೇಮಪಥ | ,, | ,, | ೦ | ೬ |
| ಕರ್ಮಭೂಮಿ | | ಪ್ರೇಮಚಂದರ ಕಾದಂಬರಿ | ೪ | ೦ |
| ಕನ್ನಡಿಯ ಹುಟ್ಟು | ( ಸಾಹಿತ್ಯ ಸಂಶೋಧನ ) | ಶಂ. ಬಾ. ಜೋಶಿ | ೧ | ೧೨ |
| ಕನ್ನಡದ ನೆಲೆ | ,, | ,, | ೩ | ೦ |
| ಕನ್ನಡ ಕತೆ | ,, | ,, | ೩ | ೦ |
| ಕನ್ನಡ ನುಡಿಯ ಜೀವಾಳ | ,, | ,, | ೩ | ೦ |
| ಶಿವರಹಸ್ಯ | ,, | ,, | ೧ | ೪ |
| ಕರ್ಣನ ಮೂರು ಚಿತ್ರಗಳು | ,, | ,, | ೧ | ೪ |
| ಯಕ್ಷ ಪ್ರಶ್ನೆ ಅರ್ಥಾತ್ ಬರಲಿರುವ ಸಮಾಜ | | ,, | ೩ | ೦ |
| ಅಗ್ನಿವಿದ್ಯೆ | | ಶಾಂಡಿಲ್ಯಪ್ರಣೀತ | ೦ | ೯ |
| ಸಾಹಿತ್ಯ ಸಮೀಕ್ಷೆ | | ಪ್ರೊ. ರಾ. ಯ. ಧಾರವಾಡಕರ | ೧ | ೮ |
| ಪತ್ರಿಕಾ ವ್ಯವಸಾಯ | | ,, | ೦ | ೧೨ |
| ಬಾಳ್ವೆಯೇ ಬೆಳಕು | | ಕೋ. ಶಿ. ಕಾರಂತ | ೧ | ೮ |
| ಕೈಗನ್ನಡಿ | ( ಸಚಿತ್ರ ಹಸ್ತಸಾಮುದ್ರಿಕ ಶಾಸ್ತ್ರ ) | ಕಲಮದಾನಿ | ೧ | ೮ |
| ಚಿತ್ರಸೃಷ್ಟಿ | ( ಕವನ ಸಂಗ್ರಹ ) | ಸಾಲಿ ರಾಮರಾಯರು | ೧ | ೮ |
| ಆಹ್ವಾನ | ,, | ಶ್ರೀರಂಗ | ೧ | ೦ |
| ಗೀತಾಗಾಂಭೀರ್ಯ | | ,, | ೩ | ೮ |
| ಗಾಂಧೀದರ್ಶನ | ( ಚಿತ್ರಮಯ ಚರಿತ್ರೆ ) | | ೧ | ೦ |
| ಮಕ್ಕಳ ರಾಮಾಯಣ | ( ಸಚಿತ್ರ ಬಾಲರಾಮಾಯಣ ) | | ೦ | ೧೦ |
| ಬ್ರಹ್ಮಚರ್ಯವೇ ಜೀವನ—ವೀರ್ಯನಾಶವೇ ಮೃತ್ಯು | | ಶ್ರೀ. ಶಿವಾನಂದ | ೩ | ೦ |
| ಉದರದ ಆರೋಗ್ಯ ಮತ್ತು ಸ್ನಾಯುಬಲ ಸಂವರ್ಧನ | ( ಸಚಿತ್ರ ) | ,, | ೨ | ೦ |

ನಮ್ಮ ದೊಡ್ಡ ಕ್ರಯಪಟ್ಟಿಗೆ ಎರಡಾಣೆ ಅಂಚೇಚೀಟಿ ಕಳಿಸಿರಿ.

**ಸಮಾಜ ಪುಸ್ತಕಾಲಯ, ಧಾರವಾಡ.**

# ಬಣ್ಣದ ಬದುಕು

( ಕಾದಂಬರಿ )



ಅ. ನ. ಕೃಷ್ಣರಾಯ

ಪ್ರತಿಭಾ ಗ್ರಂಥಮಾಲೆ, ಧಾರವಾಡ.

೧೯೫೩  ಬೆಲೆ: ೩—೦—೦

# ಪ್ರಕಾಶಕರ ಮಾತು

ಪ್ರತಿಭಾ ಗ್ರಂಥಮಾಲೆಯ ಪರವಾಗಿ ಶ್ರೀ. ಅ. ನ. ಕೃ. ಅವರ ಈ ಶ್ರೇಷ್ಠ ಕಲಾಕೃತಿಯನ್ನು ಚಂದಾದಾರರಿಗೆ ಅರ್ಪಿಸಲು ತುಂಬ ಸಂತೋಷ ವೆನಿಸುತ್ತದೆ. ನಮ್ಮ ಬಿನ್ನಹವನ್ನು ಮನ್ನಿಸಿ ತಮ್ಮ ಅಮೌಲ್ಯವಾದ ಈ ಕಾದಂಬರಿಯನ್ನು ನಮ್ಮ ಮಾಲೆಯಲ್ಲಿ ಪೋಣಿಸಲು ಕೊಟ್ಟದ್ದಕ್ಕಾಗಿ ಶ್ರೀ. ಅ. ನ. ಕೃ. ಅವರಿಗೆ ಚಿರಋಣಿಯಾಗಿದ್ದೇವೆ.

ಪ್ರತಿಭಾ ಗ್ರಂಥಮಾಲೆಯು ೧೯೫೩ ರಲ್ಲಿ ಸಲ್ಲಿಸಬೇಕಾದ ೯೦೦ ಪುಟ ಗಳಲ್ಲಿ ಈಗಾಗಲೆ ಸುಮಾರು ೮೦೦ ಪುಟ ಸಾಹಿತ್ಯವನ್ನು ಚಂದಾದಾರರಿಗೆ ನೀಡಿಬಿಟ್ಟಿದೆ. ಇದೀಗ ಅಂಚೆ 'ಇಲ್ಲಾಖೆ'ಯವರು ವಿ. ಪಿ. ಮತ್ತು ರಜಿಸ್ಟರ್ ವೆಚ್ಚವನ್ನು ಹೆಚ್ಚಾಗಿ ಮಾಡಿದ್ದರಿಂದ ಗ್ರಂಥಮಾಲೆಯವರು ಒಮ್ಮೆಲೆ ೨-೩ ಪುಸ್ತಕ ಕೂಡಿ ಕಳಿಸದೆ ಗತ್ಯಂತರವಿಲ್ಲ. ಬಿಡಿಬಿಡಿಯಾಗಿ ಕಳಿಸುತ್ತ ಹೋದರೆ ಪಡೆದ ಚಂದಾ ಹಣವನ್ನೆಲ್ಲ ಅಂಚೆಯವರಿಗೇ ತೆತ್ತು ಬಿಡಬೇಕಾ ಗುವದು.

ಚಂದಾದಾರರಿಗೆ ಮುಂಗಡವಾಗಿಯೇ ಇಷ್ಟೊಂದು ಪುಸ್ತಕಗಳನ್ನು ಸಲ್ಲಿಸುವದರಿಂದ ನಷ್ಟವೇನೂ ಆಗಲಾರದು. ಗ್ರಂಥಮಾಲೆಯ ಬಗ್ಗೆ ಇನ್ನಷ್ಟು ಭರವಸೆಯೇ ಹೆಚ್ಚೀತೆಂಬ ಆಶೆಯೂ ನಮಗಿದೆ. ತಾವು ಕೊಟ್ಟ ಹಣಕ್ಕಿಂತ ಹೆಚ್ಚಾಗಿಯೇ ಪುಸ್ತಕ ಬೇಗನೆ ಕೈಗೆ ಬಂದು ಬಿಟ್ಟರೆ ಯಾರಿಗೆ ತಾನೆ ಆನಂದ ವಾಗಲಿಕ್ಕಿಲ್ಲ ?

ಇನ್ನು ಚಂದಾದಾರರಿಗೆ ಕೊನೆಯದಾಗಿ ನೂರು-ನೂರೈವತ್ತು ಪುಟದ ಒಂದು ಪುಸ್ತಕವನ್ನು ಡಿಶಂಬರ್ ಮೊದಲನೆ ವಾರದಲ್ಲಿ ಸಲ್ಲಿಸಿದರೆ ಈ ವರ್ಷದ ಎಲ್ಲ ಪುಸ್ತಕಗಳನ್ನೂ ಸಲ್ಲಿಸಿದಂತಾಗುವದು. ಯಾವ ಪುಸ್ತಕವೆಂಬುದನ್ನು ಇನ್ನೂ ನಿರ್ಧರಿಸಿಲ್ಲ. " ಹಬ್ಬಿದ ಬಳ್ಳಿ " ದೊಡ್ಡದಾಗುವದರಿಂದ ಅದನ್ನು ಮುಂದಿನ ವರ್ಷದ ಪ್ರಥಮ ಕಿರಣವನ್ನಾಗಿ ಪ್ರಕಟಿಸಬೇಕೆಂದು ಮಾಡಿದ್ದೇವೆ. ಈ ಮಾರ್ಪಾಟನ್ನು ಚಂದಾದಾರರು ಮನ್ನಿಸುವರೆಂದು ನಂಬಿದ್ದೇವೆ.

—ಪ್ರಕಾಶಕ

ಪ್ರತಿಭಾ ಗ್ರಂಥಮಾಲೆಯ ಬಿಡಿ ಮುತ್ತಾಗಿ ಬೇಗನೆ ಪ್ರಕಟವಾಗಲಿದೆ !!!

# ಸಂಗ್ರಾಮ

## ಅ. ನ. ಕೃಷ್ಣರಾಯರ ಮತ್ತೊಂದು ಹೊಸ ಕಾದಂಬರಿ

ಸುಮಾರು ೨೫೦ ಪುಟಗಳು.  ಬೆಲೆ: ೩—೦—೦

ಶ್ರೀ. ಅ. ನ. ಕೃ. ಅವರು ೧೯೩೪ ರಿಂದ ಬರೆಯುತ್ತಿರುವ ‘ ಕಲಾವಿದರ ಮಾಲೆ ’ ಯ ಕೊನೆಯ ಕಾದಂಬರಿ. ಜಡ ಮಣ್ಣಿನಲ್ಲಿ ಚೇತನವನ್ನ ರಳಿಸುತ್ತಿದ್ದ ಒಬ್ಬ ಶಿಲ್ಪಿಯ ಅದ್ಭುತ ರಮ್ಯ ಜೀವನ ಸಂಗ್ರಾಮದ ಕಥೆ. ಪ್ರತಿಭೆಯ ಪ್ರಚಂಡ ಆಘಾತಕ್ಕೆ ಸಿಲುಕಿದ ಕಲಾವಿದ ಪತನ, ಪ್ರಗತಿಗಳ ಮಧ್ಯೆ ಸಿಕ್ಕಿ ಸಂಕಟ ಪಡುತ್ತಾನೆ. ಹೆಣ್ಣು ಮಹಾಮಾಯೆಯೂ ಹೌದು; ಮಹಾದೇವಿಯೂ ಹೌದು. ಹೆಣ್ಣಿನ ಈ ಎರಡು ಸ್ವರೂಪ ಶಿಲ್ಪಿಯ ಜೀವನದ ಮೇಲೆ, ಕಲೆಯ ಮೇಲೆ ಬೀರುವ ಪ್ರಭಾವ ಕಾದಂಬರಿಯ ಜೀವನಾಡಿಯಾಗಿದೆ.

ರಿಯಾಯತಿ: ಪ್ರತಿಭಾ ಗ್ರಂಥಮಾಲೆಯ ಚಂದಾದಾರರಿಗೆ ಈ ಪುಸ್ತಕ ಬೇಕಾಗಿದ್ದಲ್ಲಿ ೨ ರೂ. ೧೨ ಆಣೆ ಮನಿಯಾರ್ಡರು ಕಳಿಸಬೇಕು. ಆದಕ್ಕೆ ತಗಲುವ ೪ ಆಣೆ ಅಂಚೇವೆಚ್ಚವನ್ನು ಕೂಡ ನಾವೇ ವಹಿಸಿಕೊಂಡು ಅದು ಪ್ರಕಟವಾದೊಡನೆ ರವಾನಿಸುತ್ತೇವೆ.

ಪ್ರಕಾಶಕರು:

**ಪ್ರತಿಭಾ ಗ್ರಂಥಮಾಲೆ,**

**ಧಾರವಾಡ.**

# ಮು ನ್ನು ಡಿ .

ಲಲಿತ ಕಲೆಗಳು ಕೇವಲ **ವಿಹಾರ** ಸಾಧನವಾಗಿರದೆ **ವಿಕಾಸ** ಸಾಧನಗಳಾಗಿವೆ ಎನ್ನುವುದು ನನ್ನ ದೃಢ ನಂಬಿಕೆ. ಕಲೆಯಿಂದ ಆತ್ಮಸಂಸ್ಕಾರವಾಗುವುದರ ಜತೆಗೆ ಆತ್ಮದರ್ಶನವೂ ಆಗುತ್ತದೆ. ಭಗವಂತನನ್ನು ರಸವೆಂದು ( ' ರಸೋ ವೈ ಸಹ ' ) ಸಂಬೋಧಿಸಿ ಉಪನಿಷತ್ತಿನ ಋಷಿ ಈ ಸತ್ಯವನ್ನು ನಿತ್ಯ ಮಾಡಿದ್ದಾನೆ.

ಕಲಾನಿಧಿಗೆ ಅನುಭಾವದ ಮರೆವೊಗದಿದ್ದರೆ ಗತ್ಯಂತರವೇ ಇಲ್ಲ. ಅನುಭಾವ ಪಂಥಕ್ಕೆ ಸೇರಿದ ಭಾಗವತರು, ಶಾಕ್ತರು, ಶೈವರು, ಸೂಫಿಗಳು, ಕ್ರೈಸ್ತ ಸಂತರು ಸೌಂದರ್ಯೋಪಾಸಕರಾಗಿದ್ದರೆಂಬುದು ಗಮನಾರ್ಹವಾದ ವಿಷಯ.

ಕಲಾಸಾಧನೆಗೆ ನಿಷ್ಠೆ, ಶ್ರದ್ಧೆ ಮುಖ್ಯವಲ್ಲದೆ ಸಾಧನ ಸಾಮಗ್ರಿ ಮುಖ್ಯವಲ್ಲ. ಸಾಧಕ ಕವಿಯಾಗಿರಬಹುದು, ಕಲಾವಿದನಾಗಿರಬಹುದು. ಅವನು ಯಾವ ಮಾರ್ಗದಲ್ಲಿ ನಡೆದರೂ ಕೊನೆಗೆ ಸತ್-ಚಿತ್-ಆನಂದದ ಗುರಿಯನ್ನೇ ಮುಟ್ಟಬೇಕು.

ಬಗೆಬಗೆಯ ಮಾರ್ಗಗಳನ್ನನುಸರಿಸಿದ ಕಲಾವಿದರ ಕಷ್ಟ, ಸುಖಗಳನ್ನು ನಾನು ೧೯೩೪ ರಿಂದ ಚಿತ್ರಿಸಲಾರಂಭಿಸಿದೆ. ಚಿತ್ರಕಲೆಯನ್ನು ಕುರಿತ ನನ್ನ ' **ಉದಯರಾಗ** ' ( ೧೯೩೪ ); ಸಂಗೀತಕಲೆಯನ್ನು ಕುರಿತ ನನ್ನ ' **ಸಂಧ್ಯಾರಾಗ** ' ( ೧೯೩೫ ); ಸಾಹಿತ್ಯಕಲೆಯನ್ನು ಕುರಿತ ನನ್ನ ' **ಸಾಹಿತ್ಯರತ್ನ** ' ( ೧೯೪೩ ); ನಾಟ್ಯಕಲೆಯನ್ನು ಕುರಿತ ನನ್ನ ' **ನಟ-ಸಾರ್ವಭೌಮ** ' ( ೧೯೪೬ ) ಈಗಾಗಲೇ ಪ್ರಕಟವಾಗಿವೆ. ನೃತ್ಯಕಲೆಯನ್ನು ಕುರಿತ ನನ್ನ ' **ಬಣ್ಣದ ಬದುಕು** ' ( ೧೯೫೩ ) ಈಗ ಪ್ರಕಟವಾಗುತ್ತಿದೆ. ಸದ್ಯದಲ್ಲಿಯೇ ಈ ಮಾಲೆಯ ಕೊನೆಯ ಗ್ರಂಥ- ಶಿಲ್ಪಕಲೆಯನ್ನು ಕುರಿತ ನನ್ನ ' **ಸಂಗ್ರಾಮ** ' ಪ್ರಕಟವಾಗುವುದೆಂದು ತಿಳಿಸಲು ಸಂತೋಷಿಸುತ್ತೇನೆ.

ಕಲೆಯ ದಾರಿಯಲ್ಲಿ ಹೂವು ಹಾಸಿರುವುದಿಲ್ಲ – ಮುಳ್ಳು ಹಾಸಿರುತ್ತದೆ. ಕಲಾವಿದ ದೈಹಿಕ ಕಷ್ಟ-ನಷ್ಟಗಳನ್ನಲ್ಲದೆ ಹಲವಾರು ಮಾನಸಿಕ ಕಷ್ಟ-ನಷ್ಟ ಗಳನ್ನೂ ಅನುಭವಿಸಬೇಕಾಗುತ್ತದೆ. ಅಳ್ಕೆದೆಯುವರೂ, ಅಲ್ಪತೃಪ್ತರೂ ದುರ್ದಮವಾದ ಕಲೆಯ ಕೋಟೆಯನ್ನು ಭೇದಿಸಲಸಮರ್ಥರಾಗುತ್ತಾರೆ. ' ಬಣ್ಣದ ಬದುಕು ' ಕಾದಂಬರಿಯಲ್ಲಿ ಈ ನಾಟ್ಯದ ಎರಡು ಮುಖವನ್ನೂ ಕೊಟ್ಟಿದ್ದೇನೆ. ಅಲ್ಪಕ್ಕೆ ಆಸೆಪಟ್ಟುಕೊಂಡು ಕಲೆಯ ಭವ್ಯಾದರ್ಶದಿಂದ ವಿಮುಖನಾದ ಯೋಗಭ್ರಷ್ಟ ಕೀರ್ತಿ; ಆಸೆಗಳನ್ನು ಮೆಟ್ಟಿಕ್ಕಿ ಆದರ್ಶಕ್ಕಾಗಿ ಸರ್ವಸ್ವವನ್ನೂ ಬಲಿದಾನವಾಗಿ ಅರ್ಪಿಸಿದ ಯೋಗಿನಿ ಕಲ್ಪನಾ.

ನೃತ್ಯಕಲೆಗೆ ಸಂಬಂಧಪಟ್ಟ ತಂತ್ರವಿಷಯಗಳಿಗೆ ನಾನು ಗೌಣ ಸ್ಥಾನ ಕೊಟ್ಟಿದ್ದೇನೆ. ನಾನು ಬರೆಯುತ್ತಿರುವುದು ಕಾದಂಬರಿಯೇ ವಿನಾ ಭಾರ ತೀಯ ನೃತ್ಯ ಸಂಪ್ರದಾಯಗಳ ಮೇಲೆ ಡಾಕ್ಟರೇಟ್ ಥೀಸಿಸ್ ಅಲ್ಲ. ಕಥೆಯ ನಡೆಗೆ ಅವಶ್ಯಕವೆನಿಸಿದೆಡೆಗಳಲ್ಲಿ ತಂತ್ರವಿಷಯವೂ ಪ್ರಾಸಂಗಿಕವಾಗಿ ಬಂದಿದೆ.

ಶಾಸ್ತ್ರ, ಕಲೆ, ಸಂಪ್ರದಾಯ ದೃಷ್ಟಿಯಿಂದ ' ಭರತ ನಾಟ್ಯಕಲೆ ' ಭಾರ ತೀಯರ ದಿವ್ಯ ಸಂಪತ್ತು. ವ್ಯಾಪಾರೀ ಮನೋಭಾವದ ಕಲಾವಂತರ ಕೈಗೆ ಸಿಕ್ಕಿ ಭರತ ನಾಟ್ಯಕ್ಕೆ ಒದಗಿರುವ ದುರ್ವಿಧಿಯನ್ನೂ ಚಿತ್ರಿಸಿದ್ದೇನೆ. ನನ್ನ ಇತರ ಕಾದಂಬರಿಗಳು ಕನ್ನಡ ಓದುಗರ ಸಂತೋಷಕ್ಕೆ ಕಾರಣವಾದಂತೆ ಈ ಕಾದಂಬರಿಯೂ ಆಗುತ್ತದೆಂದು ನಂಬಿದ್ದೇನೆ.

ಈ ಕಾದಂಬರಿಯನ್ನು ಪ್ರಕಟಿಸಲು ವಿಶೇಷ ಉತ್ಸಾಹದಿಂದ ಮುಂದೆ ಬಂದಿರುವ ' ಪ್ರತಿಭಾ ಗ್ರಂಥಮಾಲೆ ' ಯ ಒಡೆಯರಾದ ಶ್ರೀ. ಭಾಲಚಂದ್ರ ಘಾಣೇಕರರವರ ವಿಶ್ವಾಸಕ್ಕೆ ಕೃತಜ್ಞತೆ ಸಮರ್ಪಿಸುತ್ತೇನೆ.

' ಅನ್ನಪೂರ್ಣ '
ವಿಶ್ವೇಶ್ವರಪುರಂ, ಬೆಂಗಳೂರು - ೪
೬ ಏಪ್ರಿಲ್ ೧೯೫೩.

ಅ. ನ. ಕೃ.

# ಪರಿವಿಡಿ

# ಬಣ್ಣದ ಬದುಕು

## ೧. ಕೀರ್ತಿ

### ೧

ಕೀರ್ತಿಚಂದ್ರನ ಮನೆಯಲ್ಲಿ ಯಾವಾಗಲೂ ಮದುವೆಯ ಮನೆಯ ಸಡಗರ. ಯಾರಿಗೂ ಒಂದು ಗಳಿಗೆ ಪುರುಸತ್ತಿಲ್ಲ. ಅಲ್ಲಿದ್ದ ಹತ್ತಾರು ಜನಗಳ ಕೆಲಸವೇನೆಂಬುದು ಯಾರಿಗೂ ತಿಳಿಯದು; ಅವರಿಗೂ ತಿಳಿಯದು. ಸುಂದರ ಚಿತ್ರಗಳು, ಶಿಲ್ಪಗಳು, ವೇಷಭೂಷಣಗಳು, ವಾದ್ಯಗಳು, ಗ್ರಂಥಗಳನ್ನು ಸಂಗ್ರಹಿಸುವುದು ಕೀರ್ತಿಚಂದ್ರನಿಗೆ ಹವ್ಯಾಸವಾಗಿದ್ದಂತೆ, ಬಗೆಬಗೆಯ ಜನಗಳನ್ನು ಸಂಗ್ರಹಿಸುವುದೂ ಅವನಿಗೆ ರೂಢಿಯಾಗಿತ್ತು. ದೇಶೀಯರಲ್ಲದೆ ಅಮೇರಿಕಾ, ಇಂಗ್ಲೆಂಡ, ಆಸ್ಟ್ರೇಲಿಯಾದ ಜನಗಳೂ ಅವನ ನೃತ್ಯಶಾಲೆಯಲ್ಲಿ ಓಡಿಯಾಡುತ್ತಿದ್ದರು. ಕೆಲವು ಸಿಂಧಿ, ಗುಜರಾಥಿ, ಪಾರ್ಸಿಗಳಿಗೆ ಕೀರ್ತಿಚಂದ್ರನ ಮನೆ ಸ್ವಗೃಹವಾಗಿತ್ತು.

ಕೀರ್ತಿಚಂದ್ರನ ಆದಾಯ, ವೆಚ್ಚದ ಪ್ರಮಾಣದಿಂದ ' ಕಾಕ್ಸ್‌ಟೌನಿ ' ನಲ್ಲಿ ಅಂಥ ಭವ್ಯವಾದ ಮನೆಯನ್ನು ಅವನು ಕೊಳ್ಳಲು ಸಾಧ್ಯವೇ ಇರಲಿಲ್ಲ. ಏರು ಬೆಲೆಯ ಈ ದಿವಸದಲ್ಲಿ ಅವನ ' ಏವನ್ ವಿಲ್ಲಾ ' ( Avon Villa ) ಗೆ ಯಾರುಬೇಕಾದರೂ ಒಂದೂವರೆಲಕ್ಷರೂಪಾಯಿ ಕೊಡಲು ಸಿದ್ಧರಾಗಿದ್ದರು.

ಮೂಲಗೃಹವೇ ಸಾಕಷ್ಟು ವಿಶಾಲವಾಗಿದ್ದಿತು. ಕೆಳಗಿನ ಸಾಲಿನಲ್ಲಿ ಹನ್ನೆರಡು ಕೋಣೆಗಳಿದ್ದವು. ಪ್ರತಿಯೊಂದು ಕೋಣೆಗೂ ಅನುಬಂಧವಾಗಿ ಒಂದು ಸಣ್ಣ ಕೋಣೆ, ಸ್ನಾನಗೃಹ. ಇವುಗಳಲ್ಲದೆ ಅಡಿಗೆ, ಊಟದ ಮನೆ ಪ್ರತ್ಯೇಕವಾಗಿದ್ದಿತು. ಮಹಡಿಯ ಮೇಲಣ ಭಾಗವನ್ನೆಲ್ಲಾ ಕೀರ್ತಿಚಂದ್ರ ತನಗಾಗಿಯೇ ಇಟ್ಟುಕೊಂಡಿದ್ದ. ಅವನ ಪುಸ್ತಕ ಭಂಡಾರ, ಕಲಾಸಂಗ್ರಹ, ವಾದ್ಯಸಂಗ್ರಹವೂ ಮಹಡಿಯ ಮೇಲೇ ಇದ್ದವು.

## ೨

ಕೀರ್ತಿಚಂದ್ರನ ತಂದೆ ಕೃಷ್ಣಚಂದ್ರರು ಚಿಕ್ಕ ವಯಸ್ಸಿನಲ್ಲಿಯೇ ಮಲಯಾ ಸೇರಿದರು. ಒಂದು ರಬ್ಬರ್ ಪ್ಲಾಂಟೇಷನ್ನಿನಲ್ಲಿ ನೌಕರಿಗೆ ಸೇರಿಕೊಂಡು, ಕಾಲಕ್ರಮೇಣ ತಾವೇ ಒಂದು ಪ್ಲಾಂಟೇಷನ್ ಕೊಂಡುಕೊಂಡರು. ಮಲೆಯಾದಲ್ಲಿ ಒಬ್ಬ ಇಂಗ್ಲಿಷ ಪ್ಲಾಂಟರಿನ ದೇಶೀ ಹೆಂಡತಿಗೆ ಜನಿಸಿದ್ದ ಕನ್ಯೆಯೊಡನೆ ಕೃಷ್ಣಚಂದ್ರರ ವಿವಾಹವೂ ಆಯಿತು. ಕರುಣ ಅವರ ಮೊದಲನೆಯ ಮಗಳು. ಅವಳು ಹುಟ್ಟಿದ ನಾಲ್ಕು ವರ್ಷಕ್ಕೆ ಕೀರ್ತಿ ಹುಟ್ಟಿದ. ಕೀರ್ತಿ ಹುಟ್ಟಿದ ಎರಡು ವರ್ಷಗಳ ತರುವಾಯ ಕೃಷ್ಣಚಂದ್ರರ ಹೆಂಡತಿ ಮತ್ತೊಂದು ಮಗುವಿನ ಹೆರಿಗೆಯಲ್ಲಿ ಕಾಲವಶರಾದರು. ಮನೆಯೂಳಿಗಕ್ಕೆ ಇದ್ದ ಜೆಸ್ಸಿ ಕರುಣ, ಕೀರ್ತಿ ಇಬ್ಬರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದಳು.

ಜೆಸ್ಸಿ, ಕರುಣಾ, ಕೀರ್ತಿ ಇವರ ತಾಯಿಯಾಗಿದ್ದುದಲ್ಲದೆ ಕೃಷ್ಣಚಂದ್ರರ ಅನಧಿಕೃತ ಪತ್ನಿಯೂ ಆಗಿದ್ದಳು. ಮಲೆಯಾದ ಸಾಮಾಜಿಕ ಜೀವನ ಇಬ್ಭಾಗವಾಗಿತ್ತು. ಹೊರಗಿನಿಂದ ಬಂದು ಪ್ಲಾಂಟೇಷನ್ನುಗಳು ಕೊಂಡೋ ದತ್ತಾಪಹಾರ ಮಾಡಿಯೋ ಶ್ರೀಮಂತಿಕೆಯ ಶಿಖರವನ್ನೇರಿದ್ದ ಬಿಳಿಯರು. ಅವರ ತೋಟಗಳಲ್ಲಿ ಕೂಲಿ ಮಾಡಿಕೊಂಡು, ಅವರ ಚಿತ್ರಹಿಂಸೆಯನ್ನು ಸಹಿಸಿಕೊಳ್ಳುತ್ತಿದ್ದ ದೇಶೀಯರು. ಸಂಸಾರವನ್ನು ಇಂಗ್ಲೆಂಡಿನಲ್ಲಿಯೇ ಬಿಟ್ಟು ಬರುತ್ತಿದ್ದ ಪ್ಲಾಂಟರುಗಳು ದೇಶೀ ಸ್ತ್ರೀಯರ—ಜನಾನಾಗಳನ್ನಿಟ್ಟುಕೊಂಡಿದ್ದರು. ಪ್ಲಾಂಟರುಗಳ ಸಮೂಹದಲ್ಲಿ ಇದು ದೂಷ್ಯವಾಗಿರಲಿಲ್ಲ. ಆದರೆ

ದೇಶೀಯರು ಈ ಅತ್ಯಾಚಾರಕ್ಕೆ ಕನಲುತ್ತಿದ್ದರು. ಆಗಾಗ್ಗೆ ಒಬ್ಬೊಬ್ಬ ದೇಶೀಯ ಬಿಳಿಯರ ಮೇಲೆ ಕೈಮಾಡಲು ಧೈರ್ಯಮಾಡಿ ಪ್ರಾಣ ಒಪ್ಪಿಸುತ್ತಿದ್ದ. ಬಿಳಿಯರು ನಿರ್ದಾಕ್ಷಿಣ್ಯವಾಗಿ ' ಬಂದೂಕ ಕಾಯಿದೆ ' ಪ್ರಯೋಗಿಸಿ ದೇಶೀಯರನ್ನು ಹತೋಟಿಯಲ್ಲಿಟ್ಟುಕೊಂಡಿದ್ದರು. ಕಾಯಿದೆ, ಕಾನೂನು, ಸರ್ಕಾರ ಎಲ್ಲವೂ ಬಿಳಿಯರ ಆಧೀನದಲ್ಲಿತ್ತು. ದೇಶೀಯರಲ್ಲಿ ಅತೃಪ್ತಿಯ ಕಿಡಿ ಒಳಗೇ ಕವರುತ್ತಿತ್ತು.

ಕೃಷ್ಣಚಂದ್ರರೂ ಬಿಳಿಯರ ಮೇಲ್ಪಂಕ್ತಿಯನ್ನೇ ಅನುಸರಿಸಿದ್ದರು. ಆದರೆ ಬಿಳಿಯರಂತೆ ದೇಶೀಯರ ಮೇಲೆ ಅತ್ಯಾಚಾರ ಮಾಡುವುದಕ್ಕೆ ಕೃಷ್ಣಚಂದ್ರರು ಹೋಗಿರಲಿಲ್ಲವಾದ್ದರಿಂದ ದೇಶೀಯರಿಗೆ ಅವರ ಬಗ್ಗೆ ಗೌರವ, ಅಭಿಮಾನಗಳಿದ್ದವು.

ದೇಶೀಯರಲ್ಲಿ ಕವರುತ್ತಿದ್ದ ಕ್ರಾಂತಿಜ್ವಾಲೆಯ ವಿಷಯ ಕೃಷ್ಣಚಂದ್ರರಿಗೆ ಜೆನ್ನಿಯ ಮೂಲಕ ತಿಳಿಯುತ್ತಿತ್ತು. ಮಲೆಯಾದ ಋಣಾನುಬಂಧ ತಮಗೂ ಇತರ ಪ್ಲಾಂಟರುಗಳಿಗೂ ಬಹಳ ದಿವಸ ನಡೆಯಲು ಸಾಧ್ಯವಿಲ್ಲವೆಂದು ತಿಳಿದ ಕೃಷ್ಣಚಂದ್ರರು ಸಿಂಗಾಪುರದ ' ಲಾಯಿಡ್ಸ್ ಬ್ಯಾಂಕಿ ' ನಲ್ಲಿ ಲೆಕ್ಕ ತೆಗೆದು ಹಣ ಶೇಖರಿಸತೊಡಗಿದರು.

ಬಿಳಿಯ ಪ್ಲಾಂಟರುಗಳಲ್ಲಿ ರಿಚರ್ಡ್ ಪೀಲ್‌ಕ್ರೈಟನ ನಡತೆ ಕಂಡು ಉಳಿದ ಪ್ಲಾಂಟರುಗಳೇ ಹೇಸುತ್ತಿದ್ದರು. ಸದಾ ಮದ್ಯಪಾನಾಸಕ್ತನಾಗಿದ್ದ ರಿಚರ್ಡ್ ತುಂಬು ಯೌವನದ ಯಾವ ಮಲೆಯಾ ಹೆಣ್ಣುಮಗಳ ಮೇಲೂ ಕೈಮಾಡಲು ಹಿಂಜರಿಯುತ್ತಿರಲಿಲ್ಲ.

ರಿಚರ್ಡ್ ಬಹಳ ದಿವಸಗಳಿಂದ ಮಾಲಾ ಮೇಲೆ ಕಣ್ಣಿಟ್ಟಿದ್ದ. ಮಾಲನನ್ನು ನೋಡಿದಾಗಲೆಲ್ಲಾ ರಿಚರ್ಡ್ ಭೂಮಿಗಿಳಿದು ಹೋಗುತ್ತಿದ್ದ. ಅವಳ ಒಲವನ್ನು ದೊರಕಿಸಿಕೊಳ್ಳಲು ಅವನು ಮಾಡಿದ ಪ್ರಯತ್ನವೆಲ್ಲಾ ನಿಷ್ಫಲವಾಗಿತ್ತು. ರಿಚರ್ಡನ ದುರುದ್ದೇಶವನ್ನು ಬಲ್ಲ ಮಾಲಾ ಅವನಿಂದ ಆದಷ್ಟು ದೂರವಿರುತ್ತಿದ್ದಳು.

ರಿಚರ್ಡನ ತೋಟದಲ್ಲಿ ಕೆಲಸ ಮಾಡುತ್ತಿದ್ದ ಮಹಾದೋ ಮತ್ತು ಮಾಲಾ ಪರಸ್ಪರ ಪ್ರೀತಿಸುತ್ತಿದ್ದರು. ಅವರ ಲಗ್ನವನ್ನು ಇಡೀ ದೇಶೀಯ ಕೂಲಿಕಾರ ಜನತೆ ಅತ್ಯಾಸಕ್ತಿಯಿಂದ ಎದುರು ನೋಡುತ್ತಿತ್ತು. ಮಹಾದೋ

ಲಗ್ನಕ್ಕೆ ಪುಡಿಕಾಸು ಕೂಡಿಸಿಕೊಳ್ಳುತ್ತಿದ್ದ.

ಕೂಲಿಗಾರರ ಮೇಲೆ ಪ್ಲಾಂಟರುಗಳಿಗೆ ಸಂಪೂರ್ಣ ಸ್ವಾಮ್ಯವಿದ್ದುದರಿಂದ ಧಣಿಯ ಅಪ್ಪಣೆ ಪಡೆಯದೆ ಕೂಲಿಗಾರರು ಏನೂ ಮಾಡಲು ಸಾಧ್ಯವಿರಲಿಲ್ಲ. ಮಾಲಾಳನ್ನು ಲಗ್ನವಾಗಲು ಅಪ್ಪಣೆ ಕೇಳಹೋಗಿ ಮಹಾದೋ ಒಂದು ಬಾರಿ ರಿಚರ್ಡ್‌ನ ಚಾವಟಿಯ ಪೆಟ್ಟಿಗೆ ಸಿಕ್ಕಿದ್ದ; ಇನ್ನೊಮ್ಮೆ ರಿಚರ್ಡ್ ತನ್ನ ರಿವಾಲ್ವರ ತೆಗೆದು ಬೆದರಿಸಿ ಕಳಿಸಿದ್ದ. ಧಣಿಯ ಅಪ್ಪಣೆ ಸಿಕ್ಕಲಿ ಬಿಡಲಿ ಮಾಲಳನ್ನು ಮದುವೆಯಾಗಲು ಮಹಾದೋ ನಿರ್ಧರಿಸಿದ್ದ. ಗುಪ್ತ ವಿವಾಹಕ್ಕೆ ಮಾಲಳೂ ಅನುಮತಿಯಿತ್ತಿದ್ದಳು. ಮಾಲಳಿಂದ ತಿರಸ್ಕೃತನಾಗಿದ್ದ ಒಬ್ಬ ಪೇತೀ ಪ್ರಣಯಿ ರಮಾನೋ ಈ ಸುದ್ದಿಯನ್ನು ರಿಚರ್ಡನಿಗೆ ತಿಳಿಸಲು ತಡ ಮಾಡಲಿಲ್ಲ. ಅದೇ ರಾತ್ರಿ – ಮಾಲಾ ಮಲಗಿದ್ದಾಗ ನಾಲ್ಕು ಜನ ಪುಂಡಾಡಿಗರು ಬಂದು, ಬಾಯಿಗೆ ಬಟ್ಟೆ ತುರುಕಿ, ಕೈಕಾಲು ಕಟ್ಟಿ ಮಾಲಳನ್ನು ಹೊತ್ತುಕೊಂಡು ಹೋದರು. ರಿಚರ್ಡ್ ತನ್ನ ಪೈಶಾಚಲಾಲಸೆಯನ್ನು ತೀರಿಸಿಕೊಂಡ.

ಮಾರನೆಯ ದಿನ ತೋಟದಲ್ಲಿ ಕೆಲಸ ಮಾಡುತ್ತಿದ್ದ ಮಹಾದೋ ಬಳಿಗೆ ಮಾಲಾ ಮೆಲ್ಲನೆ ಬಂದು ತನ್ನ ದುರಂತ ಕಥೆಯನ್ನು ನಿವೇದಿಸಿಕೊಂಡಳು. ಮಹಾದೋ ಹಲ್ಲುಹಲ್ಲು ಕಡಿಯುತ್ತ ಸೊಂಟದಲ್ಲಿದ್ದ ಚೂರಿಯ ಮೇಲೆ ಕೈಯಿಟ್ಟ. ಮಾಲಾ ಪಿಸು ಮಾತಿನಲ್ಲಿ

‘ ಈ ರಾತ್ರಿ ಬರಬೇಕೆಂದು ಹೇಳಿದ್ದಾನೆ. ’

ಮಹಾದೋ ಕ್ಷಣಕಾಲ ಆಲೋಚಿಸಿ

‘ ಹೋಗು. ’

ಮಾಲಾ ಕಂಬನಿಗರೆಯುತ್ತ

‘ ನೀನೂ ಹೀಗೆ ಹೇಳುವೆಯಾ ? ’

‘ ಹೋಗು – ನಿನ್ನ ಹಿಂದೆ ನಾನೂ ಬರುತ್ತೇನೆ. ’

‘ ಫಿರಂಗಿಯ ಸೊಂಟದಲ್ಲಿ ಯಾವಾಗಲೂ ರಿವಾಲ್ವರ್ ಇರುತ್ತದೆ. ’

‘ ಅದನ್ನು ನಾನು ಬಲ್ಲೆ. ಅವನು ಬೆಲ್ಟ್ ತೆಗೆದು ದೂರ ಇಡುವಂತೆ ಮಾಡು. ’

‘ ನೀನು.... ’

'ನಾನು ಒಳಗೆ ಬಂದ ಕೂಡಲೆ ಜೆಲ್ಸ್ ನೀನು ವಶಪಡಿಸಿಕೊಳ್ಳ ಬೇಕು.'

'ಮುಂದೆ.... ?'

'ನೀನೇ ನೋಡುವೆಯಂತೆ – ಫಿರಂಗಿಯ ಹೊಟ್ಟೆ ಬಗೆದು ಅವನ ಕರುಳು ತೆಗೆದು ನಿನಗೆ ಹಾರ ಹಾಕುತ್ತೇನೆ.'

'ಫಿರಂಗಿಯ ಮನೆಯಲ್ಲಿ ನಾಯಿಗಳಿವೆ.'

'ಇರಲಿ. ಬಟ್ಲರ್ ನಮ್ಮವನು.'

'ಉಳಿದ ಫಿರಂಗಿಗಳು ನಮ್ಮನ್ನು ಬಿಡುತ್ತಾರೆಯೇ?'

'ಕೃಷ್ಣಚಂದ್ರರು ಫಿರಂಗಿಗಳ ಹಾಗಲ್ಲ – ತುಂಬ ಒಳ್ಳೆಯವರು. ಅವರು ಸಹಾಯ ಮಾಡುತ್ತಾರೆ. ನಾವು ಸಿಂಗಾಪುರಕ್ಕೆ ಹೊರಟು ಹೋಗೋಣ.'

'ಎಚ್ಚರದಿಂದಿರು.'

ರಾತ್ರಿ ಬರಬೇಕೆಂದು ರಿಚರ್ಡನಿಂದ ಮಾಲನಿಗೆ ನಿರೂಪ ಬಂದಿತು.

ಕತ್ತಲು ಹೆಪ್ಪುಗಟ್ಟಿದೆ. ಅರಣ್ಯದಲ್ಲಿ ಗಾಢ ಮೌನವಾವರಿಸಿದೆ. ಅಲ್ಲಲ್ಲಿ ಒಂದೊಂದು ನಾಯಿಯ ಆಲಾಪ; ಕಪ್ಪೆಗಳ ವಟವಟ ಶಬ್ದ.

ಮಾಲಾ ಮನೆಬಿಟ್ಟು ಮೆಲ್ಲನೆ ಹೊರಟಳು. ಅವಳಿಗೊಮ್ಮೆ ಕಾಣಿಸಿ ಕೊಂಡು ಮಹಾದೊ ಮರೆಯಾದ. ಮಾಲಾ ಧೈರ್ಯವಾಗಿ ಅಡಿಯಿಟ್ಟಳು. ಸಮೀಪದಲ್ಲಿ ಮಹಾದೊ ತನ್ನನ್ನು ಹಿಂಬಾಲಿಸುತ್ತಿರುವನೆಂಬ ನಂಬಿಕೆ ಅವಳ ಮನಸ್ಸಿಗೆ ಧೈರ್ಯವನ್ನಿತ್ತಿತ್ತು.

ರಿಚರ್ಡ್ ಪೂರಾ ಕುಡಿದು ಕುಳಿತಿದ್ದ. ಮಾಲಾ ಮುಖ ನೋಡಿದ ಕೂಡಲೆ ಅವನ ಆನಂದಕ್ಕೆ ಪಾರವೇ ಇರಲಿಲ್ಲ. ತೊಟ್ಟಿಯಲ್ಲಿ ಉರಿಯುತ್ತಿದ್ದ ದೀಪದ ಬತ್ತಿಯನ್ನಿಳುಹಿ ಮಾಲನ ಸಮೀಪಕ್ಕೆ ಬಂದ.

ಮಾಲಾ ಅವನಿಂದ ದೂರ ಸರಿಯಲಿಲ್ಲ.

ರಿಚರ್ಡ್ ಅವಳನ್ನಪ್ಪಿದಾಗ ಮಾಲಾ 'ಹಾ!' ಎಂದಳು; ರಿಚರ್ಡ್ ಗಾಬರಿಯಾಗಿ

'ಯಾಕೆ ಡಾರ್ಲಿಂಗ್ – ಏನಾಯಿತು?' ಎಂದು ಕೇಳಿದ.

ಅವನ ಸೊಂಟದಲ್ಲಿದ್ದ ರಿವಾಲ್ವರ್ ಕಡೆ ಕೈತೋರಿ

'ಅದು – ಒತ್ತುತ್ತದೆ' ಎಂದಳು.

ರಿಚರ್ಡ್ಸ ನಸುನಗುತ್ತ ಸೊಂಟದಲ್ಲಿದ್ದ ರಿವಾಲ್ವರ್ ಬೆಲ್ಟನ್ನು ತೆಗೆದು ಗೋಡೆಗೆ ನೇತು ಹಾಕಿ ಬಂದು ಮಾಲನನ್ನಪ್ಪಿದ.

ಅದೇ ಸಮಯದಲ್ಲಿ ಮೆಲ್ಲನೆ ಮುಹಾದೋ ರೂಮಿನೊಳಗೆ ಪ್ರವೇಶಿಸಿದ. ಮುಹಾದೋ ನೆರಳು ಗೋಡೆಯ ಮೇಲೆ ಪ್ರತಿಬಿಂಬಿಸಿದ್ದನ್ನು ಕಂಡು ರಿಚರ್ಡ್ಸ ತನ್ನ ರಿವಾಲ್ವರ್ ಬೆಲ್ಟ್ ಕಡೆಗೆ ಧಾವಿಸಿದ. ಮಾಲಾ ಅಡ್ಡವಾಗಿ ನಿಂತಳು.

ಮುಹಾದೋ ಮಿಂಚಿನಂತೆ ಬಂದೆರಗಿದ. ಅವನ ಚೂರಿ ಒಂದೇ ಪೆಟ್ಟಿಗೆ ರಿಚರ್ಡ್ಸನ ಕುತ್ತಿಗೆ ಸೀಳಿತು. ರಿಚರ್ಡ್ಸ ಹಾಗೂ ಹೋರಾಡಿದ. ಮುಹಾದೋ ಅವನನ್ನು ನೆಲದ ಮೇಲೆ ಉರುಳಿಸಿಕೊಂಡು ಚೂರಿಯಿಂದ ಎದೆಯನ್ನಿರಿದ. ರಿಚರ್ಡ್ಸನ ರಾಕ್ಷಸ ದೇಹ ಮರದ ಕೊರಡಿನಂತೆ ನೆಲದ ಮೇಲೆ ಬಿದ್ದಿತು.

ಸ್ತಂಭೀಭೂತಳಾಗಿ ನಿಂತಿದ್ದ ಮಾಲನ ಕೈಹಿಡಿದುಕೊಂಡು ಮುಹಾದೊ ಪಕ್ಕದ ತೋಟಕ್ಕೆ ಎಳೆದೊಯ್ದ.

ಮುಹಾದೋ ಬಂದ ಸ್ಥಿತಿ ನೋಡಿ ಕೃಷ್ಣಚಂದ್ರರು ಅವಾಕ್ಕಾದರು. ಮುಹಾದೋ ನಡೆದುದೆಲ್ಲವನ್ನೂ ಆದ್ಯಂತವಾಗಿ ವರ್ಣಿಸಿ, ಕೃಷ್ಣಚಂದ್ರರ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡ.

ಕೃಷ್ಣಚಂದ್ರರು ಕಾಲವಿಳಂಬಕ್ಕೆ ಅವಕಾಶ ಕೊಡಲಿಲ್ಲ. ರಕ್ತಮಯವಾಗಿದ್ದ ಮುಹಾದೋ ಬಟ್ಟೆಗಳನ್ನು ತೆಗಿಸಿ, ಅವನಿಗೆ ಬೇರೆ ವಸ್ತ್ರಗಳನ್ನಿತ್ತರು. ಸಿಂಗಾಪುರದಲ್ಲಿದ್ದ ತಮ್ಮ ಮಿತ್ರರೊಬ್ಬರಿಗೆ ಕಾಗದ ಬರೆದುಕೊಟ್ಟು, ಮುಹಾದೊ ಕೈಗಿಷ್ಟು ಹಣ ಹಾಕಿ

'ಆದಷ್ಟು ಬೇಗ ಸಿಂಗಾಪುರ ಮುಟ್ಟಿಬಿಡು. ನಾಳೆ ನಿನ್ನ ಹುಡುಕಿಸಲೆತ್ನಿಸುತ್ತಾರೆ. ಶೋಧ ಒಂಭತ್ತು ಹತ್ತು ಗಂಟೆಗೆ ಮುಂಚೆ ಆರಂಭವಾಗಲಾರದು. ಆ ವೇಳೆಗೆ ನೀವು ಸಿಂಗಾಪುರ ಮುಟ್ಟಿರಬೇಕು.'

'ಇವರು ಯಾರು ?'

'ಸಿಂಗಾಪುರದ ಬ್ಯಾಂಕಿನ ಕ್ಯಾಷಿಯರ್. ನನ್ನ ಪರಮ ಮಿತ್ರ. ಆತ ಚೀಣಿ – ಪ್ರಾಣಕ್ಕೆ ಪ್ರಾಣ ಕೊಡುವ ಮನುಷ್ಯ.'

'ಸಿಂಗಾಪುರದಂಥ ಊರಿನಲ್ಲಿ ನಾನು ಅವರನ್ನು ಪತ್ತೆ ಮಾಡುವುದು

ಹೇಗೆ ? '

' ಏನೂ ಕಷ್ಟವಿಲ್ಲ. ಯಾವ ದೊಡ್ಡ ಅಂಗಡಿಗೆ ಹೋಗಿ— ಲಾಯಿಡ್ಸ್ ಬ್ಯಾಂಕಿನ ಚೆನ್‌ಚೆನ್ ಎಲ್ಲಿದ್ದಾರೆ ಎಂದು ಕೇಳಿದರೆ ಹೇಳುತ್ತಾರೆ. ಇನ್ನು ಹೊರಡಿ. '

' ಸಿಂಗಾಪುರ ಮುಟ್ಟಿದ ಕೂಡಲೆ ಕಾಗದ ಬರೆಸುತ್ತೇನೆ. ' .

' ಛೆ ! ಛೆ ! ಅದು ಮಾತ್ರ ಮಾಡಬೇಡ. ನಿನ್ನ ಕ್ಷೇಮಸಮಾಚಾರ ನನಗೆ ಚೆನ್‌ಚೆನ್ ತಿಳಿಸುತ್ತಾರೆ. '

ಕೃತಜ್ಞತೆಯಿಂದ ಮಾಲಾ, ಮಹಾದೋ ಇಬ್ಬರೂ ಕೃಷ್ಣಚಂದ್ರರ ಪಾದಗಳಿಗೆ ಮಣಿದು ಮುದ್ದಿಟ್ಟರು. ಕೃಷ್ಣಚಂದ್ರರು ಅವರನ್ನು ಹೃತ್ಪೂರ್ವಕ ವಾಗಿ ಹರಸಿದರು.

ಮಾರನೆಯ ದಿನ ಬೆಳಗ್ಗೆ ರಿಚರ್ಡ್ಸನ ಮನೆಯ ಬಳಿ ಬಂದ ಅವನ ಮೇಸ್ತ್ರಿಗಳು ಅಲ್ಲಿನ ದೃಶ್ಯ ಕಂಡು ಚಕಿತರಾದರು. ರಿಚರ್ಡ್ಸನ ನಾಯಿಗಳು ಸತ್ತು ಬಿದ್ದಿದ್ದವು. ಬಟ್ಲರನ ಮೈಮೇಲಣ ಬಟ್ಟೆಗಳೆಲ್ಲಾ ಜೂಲುಜುಲಾ ಗಿತ್ತು. ಅವನನ್ನು ಹೆಡೆಮುರಿ ಕಟ್ಟಿ ಒಂದೆಡೆ ಕೆಡವಿದ್ದರು. ಮೇಸ್ತ್ರಿಗಳು ಅವನ ಬಾಯಿಬಟ್ಟೆ ಬಿಚ್ಚಿ ಪ್ರಶ್ನಿಸಿದರು :

' ರಾತ್ರಿ ಯಾವುದೋ ಗುಂಪು ಬಂದು ನನ್ನನ್ನು ಹೊಡೆದು ಬಡಿದು ಕಟ್ಟಿ ಹಾಕಿದರು. ನಾಯಿಗಳಿಗೇನೋ ಆಹಾರ ಹಾಕಿದರು. ಅವು ತಿಂದು ಸತ್ತು ಬಿದ್ದವು. ಒಳಗೆ ನುಗ್ಗಿ ದೋಚಿಕೊಂಡು ಹೋದರು. ' ಎಂದು ಹೇಳಿದ.

ಮೇಸ್ತ್ರಿಗಳು ಒಳಹೊಕ್ಕು ನೋಡಿದರು. ರಿಚರ್ಡ್ ನೆಲದುದ್ದಕ್ಕೂ ಮಲಗಿದ್ದ. ಅವನ ಸುತ್ತ ರಕ್ತ ಕೋಡಿ ಹರಿದಿತ್ತು. ಮೇಸ್ತ್ರಿಗಳು ಗಾಬರಿ ಯಾಗಿ ಉಳಿದ ಬಿಳಿಯ ಪ್ಲಾಂಟರುಗಳನ್ನು ಬರಮಾಡಿಕೊಂಡರು. ಅವರ ಜತೆ ಕೃಷ್ಣಚಂದ್ರರೂ ಬಂದರು.

ಬಟ್ಲರ್ ಹೇಳಿದ ಕಥೆಯನ್ನು ಯಾರೂ ನಂಬಲಿಲ್ಲ. ಅವನ ಮೈ-ಮುರಿಯ ಬಡಿದು ಬಾಯಿ ಬಿಡಿಸಲೆತ್ನಿಸಿದರು. ಬಟ್ಲರನಿಂದ ಯಾವ ಸಹಾ ಯವೂ ದೊರೆಯಲಿಲ್ಲ. ಮಹಾದೋ ಗ್ಯಾಂಗಿನವರಿಗೂ ಇದೇ ಪಾಡಾ ಯಿತು. ಬಿಳಿಯ ಪ್ಲಾಂಟರುಗಳು ಬೇರೆ ಬೇರೆ ಗುಂಪುಗಳನ್ನು ವಿಂಗಡಿಸಿ.

ಶೋಧನೆಗಾರಂಭಿಸಿದರು. ಅವರ ನಾಯಿಗಳು ಅರಣ್ಯದ ಮೂಲೆ ಮೂಲೆಯನ್ನು ಕೆದಕತೊಡಗಿದವು.

ಬಿಳಿಯ ಪ್ಲಾಂಟರುಗಳ ಜತೆಯಲ್ಲಿಯೇ ಇದ್ದರೂ ಕೃಷ್ಣಚಂದ್ರರು ಯಾವದರಲ್ಲಿಯೂ ಉತ್ಸಾಹ ತೋರಿಸುತ್ತಿರಲಿಲ್ಲ. ಬಿಳಿಯರಾದರೂ ಅವರ ಬಗ್ಗೆ ಸಂಪೂರ್ಣ ನಂಬಿಕೆ ತಳೆದಿರಲಿಲ್ಲ. ರಿಚರ್ಡ್ಸನ ಅಪಮೃತ್ಯುವಿನಲ್ಲಿ ಕೃಷ್ಣಚಂದ್ರರಿಗೆ ಪಾಲು ಇಲ್ಲದಿದ್ದರೂ ಮಾಲಾ, ಮಹಾದೊ ಪರಾರಿಯಲ್ಲಿ ಕೃಷ್ಣಚಂದ್ರರ ಕೈವಾಡವಿತ್ತೆಂದು ಅವರು ನಂಬಿದ್ದರು. ಆದರೆ ಕೃಷ್ಣಚಂದ್ರರ ಮೇಲೆ ನೇರವಾಗಿ ಆಪಾದನೆ ಹೊರಿಸುವಂತಿರಲಿಲ್ಲ. ಅವರ ಶೀಲ, ಸ್ವಭಾವ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದ್ದುದಲ್ಲದೆ, ಕೂಲಿಗಾರರಿಗೆ ಅವರ ಬಗ್ಗೆ ವಿಶೇಷ ಭಕ್ತಿಯಿತ್ತು.

ಬಿಳಿಯ ಪ್ಲಾಂಟರುಗಳಿಂದ ಪ್ರೇರಿತನಾದ ರಮಾನೋ ಜೆಸ್ಸಿಯ ಮೂಲಕ ವಿಷಯ ಸಂಗ್ರಹಿಸಲೆತ್ನಿಸಿದ. ಮಹಾದೋ ನಡೆಸಿದ ಕೃತ್ಯಕ್ಕೆ ಅವನಿಗೆ ನೆರವು ನೀಡಿದವರು ಯಾರು? – ಮಹಾದೋ ಪರಾರಿಯಾಗಲು ಅವನಿಗೆ ಸಹಾಯ ಮಾಡಿದವರು ಯಾರು? – ಮಹಾದೋ ಮತ್ತು ಮಾಲಾ ಈಗ ಎಲ್ಲಿ ಅಡಗಿಕೊಂಡಿದ್ದಾರೆ? ಎನ್ನುವ ವಿಷಯಗಳ ಬಗ್ಗೆ ಜೆಸ್ಸಿಗೆ ಗೊತ್ತಿದೆಯೆಂದು ಅವನು ನಂಬಿದ್ದ. ಜೆಸ್ಸಿ ಬಾಯಿ ಬಿಡಲಿಲ್ಲ. ರಮಾನೋ ಚಟುವಟಿಕೆಗಳನ್ನರಿತ ಕೃಷ್ಣಚಂದ್ರರು ಅವನನ್ನು ಬೆದರಿಸಿ ಕಳಿಸಿದ್ದು ಮಾತ್ರವಲ್ಲದೆ ಬಿಳಿಯ ಪ್ಲಾಂಟರುಗಳಿಗೂ ಎಚ್ಚರ ಕೊಟ್ಟರು.

ಕೃಷ್ಣಚಂದ್ರರಿಗೂ ಬಿಳಿಯ ಪ್ಲಾಂಟರುಗಳಿಗೆ ಒಳಗೊಳಗೇ ಮಸೆಯುಲಾರಂಭಿಸಿತು.

ಮಹಾದೋ ಅವಿತುಕೊಂಡಿದ್ದ ಸ್ಥಳ ಹುಡುಕಿ ಅವನನ್ನು ಹಿಡಿದು ತರಲು ಹೊರಬಿದ್ದ ಗುಂಪುಗಳು ಸಪ್ಪೆ ಮೋರೆ ಹಾಕಿಕೊಂಡು ಹಿಂದಿರುಗಿದವು.

ಒಂದು ವಾರದ ತರುವಾಯ ಕೃಷ್ಣಚಂದ್ರರಿಗೆ ಸಿಂಗಾಪುರದಿಂದ ಕಾಗದ ಬಂದಿತು. ಚೆನ್‌ಚೆನ್ ಮಾರ್ಮಿಕವಾಗಿ 'ನಿಮ್ಮ ಹಣ ತಲುಪಿತು. ಜೋಪಾನ ಮಾಡಲಾಗಿದೆ. ಭಯಕ್ಕೆ ಕಾರಣವಿಲ್ಲ' ಎಂದು ತಿಳಿಸಿದ್ದರು. ಕೃಷ್ಣಚಂದ್ರರು ಆನಂದಪರವಶರಾದರು.

ಎರಡು ವಾರ ಕಳೆದಿರಬಹುದು. ಒಂದು ದಿನ ಕೂಲಿಕಾರರು ಮರ ಕಡಿಯುತ್ತಿದ್ದರು. ಮಗ್ಗುಲಲ್ಲಿದ್ದ-ರಮಾಸ್ವೋ ತಲೆಯ ಮೇಲೆ ಕಡಿದ ಮರ ಬಿದ್ದು ಅಪ್ಪಳಿಸಿಬಿಟ್ಟಿತು. ಇದೊಂದು ಆಕಸ್ಮಿಕ ಘಟನೆಯೆಂದು ಬಿಳಿಯ ಪ್ಲಾಂಟರುಗಳು ನಂಬಲಿಲ್ಲ.

೩

ಬಿಳಿಯ ಪ್ಲಾಂಟರುಗಳು ಹಲವು ಹಸ್ಯೊಂದು ಪಿಥದಲ್ಲಿ ಕೃಷ್ಣಚಂದ್ರರಿಗೆ ಕಿರುಕುಳ ಕೊಡಲಾರಂಭಿಸಿದರು. ಒಂದು ದಿನ ಕೃಷ್ಣಚಂದ್ರರು ಊಟ ಮುಗಿಸಿ ವರಾಂಡದಲ್ಲಿ ಕುಳಿತು ಅಂದೇ ಫಾರಿನ್ ಮೇಲ್‌ನಲ್ಲಿ ( Foreign Mail ) ಬಂದಿದ್ದ ಪುಸ್ತಕಗಳನ್ನು ನೋಡುತ್ತ ಕುಳಿತಿದ್ದರು. ಅವರ ಪಾದದ ಬಳಿ ಜೆಸ್ಸಿ ಬಂದು ಕುಳಿತು ಗರಿಬೀಸಣಿಗೆಯಿಂದ ಬೀಸುತ್ತಿದ್ದಳು. ಕೃಷ್ಣಚಂದ್ರರು ಕತ್ತೆತ್ತಿ ನೋಡಿ, ಕರುಣಾದ್ರ್ರರಾಗಿ ಜೆಸ್ಸಿಯ ತಲೆಯ ಮೇಲೆ ಕೈಯಾಡಿಸುತ್ತಾ

"ಜೆಸ್ಸಿ, ನನಗೆ ವಯಸ್ಸಾಗುತ್ತ ಬಂತು." ಎಂದರು.

"ವಯಸ್ಸಾಗುವುದು ಯಾರಧೀನ."

"ಕರುಣಾ, ಕೀರ್ತಿ ಇವರ ಶಿಕ್ಷಣದ ವ್ಯವಸ್ಥೆ ಮಾಡಬೇಕು."

"ನೀವೇ ಶಿಕ್ಷಣ ಕೊಡುತ್ತಿರುವಿರಲ್ಲ."

"ಅದು ಸಾಲದು. ಅವರನ್ನು ಶಾಲೆಗೆ ಕಳಿಸಬೇಕು."

"ಸಿಂಗಾಪುರಕ್ಕೆ ಕಳಿಸಬಹುದು."

"ಈ ವಯಸ್ಸಿನಲ್ಲಿ ಅವರನ್ನು ಬಿಟ್ಟು ನಾನು ದೂರವಿರಲೇ?"

"ನಾವೂ ಸಿಂಗಾಪುರಕ್ಕೆ ಹೋಗಿ ಇದ್ದು ಬಿಡಬಹುದು."

"ಸಿಂಗಾಪುರಕ್ಕೆ ಹೋಗಿ ಇರುವುದಾದರೆ ನಮ್ಮೂರಿಗೇ ಹೋಗಬಹುದು. – ಜೆಸ್ಸಿ ನೀನು ತುಂಬ ಒಳ್ಳೆಯವಳು. ಕರುಣಾ, ಕೀರ್ತಿ ಇವರನ್ನು ಜೋಪಾನ ಮಾಡಿ ನನಗೆ ಮಹೋಪಕಾರ ಮಾಡಿರುವೆ."

ಕೃಷ್ಣಚಂದ್ರರ ಮನಸ್ಸಿನಲ್ಲಿದ್ದುದನ್ನು ಅರ್ಥ ಮಾಡಿಕೊಳ್ಳುವುದಕ್ಕೆ

ಜೆಸ್ಸಿಗೆ ತಡವಾಗಲಿಲ್ಲ. ಅವಳ ಕೈಯಲ್ಲಿದ್ದ ಬೀಸಣಿಗೆ ಜಾರಿ ಕೆಳಗೆ ಬಿದ್ದಿತು. ಅವಳ ಕಣ್ಣುಗಳ ತುಂಬ ನೀರು ತುಂಬಿಕೊಂಡಿತು.

"ನಿಮ್ಮನ್ನು – ಮಕ್ಕಳನ್ನು ಬಿಟ್ಟು ನಾನಿರಲಾರೆ."

"ನನ್ನೂರು ಬಹಳ ದೂರ ಜೆಸ್ಸಿ. ಅಲ್ಲಿ ನಿಮ್ಮ ಜನ ಯಾರೂ ಇಲ್ಲ. ನೀರಿನಿಂದ ಹೊರತೆಗೆದ ಮೀನಿನಂತಾಗುತ್ತೀ."

"ನಿಮ್ಮನ್ನು ಬಿಟ್ಟು ನನಗೆ ಬೇರೆ ಜನ ಯಾರಿದ್ದಾರೆ?"

"ಆಗಲಿ ಯೋಚನೆ ಮಾಡೋಣ."

ಎಂದು ಹೇಳಿದರು. ಜೆಸ್ಸಿ ಅನ್ನ ನೀರು ತೊರೆದು ಬಿಟ್ಟಳು. ಅವಳ ಪರವಾಗಿ ಕರುಣಾ, ಕೀರ್ತಿ ತಂದೆಯ ಜತೆಯಲ್ಲಿ ವಾದಮಾಡಿ ಆವರ ಅಪ್ಪಣೆ ದೊರಕಿಸಬೇಕಾಯಿತು.

ತಮ್ಮ ವ್ಯವಹಾರವನ್ನೆಲ್ಲಾ ಮುಗಿಸಿಕೊಳ್ಳಬೇಕಾದರೆ ಕೃಷ್ಣಚಂದ್ರರಿಗೆ ಮೂರು ತಿಂಗಳು ಕಾಲ ಹಿಡಿಯಿತು. ತಮ್ಮ ಸಮಸ್ತ ಆಸ್ತಿಯನ್ನೂ ಮಾರಿ ಕರುಣಾ, ಕೀರ್ತಿ, ಜೆಸ್ಸಿಯರೊಂದಿಗೆ ಸಿಂಗಾಪುರ ತಲುಪಿದರು.

ಕೃಷ್ಣಚಂದ್ರರು ಸಿಂಗಾಪುರದಲ್ಲಿ ನೇರವಾಗಿ ಚೆನ್‌ಚೆನ್ ಮನೆಗೆ ಹೋಗದೆ 'ಅಂಬಸ್ಯಾಡರ್' ಹೋಟೆಲಿನಲ್ಲಿ ಇಳಿದುಕೊಂಡು, ಮಾರನೆಯ ದಿನ ಚೆನ್‌ಚೆನ್‌ರನ್ನು ಬ್ಯಾಂಕಿನಲ್ಲಿಯೇ ಹೋಗಿ ಕಂಡರು.

ಚೆನ್‌ಚೆನ್ ಅವರ ವ್ಯವಹಾರವನ್ನೆಲ್ಲಾ ಬಗೆಹರಿಸಿ, ಬೆಂಗಳೂರು ಇಂಪೀರಿಯಲ್ ಬ್ಯಾಂಕಿಗೆ ಹಣ ರವಾನಿಸಿದರು.

ಚೆನ್‌ಚೆನ್ ಬಲವಂತ ಮಾಡಿ ಕೃಷ್ಣಚಂದ್ರರನ್ನೂ ಅವರ ಪರಿವಾರವನ್ನೂ ಮಾರನೆಯ ದಿನ ತಮ್ಮ ಮನೆಗೆ ಊಟಕ್ಕೆ ಕರೆದೊಯ್ದರು. ಮಾಲಾ, ಮಹಾದೋ ಚೆನ್ನರವರ ಮನೆಯಲ್ಲಿಯೇ ಇದ್ದುದನ್ನು ಕಂಡು ಕೃಷ್ಣಚಂದ್ರರಿಗೆ ಪರಮ ಸಂತೋಷವಾಯಿತು.

"ಈ ನಿಮ್ಮ ಉಪಕಾರಕ್ಕೆ ನಾನೆಷ್ಟು ಋಣಿಯೆಂಬುದನ್ನು ಬಾಯಿ ಮಾತಿನಿಂದ ಹೇಳಲಾರೆ" ಎಂದು ಕೃಷ್ಣಚಂದ್ರರು ಉಪಚಾರ ಹೇಳಿದರು.

"ಇದರಲ್ಲಿ ಉಪಕಾರವೇನು ಬಂತು – ನನ್ನ ಕರ್ತವ್ಯ ನಾನು ಮಾಡಿದೆ. ಬಿಳಿಯರ ಹಿಡಿತದಿಂದ ಏಷ್ಯಾವನ್ನು ಬಿಡಿಸದಿದ್ದರೆ ಜಗತ್ತಿಗೇ ಏಳಿಗೆಯಿಲ್ಲ. ಏಷ್ಯಾದ ರಕ್ತ ಕುಡಿದು ಕುಡಿದು ಅವರು ಮದಿಸಿದ್ದಾರೆ."

" ಮಾಲಾ, ಮಹಾದೊ ವಿಷಯ ಮುಂದೇನು ಮಾಡುವಿರಿ ? "

" ಮಲಯಾದಲ್ಲಿ ಗುಪ್ತವಾಗಿ ಸ್ವಾತಂತ್ರ್ಯಚಳುವಳಿ ನಡೆದಿದೆ. ಮುಂದೆ ಮಾಲಾ, ಮಹಾದೊ ಅಲ್ಲಿಗೇ ಹೋಗಿ ಅದರಲ್ಲಿ ಭಾಗ ವಹಿಸುತ್ತಾರೆ. ಆ ಕರ್ತವ್ಯ ನಿರ್ವಹಣೆಗೆ ಅವರನ್ನು ಸಿದ್ಧಗೊಳಿಸುತ್ತಿದ್ದೇನೆ. "

ಎರಡು ದಿನಗಳ ತರುವಾಯ ಕೃಷ್ಣಚಂದ್ರರು ಸಿಂಗಾಪುರ ಬಿಟ್ಟು ಬೆಂಗಳೂರಿಗೆ ಪ್ರಯಾಣ ಬೆಳಸಿದರು.

ಬೆಂಗಳೂರಿನಲ್ಲಿ ಮೂರು ತಿಂಗಳ ಕಾಲ 'ವೆಸ್ಟ ಎಂಡ ಹೊಟೇಲಿ ನಲ್ಲಿ ಕೃಷ್ಣಚಂದ್ರರು ಅವರ ಪರಿವಾರ ಕಳೆಯಬೇಕಾಯಿತು. ತರುವಾಯ 'ಕಾಕ್ಸ್‌ಟೌನಿ' ನಲ್ಲಿದ್ದ ಮುಸಲ್ಮಾನ ಸದ್ಗೃಹಸ್ಥರೊಬ್ಬರ 'ಹಾಫೀಜ್ ವಿಲ್ಲಾ' ಕೊಂಡುಕೊಂಡು, ಅದನ್ನೇ ತಮ್ಮ ಅನುಕೂಲಕ್ಕೆ ತಕ್ಕಂತೆ ಮಾರ್ಪ ಡಿಸಿಕೊಂಡು ವಾಸಕ್ಕೆ ಬಂದರು. 'ಹಾಫೀಜ್ ವಿಲ್ಲಾ', 'ಪವನ್ ವಿಲ್ಲಾ ಆಗಿ ಪರಿವರ್ತನೆ ಹೊಂದಿತು.

ಕೀರ್ತಿ, ಕರುಣ ಇಬ್ಬರಿಗೂ ಶಾಲಾ ಶಿಕ್ಷಣ ಆರಂಭವಾಯಿತು. ಅದ ಕ್ಕಿಂತ ಹೆಚ್ಚಾಗಿ ಕೃಷ್ಣಚಂದ್ರರು ಪ್ರತಿರಾತ್ರಿಯೂ ಮಕ್ಕಳನ್ನು, ಜೆಸ್ಸಿಯನ್ನು ಒಂದು ಗಂಟೆ ಕಾಲ ಕೂಡಿಸಿಕೊಂಡು ಅವರಿಗೆ ರಾಮಾಯಣ, ಭಾರತ, ಭಾಗವತ, ಬುದ್ಧನ ಜಾತಕಕಥೆಗಳ ಪರಿಚಯ ಮಾಡಿಕೊಡುತ್ತಿದ್ದರು. ತಮ್ಮ ಮಕ್ಕಳು ಹಿಂದೂ ಧರ್ಮವನ್ನು ಚೆನ್ನಾಗಿ ಅರ್ಥ ಮಾಡಿಕೊಂಡು, ಉತ್ತಮ ಹಿಂದುಗಳಾಗಿ ಬಾಳಬೇಕೆಂಬುದೇ ಕೃಷ್ಣಚಂದ್ರರ ಆಶಯವಾಗಿತ್ತು.

ಜೆಸ್ಸಿಯೂ ಪರಿಸ್ಥಿತಿಗೆ ಹೊಂದಿಕೊಂಡಳು. ಕಂಟೋನ್ಮೆಂಟ್ ವಾತಾ ವರಣಕ್ಕೆ ತಕ್ಕಂತೆ ತಮಿಳು, ಕನ್ನಡ, ಉರ್ದು ಮಾತನಾಡುವದನ್ನೂ ಕಲಿತು ಕೊಂಡಳು. ಕರುಣೆಯೂ ಭಾಷೆಗಳನ್ನು ಕಲಿಯುವುದರಲ್ಲಿ ಹಿಂದೆ ಬೀಳಲಿಲ್ಲ. ಆದರೆ ಕೀರ್ತಿಗೆ ಮಾತ್ರ ದೇಶಭಾಷೆಗಳ ಮೇಲೆ ಮಮತೆ ಹುಟ್ಟಲಿಲ್ಲ. ಇಂಗ್ಲಿಷ್ ಬಿಟ್ಟು ಬೇರೆ ಯಾವ ಭಾಷೆಯೂ ಅವನ ಬಳಿ ಸುಳಿಯಲು ಸಾಧ್ಯ ವಿರಲಿಲ್ಲ. ಆದರೆ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಆಳುಗಳು, ಮಾಲಿ, ಡ್ರೈವರ್ ಜತೆ ಮಾತನಾಡಲು ಅವನು ಅನಿವಾರ್ಯವಾಗಿ ಸ್ವಲ್ಪ ಕನ್ನಡ, ತಮಿಳು ಮಾತನಾಡುವುದನ್ನು ಕಲಿಯಬೇಕಾಯಿತು. ಅವನ ಸೂಕ್ಷ್ಮ ಮತಿಗೆ ದೇಶಭಾಷೆಗಳನ್ನು ಕಲಿಯುವುದು ದೊಡ್ಡ ಸಾಹಸದ ಮಾತಾಗಿರಲಿಲ್ಲ;

ಆದರೆ ಆ ಕಡೆ ಅವನ ಮನಸ್ಸು ಹರಿಯುತ್ತಿರಲಿಲ್ಲ. ಕೃಷ್ಣಚಂದ್ರರಿಗೆ ಮಗನ ಮನೋಭಾವ ಬೇಸರವನ್ನುಂಟು ಮಾಡುತ್ತಿತ್ತು. ಆದರೆ ಮಗನನ್ನು ದಂಡಿಸಲು ಇಷ್ಟವಿಲ್ಲ. ಮಗನಿಗೆ ಅಲ್ಪಸ್ವಲ್ಪ ಸಂಸ್ಕೃತವಾದರೂ ಬರಲಿ ಎಂದು ಒಬ್ಬ ಪಂಡಿತರನ್ನು ಗೊತ್ತುಮಾಡಿ, ಅವನಿಗೆ ಮನೆಯಲ್ಲಿಯೇ ಸಂಸ್ಕೃತಶಿಕ್ಷಣ ಕೊಡಿಸಲಾರಂಭಿಸಿದರು. ಸಂಸ್ಕೃತಾಭ್ಯಾಸದಲ್ಲಿ ಕೀರ್ತಿ ಯಾವ ಪ್ರಗತಿಯನ್ನು ತೋರಿಸದಿದ್ದರೂ, ಅವನ ಕಿವಿಯ ಮೇಲೆ ಸಂಸ್ಕೃತ ಶಬ್ದಗಳಾದರೂ ಬಿದ್ದಿರಲಿ ಎಂದು ಕೃಷ್ಣಚಂದ್ರರು ತೃಪ್ತಿಪಟ್ಟುಕೊಳ್ಳುತ್ತಿದ್ದರು.

ಕೀರ್ತಿ ಬೆಳೆಯುತ್ತ ಬೆಳೆಯುತ್ತ ಕೃಷ್ಣಚಂದ್ರರಿಗೆ ದೊಡ್ಡ ಸಮಸ್ಯೆಯಾಗುತ್ತ ಬಂದ. ಶಾಲೆಗೆ ಹೋಗುವುದನ್ನು ಅವನು ಸಂಪೂರ್ಣವಾಗಿ ನಿಲ್ಲಿಸಿದ್ದ. ಆಂಗ್ಲೋ ಇಂಡಿಯನ್ನರ ನಿಕಟ ಸ್ನೇಹ, ಸಹವಾಸದಿಂದ ಅವನಿಗೆ ಹಲವು ದುರಭ್ಯಾಸ ಪಾಠವಾಗತೊಡಗಿತ್ತು. ಕೀರ್ತಿ ಹೊಟ್ಟೆಯ ಪಾಡಿಗೆ ದುಡಿಯಬೇಕಾಗಿರಲಿಲ್ಲ. ಅವನು ಕುಳಿತು ತಿಂದರೂ ಸಾಕಷ್ಟು ಉಳಿಯುವಷ್ಟು ತಂದೆ ಗಳಿಸಿಟ್ಟಿದ್ದರು, ಯೋಗ್ಯ ಕಾಲಯಾಪನೆಗಾದರೂ ಮಗ ಯಾವದಾದರೂ ಒಂದು ವೃತ್ತಿಯನ್ನು ಕೈಗೊಳ್ಳಲಿ ಎಂದು ತಂದೆ ಚಡಪಡಿಸುತ್ತಿದ್ದರು.

ಜೆಸ್ಸಿಯ ಕೈಯಲ್ಲಿ ಕೀರ್ತಿಗೆ ತಂದೆ ಈ ಮಾತು ಹೇಳಿಸಿದ್ದರು. ಜೆಸ್ಸಿಯನ್ನು ತನ್ನ ಮಾತಿನಲ್ಲಿ ಮರುಳು ಮಾಡಿ ಕೀರ್ತಿ ಪಾರಾಗಿ ಬಿಡುತ್ತಿದ್ದ. ತಂದೆ ಸ್ವಲ್ಪ ಕಠಿಣವಾಗಿ ಬುದ್ಧಿ ಹೇಳಿದರೆ ಕೀರ್ತಿ ಮುನಿಸಿಕೊಂಡು ಎರಡು ಮೂರು ದಿನ ಮನೆಯಿಂದ ಹೊರಗಿರುತ್ತಿದ್ದ. ಮಗನ ಮೊಂಡು ಸ್ವಭಾವ ತಂದೆಯನ್ನು ಒಳಗೇ ಹಣ್ಣು ಮಾಡುತ್ತಿತ್ತು.

ಇದೇ ಸಮಯಕ್ಕೆ ವಿಶ್ವವಿಖ್ಯಾತಿ ಪಡೆದ ಭಾರತೀಯ ನೃತ್ಯಕಾರ ಉದಯಶಂಕರ್ ಬೆಂಗಳೂರಿಗೆ ಬಂದು ಬಿ. ಆರ್. ವಿ. ಥಿಯೇಟರಿನಲ್ಲಿ ಕೆಲವು ಪ್ರದರ್ಶನಗಳನ್ನು ಕೊಡುವ ವಿಷಯ ಜಾಹೀರಾಯಿತು. ಕೀರ್ತಿ ತನಗೂ ತನ್ನ ಆಂಗ್ಲೋ ಇಂಡಿಯನ್ ಸ್ನೇಹಿತರಿಗೂ ಎಲ್ಲ ಪ್ರದರ್ಶನಗಳಿಗೂ ಪೂರ್ವಭಾವಿಯಾಗಿ ಟಿಕೆಟ್‌ಗಳನ್ನು ಕೊಂಡಿಟ್ಟುಕೊಂಡ.

ಕೃಷ್ಣಚಂದ್ರರೂ ಒಂದು ದಿನ ಜೆಸ್ಸಿ, ಕರುಣೆಯನ್ನು ಕರೆದುಕೊಂಡು ಹೋಗಿ ಉದಯಶಂಕರನ ನೃತ್ಯಪ್ರದರ್ಶನ ನೋಡಿ ಬಂದರು.

ಉದಯಶಂಕರನ ನೃತ್ಯಪ್ರದರ್ಶನ ಕೀರ್ತಿಯ ಮೇಲೆ ವಿಲಕ್ಷಣ ಪರಿಣಾಮವನ್ನುಂಟು ಮಾಡಿತು. 'ನಾನೂ ಏಕೆ ನೃತ್ಯಗಾರನಾಗಬಾರದು–ಉದಯಶಂಕರನ ಹಾಗೆ ಯೂರೋಪ್, ಅಮೇರಿಕಾಗಳಿಗೆ ಹೋಗಿ ಪ್ರದರ್ಶನಗಳನ್ನಿತ್ತು ವಿಶ್ವವಿಖ್ಯಾತಿ ಸಂಪಾದಿಸಬಾರದು!' ಎಂದುಕೊಂಡ. ಕನ್ನಡಿಯ ಮುಂದೆ ನಿಂತುಕೊಂಡು ಮಾಟವಾಗಿದ್ದ ತನ್ನ ದೇಹದ ಅಂಗಾಂಗಗಳನ್ನು ನೋಡಿಕೊಂಡು ತಾನೇ ಮೆಚ್ಚಿಕೊಂಡ. 'ತಾನು ನೃತ್ಯ ಕಲಿತರೆ ಉದಯಶಂಕರನನ್ನು ಮೀರಿಸಬಲ್ಲೆ' ಎಂದುಕೊಂಡ. ಕೀರ್ತಿ ಹೇಳಿದುದೆಲ್ಲಕ್ಕೂ 'ಅಸ್ತು' ಎನ್ನುತ್ತಿದ್ದ ಅವನ ಆಂಗ್ಲೋ ಇಂಡಿಯನ್ ಮಿತ್ರರು ಅವನ ಆಸೆಗೆ ಪುಟವಿಟ್ಟರು.

ಕೀರ್ತಿ ಅವಕಾಶ ಕಲ್ಪಿಸಿಕೊಂಡು ಉದಯಶಂಕರನ ಭೇಟ್ಟಿಮಾಡಿ ತನ್ನನ್ನು ಕಂಪೆನಿಗೆ ಸೇರಿಸಿಕೊಳ್ಳಬೇಕೆಂದು ಕೇಳಿಕೊಂಡ. ಕೀರ್ತಿಯನ್ನು ಆಪಾದಮಸ್ತಕ ನೋಡಿದ ಉದಯಶಂಕರ ನೀಳವಾದ ತನ್ನ ತಲೆಗೂದಲ ಮೇಲೆ ಕೈಯಾಡಿಸುತ್ತ

"ನಾನೀಗ ಅಖಿಲ ಭಾರತ ಪ್ರವಾಸ ಕೈಕೊಂಡಿದ್ದೇನೆ. ನನ್ನ ಮಂಡಳಿಯಲ್ಲಿ ಅರವತ್ತು ಜನ ಇದ್ದಾರೆ. ಪ್ರವಾಸ ಮುಗಿಸಿಕೊಂಡು ನಾನು ಮತ್ತೆ ವಿಲಾಯತಿ ಪ್ರವಾಸ ಕೈಗೊಳ್ಳಬೇಕಾಗಿದೆ. ಹೊಸಬರನ್ನು ತೆಗೆದುಕೊಂಡು ಅವರಿಗೆ ಶಿಕ್ಷಣ ಕೊಡುವುದಕ್ಕೆ ನನಗೆ ವ್ಯವಧಾನವೆಲ್ಲಿಯದು ?"

"ನನಗಾಗಿ ನೀವು ಏನೂ ತೊಂದರೆ ತೆಗೆದುಕೊಳ್ಳಬೇಡಿ. ನಾನು ಕಂಪೆನಿಯ ಜತೆಗಿರಲು ಅವಕಾಶ ಕೊಡಿ. ನನ್ನ ಸಮಸ್ತ ಖರ್ಚನ್ನೂ ನಾನೇ ಪೂರೈಸಿಕೊಳ್ಳುತ್ತೇನೆ."

"ಸದ್ಯಕ್ಕೆ ಸಾಧ್ಯವಿಲ್ಲ. ನಾನು ವಿಲಾಯಿತಿ ಪ್ರವಾಸ ಮುಗಿಸಿಕೊಂಡು ಬಂದ ಮೇಲೆ ಆಲ್ಮೋರಾದಲ್ಲಿ ನೃತ್ಯಶಾಲೆ ತೆಗೆಯಬೇಕೆಂದಿದ್ದೇನೆ. ಆಗ ಬನ್ನಿ. ಅವಶ್ಯಕವಾಗಿ ನಿಮ್ಮನ್ನು ಸೇರಿಸಿಕೊಳ್ಳುತ್ತೇನೆ." ಎಂದು ಖಡಾಖಂಡಿತವಾಗಿ ಹೇಳಿದ.

ಕೀರ್ತಿಗೆ ನಖಶಿಖಾಂತವಾಗಿ ಕೋಪ ಕೆರಳಿತು. ಕೋಪದ ಜತೆಯಲ್ಲಿ ಮನಸ್ಸಿನಲ್ಲಿ ನಿರ್ಧಾರವೂ ಮೂಡಿತು.

"ಇವನು ನನ್ನನ್ನು ತಿರಸ್ಕರಿಸಿದ್ದಾನೆ. ನಾನೂ ನೃತ್ಯ ಕಲಿತು ಇವ

ನಂತೆ ಮಂಡಳಿ ಕಟ್ಟಿ ವಿಲಾಯಿತಿ ಪ್ರವಾಸ ಮಾಡಿ ಇವನ ಮೇಲೆ ಸ್ಪರ್ಧೆ ಹೂಡುತ್ತೇನೆ. ಇವನ ವಿಶ್ವವಿಖ್ಯಾತಿಯನ್ನು ಅಳಿಸಿ ಬಿಡುತ್ತೇನೆ." ಎಂದು ಶಪಥ ಮಾಡಿದ.

ಕೀರ್ತಿಯ ಆಂಗ್ಲೋ ಇಂಡಿಯನ್ ಮಿತ್ರರು 'ಹೌದು ಹೌದು' ಎಂದು ಅವನ ಭುಜ ಚಪ್ಪರಿಸಿದರು.

೪

ನೃತ್ಯಕಲೆಯನ್ನು ಕಲಿಸಿಕೊಡಬಲ್ಲ ಒಬ್ಬ ಗುರುವನ್ನು ಕೀರ್ತಿಗೆ ಗೊತ್ತು ಮಾಡಿಕೊಡುವ ಜವಾಬ್ದಾರಿ ಅವನ ಆಂಗ್ಲೋ ಇಂಡಿಯನ್ ಮಿತ್ರರ ಮೇಲೆ ಬಿತ್ತು. ಫ್ರಾನ್ಸಿಸ್, ವೆಸ್ಲಿ, ಲಿಗೆಟ್ ಇದೇ ಕೆಲಸದ ಮೇಲೆ ಸಿಟಿ, ಕಂಟೋನ್ಮೆಂಟುಗಳನ್ನು ಶೋಧಿಸತೊಡಗಿದರು.

ಐದು ದಿನಗಳು ಕಳೆದವು. ಕೀರ್ತಿ ನಿರಾಶೆಗೊಂಡಿದ್ದ. ಐದನೆಯ ದಿನ ಮಧ್ಯಾಹ್ನ ಕೀರ್ತಿಯನ್ನು ಕಾಣಲು ಬಂದ ಫ್ರಾನ್ಸಿಸ್ ಮತ್ತು ವೆಸ್ಲಿ ಉತ್ತೇಜಕರವಾದ ಉತ್ತರ ತಂದಿದ್ದರು.

"ನೋಡು ಕೀರ್ತಿ. ನಮ್ಮನ್ನು ಆಕ್ಷೇಪಣೆ ಮಾಡುವುದೊಂದು ನಿನಗೆ ಗೊತ್ತೇ ವಿನಾ, ನಿನಗಾಗಿ ನಾವೆಷ್ಟು ಶ್ರಮ ವಹಿಸುತ್ತಿದ್ದೇವೆಂಬುದನ್ನು ನೀನು ಕಾಣೆ."

"ನೀವು ಶ್ರಮ ವಹಿಸಿರಬಹುದು. ನಾನು ಇಲ್ಲವೆನ್ನುವುದಿಲ್ಲ. ಆದರೆ ಸಾರ್ಥಕವೇನು ? ಇಷ್ಟು ದೊಡ್ಡ ಊರಿನಲ್ಲಿ ನೃತ್ಯಕಲೆ ಕಲಿಸಿ ಕೊಡುವ ಒಬ್ಬ ಗುರುವೂ ಇಲ್ಲವೇ ?"

"ಇದ್ದರಂತೆ ಕೀರ್ತಿ. ಬಹಳ ಜನ ಇದ್ದರಂತೆ. ಈಗ ಪ್ರೋತ್ಸಾಹ ವಿಲ್ಲದೆ ಅವರು ನೃತ್ಯಕಲೆಯನ್ನೇ ಬಿಟ್ಟುಬಿಟ್ಟಿದ್ದಾರಂತೆ."

"ಗುರುವನ್ನು ಹುಡುಕುವುದಕ್ಕೆ ನೀವೇನು ಪ್ರಯತ್ನ ಮಾಡಿರುವಿರಿ ಅದನ್ನಾದರೂ ತಿಳಿಸಿ."

"ಅದನ್ನು ನಾವು ಹೇಳಿದರೆ ಪ್ರಯೋಜನವಿಲ್ಲ. ಸಂಜೆ ನಮ್ಮೊಂದಿಗೆ

ಬಾ, ಆನಂದರಾಯರು ಎಲ್ಲವನ್ನೂ ವಿವರಿಸುವರು. ”

“ ಅವರು ಯಾರು ? ”

“ ಇಲ್ಲೇ ಸೇಂಟ್ ಜೋಸೆಫ್ ಹೈಸ್ಕೂಲಿನಲ್ಲಿ ಡ್ರಾಯಿಂಗ್ ಟೀಚರ್ ಆಗಿದ್ದಾರೆ. ”

“ ಈ ವಿಷಯ ಅವರಿಗೇನು ಗೊತ್ತು ? ”

“ ಅವರು ಸಿಟಿಯಲ್ಲಿ ವಾಸ ಮಾಡುತ್ತಾರೆ. ಆನಂದರಾಯರು ಕಲಾಭಿಮಾನಿಗಳು. ಆಗಾಗ್ಗೆ ತಮ್ಮ ವಿದ್ಯಾರ್ಥಿಗಳಿಂದ ನಾಟಕ, ನೃತ್ಯಪ್ರದರ್ಶನ ಮಾಡಿಸುತ್ತಿರುತ್ತಾರೆ. ಅವರಿಗೆ ಈ ಊರಲ್ಲಿರುವ ಎಲ್ಲ ಕಲಾವಿದರ ಪರಿಚಯವೂ ಇದೆ. ”

“ ನೃತ್ಯಶಿಕ್ಷಕರ ವಿಷಯ ಆನಂದರಾಯರು ಏನು ಹೇಳಿದರು. ”

“ ಸಿಟಿಯಲ್ಲಿ ಒಬ್ಬರು ಇದ್ದಾರಂತೆ. ನಾವು ಸಂಜೆಗೆ ಅವರ ಶಾಲೆಯ ಬಳಿ ಹೋದರೆ ನಮ್ಮನ್ನು ಅವರ ಮನೆಗೆ ಕರೆದುಕೊಂಡು ಹೋಗುತ್ತಾರಂತೆ!”

ಕೀರ್ತಿಗೆ ಹೋದ ಪ್ರಾಣ ಬಂದಂತಾಯಿತು. ಕಮರಿ ಹೋಗಿದ್ದ ಆಶಾವೃಕ್ಷ ಪುನಃ ಚಿಗುರಲಾರಂಭಿಸಿತು. ಸಂಜೆಯಾದೀತೇ ಎಂದು ತವಕ ಪಡುತ್ತಿದ್ದ.

ಸಂಜೆ ಐದು ಗಂಟೆಯ ವೇಳೆಗೆ ಕೀರ್ತಿ ಸುಸಜ್ಜಿತನಾದ. ವೆಸ್ಲಿ, ಫ್ರಾನ್ಸಿಸ್ ಇಬ್ಬರನ್ನು ಜತೆಯಲ್ಲಿ ಕರೆದುಕೊಂಡು ತನ್ನ ‘ಮಾರಿಸ್ ಮೈನರ್ ’ ( Morris Minor ) ಕಾರ್ ತಾನೇ ನಡಸಿಕೊಂಡು ಸೇಂಟ್ ಜೋಸೆಫ್ ಹೈಸ್ಕೂಲಿನ ಬಳಿ ಬಂದ.

ಆನಂದರಾಯರು ಹೊರಗೇ ನಿಂತು ಕೀರ್ತಿಯ ದಾರಿ ನೋಡುತ್ತಿದ್ದರು. ಫ್ರಾನ್ಸಿಸ್ ಪರಿಚಯದ ಕೆಲಸ ಮುಗಿಸಿದ ಮೇಲೆ

“ ಬನ್ನಿ, ಒಳಗೆ ಕುಳಿತುಕೊಳ್ಳಿ ” ಎಂದ.

“ ನಾನು ಬೈಸಿಕಲ್ ತಂದಿದ್ದೇನೆ. ”

“ ಸ್ಕೂಲಿನಲ್ಲಿ ಬೈಸಿಕಲ್ ಬಿಟ್ಟುಬಿಡಿ - ನಾಳೆ ತೆಗೆದುಕೊಂಡರಾಯಿತು.”

“ ಸ್ವಲ್ಪ ತಡೆಯಿರಿ. ಶಾಲೆಯ ಜವಾನನಿಗೆ ಹೇಳಿಬರುತ್ತೇನೆ. ”

ಎಂದು ಆನಂದರಾಯರು ಒಳಗೆ ಹೋಗಿ ಹತ್ತು ನಿಮಿಷಗಳಲ್ಲಿ ಹಿಂದಿರುಗಿ ಬಂದು ಕಾರಿನಲ್ಲಿ ಕುಳಿತರು.

ಆನಂದರಾಯರ ಸೂಚನೆಯಂತೆ ಕೀರ್ತಿ ಕಾರು ನಡೆಸಿಕೊಂಡು ಬಳೆಯಪೇಟೆ ಚೌಕಕ್ಕೆ ಬಂದ. ಪಕ್ಕದಲ್ಲಿದ್ದ ಒಂದು ಸಂದಿಯಲ್ಲಿ ಕಾರು ತಿರುಗಿಸಲು ಆನಂದರಾಯರು ಹೇಳಿದರು. ತಮ್ಮ ಮನೆ ತೋರಿಸಿ, ಅಲ್ಲಿ ಕಾರು ನಿಲ್ಲಿಸುವಂತೆ ರಾಯರು ಸೂಚಿಸಿದರು.

"ನಾವು ಕಾರು ಇಲ್ಲೇ ಬಿಟ್ಟು ನಡೆದು ಹೋಗಬೇಕು. ರಾಮು ಸ್ವಾಮಪ್ಪನ ಮನೆಯವರೆಗೆ ಕಾರು ಹೋಗುವುದಿಲ್ಲ. ಕ್ಲೋಳಕು ಸಂದಿ."

ಕೀರ್ತಿ ಕಾರಿಗೆ ಬೀಗ ಹಾಕಿ ಹೊರಡಲು ಸಿದ್ಧನಾದ. ಆನಂದರಾಯರು ಅವನನ್ನೂ ಅವನ ಗೆಳೆಯರನ್ನೂ ನಾಲ್ಕಾರು ಸಂದಿಗಳೊಳಗೆ ಸುತ್ತಿಸಿ, ಒಂದು ಹಳೆಯ ಮನೆಗೆ ಕರೆದುಕೊಂಡು ಹೋದರು.

ಆನಂದರಾಯರ ಧ್ವನಿ ಕೇಳಿ ರಾಮುಸ್ವಾಮಪ್ಪ ಹೊರಗೆ ಬಂದು ಎಲ್ಲರನ್ನೂ ಸ್ವಾಗತಿಸಿ ಒಳಗೆ ಕರೆದೊಯ್ದು ನೆಲದ ಮೇಲೆ ಹಾಸಿದ್ದ ಜಮಖಾನೆಯ ಮೇಲೆ ಕುಳ್ಳಿರಿಸಿದ.

ಕೀರ್ತಿ ಮನೆಯ ಸೂಕ್ಷ್ಮಾವಲೋಕನ ಮಾಡಿ ಮುಗಿಸುವಷ್ಟರಲ್ಲಿ ರಾಯರು

"ಇವರೇ ರಾಮುಸ್ವಾಮಪ್ಪನವರು. ಭರತವಿದ್ಯಾ ಪ್ರವೀಣರು. ಬೆಂಗಳೂರಿನಲ್ಲಿರುವ ಬಹುಮಂದಿ ನರ್ತಕ ನರ್ತಕಿಯರಿಗೆ ಆಚಾರ್ಯರು – ಇವರು ಫ್ರಾನ್ಸಿಸ್, ಇವರು ವೆಸ್ಲಿ, ನಮ್ಮ ಕೀರ್ತಿಯವರ ಆಪ್ತ ಗೆಳೆಯರು. ಕೀರ್ತಿಯವರ ವಿಷಯ ನಾನು ನಿಮಗೆ ಹೇಳಿಯೇ ಇದ್ದೇನೆ."

"ನನ್ನಲ್ಲಿ ಭರತನಾಟ್ಯ ಕಲಿಯಬೇಕೆಂದು ನೀವು ಆಸೆಪಟ್ಟಿರಂತೆ."

ಎಂದು ರಾಮುಸ್ವಾಮಪ್ಪ ಸೂಚಿಸಿದ. ಕೀರ್ತಿ ತನ್ನ ಹರುಕುಮುರುಕು 'ಕಂಟೋನ್ಮೆಂಟ್ ಕನ್ನಡ' ದಲ್ಲಿ

"ಹೌದು. ನನಗೆ ತುಂಬ ಆಸೆಯಾಗಿದೆ."

"ಭರತನಾಟ್ಯ ಒಳ್ಳೆಯ ವಂಶಸ್ಥರು ಕಲಿಯುವ ವಿದ್ಯೆಯಲ್ಲವಲ್ಲ ಸ್ವಾಮಿ. ಈ ಆಸೆ ನಿಮಗೇಕೆ ಹುಟ್ಟಿತು."

"ಆ ಕಾಲ ಆಗಿಹೋಯಿತು ರಾಮುಸ್ವಾಮಪ್ಪನವರೇ. ಈಗ ಭರತನಾಟ್ಯಕ್ಕೆ ತುಂಬ ಪ್ರಾಶಸ್ತ್ಯ ಬಂದು ಬಿಟ್ಟಿದೆ. ಮದರಾಸಿನಲ್ಲಿ ಕುಲೀನ ಮನೆತನದ ಹೆಣ್ಣುಮಕ್ಕಳು ತಂಡೋಪತಂಡವಾಗಿ ಭರತನಾಟ್ಯ ಕಲಿಯುತ್ತಿ

ದ್ದಾರೆ. ಮೊನ್ನೆ ಬಂದಿದ್ದ ಉದಯಶಂಕರ್ ಅವರ ಪ್ರದರ್ಶನ ನೋಡಿದಿರಷ್ಟೆ. ಉದಯಶಂಕರ್ ಒಳ್ಳೆಯ ವಂಶಸ್ಥರು. ಸುಸಂಸ್ಕೃತರು. ಅವರು ನಾಟ್ಯವಿದ್ಯೆ ಕಲಿತು ದೇಶವಿದೇಶಗಳಲ್ಲಿ ಪ್ರದರ್ಶನಗಳನ್ನಿತ್ತು ಕೀರ್ತಿ ಸಂಪಾದಿಸಿದ್ದಾರೆ."

ಎಂದು ಆನಂದರಾಯರು ವಿವರಿಸಿದರು. ಕೀರ್ತಿ ಥಟ್ಟನೆ ರಾಮಸ್ವಾಮಪ್ಪನನ್ನು ಕೇಳಿದ

"ನೀವು ಉದಯಶಂಕರ್ ಅವರ ನಾಟ್ಯ ನೋಡಿದಿರಾ?"

"ನೋಡಿದೆ."

"ನಿಮ್ಮ ಅಭಿಪ್ರಾಯವೇನು?"

"ಪ್ರದರ್ಶನ ಚನ್ನಾಗಿದೆ. ತುಂಬ ಕಷ್ಟಪಟ್ಟಿದ್ದಾರೆ."

"ಅವರ ಕಲೆ........?"

"ನೋಡಿ ಸ್ವಾಮಿ. ನಾವು ಹಳೆಯ ಕಾಲದವರು. ಸಂಪ್ರದಾಯ ಬಿಡದೆ ಗುರುಮುಖೇನ ವಿದ್ಯೆ ಅಭ್ಯಾಸ ಮಾಡಿಕೊಳ್ಳಬೇಕೆನ್ನುವವರು. ನಮ್ಮ ದೇಶದಲ್ಲಿ ಭರತನಾಟ್ಯವಲ್ಲದೆ ಕಥಾಕಳಿ, ಕಥಕ, ಮಣಿಪೂರಿ ಸಂಪ್ರದಾಯಗಳೂ ಇವೆ. ಇವುಗಳಲ್ಲಿ ಭರತನಾಟ್ಯವೇ ಶ್ರೇಷ್ಠ ಎಂದು ನಮ್ಮ ಅಭಿಪ್ರಾಯ. ಭರತನಾಟ್ಯ ಚೆನ್ನಾಗಿ ಬರಬೇಕಾದರೆ ಉಳಿದ ಸಂಪ್ರದಾಯಗಳ ಗೊಡವೆಗೆ ಹೋಗಬಾರದು. ಈ ನಾಲ್ಕು ಸಂಪ್ರದಾಯಗಳ ತಂತ್ರ, ಶಾಸ್ತ್ರ, ಅಭಿನಯ ತೀರ ಭಿನ್ನವಾದುದು. ಎಲ್ಲವನ್ನೂ ಕಲಿಯಲು ಹೋದರೆ ಒಂದೂ ಬರುವುದಿಲ್ಲ. ಉದಯಶಂಕರ್ ಅವರು ಒಳ್ಳೆಯ ಕಲಾವಿದರೇನೊ ನಿಜ. ಆದರೆ ಅವರು ಯಾವದನ್ನೂ ಸರಿಯಾಗಿ ಸಂಪ್ರದಾಯಬದ್ಧವಾಗಿ ಕಲಿತಿಲ್ಲ. ನಮ್ಮ ದೇಶದ ನಾಟ್ಯಗಳ ಜತೆಗೆ ವಿಲಾಯತಿ ನಾಟ್ಯಗಳನ್ನೂ ಸೇರಿಸಿ ಹದಗೆಡಿಸುತ್ತಿದ್ದಾರೆ."

"ಒಂದಕ್ಕೊಂದು ಸೇರಿಸಲೇ ಬಾರದೆಂದು ನಿಮ್ಮ ಅಭಿಪ್ರಾಯವೇ?"

"ಖಂಡಿತವಾಗಿ. ನಾಟ್ಯ ಒಂದು ಭಾಷೆ. ಶಬ್ದಗಳಲ್ಲಿ ಭಾಷೆ ವ್ಯಕ್ತಪಡಿಸುವ ಭಾವವನ್ನು ಅಭಿನಯದಿಂದ ನಾಟ್ಯ ವ್ಯಕ್ತ ಮಾಡುತ್ತದೆ. ಕನ್ನಡದ ಜತೆಗೆ ತೆಲುಗು, ತಮಿಳು, ಉರ್ದು ಸೇರಿಸಿ ಮಾತನಾಡಿದರೆ ಹೇಗೆ ಆಭಾಸವಾಗುತ್ತದೋ ಹಾಗೆ ಭರತನಾಟ್ಯದ ಜತೆಗೆ ಕಥಕ, ಕಥಾಕಳಿ, ಮಣಿಪೂರಿ

ಸೇರಿಸಿದರೆ ಆಭಾಸವಾಗುತ್ತದೆ. ಕನ್ನಡ ಮಾತನಾಡುವಾಗ ಕನ್ನಡವನ್ನೇ ಮಾತನಾಡಬೇಕು. ತೆಲುಗು, ತಮಿಳು, ಉರ್ದು ಚೆನ್ನಾಗಿಲ್ಲವೆಂತಲ್ಲ! ಅವೂ ಚೆನ್ನಾಗಿಯೇ ಇವೆ. ಅವುಗಳನ್ನು ಮಾತನಾಡುವಾಗಲೂ ಬೇರೆ ಭಾಷೆ ಸೇರಿಸದೆ ಮಾತನಾಡಬೇಕು. ಈ ಮಾತು ನಾಟ್ಯಕ್ಕೂ ಅನ್ವಯಿಸುತ್ತದೆ. ”

“ ನೀವು ಹೇಳುವ ಹಾಗೆ ಸಂಪ್ರದಾಯಬದ್ಧವಾಗಿ ಭರತನಾಟ್ಯ ಎಷ್ಟು ದಿವಸಗಳಲ್ಲಿ ಕಲಿಯಬಹುದು. ”

“ ನಾಲ್ಕು ವರ್ಷಗಳಲ್ಲಿ ಕಲಿಯಬಹುದು – ನಲವತ್ತು ವರ್ಷಗಳು ಪ್ರಯತ್ನಪಟ್ಟರೂ ಕಲಿಯದೆ ಇರಲೂ ಬಹುದು. ಕಲಿಯುವವರ ಭಕ್ತಿ ಕಲಿಸುವವರ ಶ್ರದ್ಧೆಯನ್ನವಲಂಬಿಸುವ ವಿಷಯ ಇದು. ”

“ ನಿಮ್ಮಲ್ಲಿ ಕಲಿಸುವ ಶ್ರದ್ಧೆಯಿದೆ. ಕೀರ್ತಿಯವರಲ್ಲಿ ಕಲಿಯುವ ಭಕ್ತಿ ಇದೆ. ನೀವಿಬ್ಬರೂ ಜತೆಗೂಡಿದರೆ ಭರತನಾಟ್ಯ ಬದುಕಿಕೊಳ್ಳುತ್ತದೆ ರಾಮುಸ್ವಾಮಪ್ಪನವರೇ. ”

ಎಂದು ಆನಂದರಾಯರು ಸೂಚಿಸಿದರು.

“ ಕಲಿಸುವುದಕ್ಕೆ ನಾನು ಸಿದ್ಧವಾಗಿದ್ದೇನಲ್ಲ ಸ್ವಾಮಿ. ಸವ್ಯ ಇಂಥವರು ಯಾರಾದರೂ ಮುಂದೆ ಬಂದು ನಶಿಸಿ ಹೋಗುತ್ತಿರುವ ಈ ಕಲೆಯ ಕೈ ಹಿಡಿದಾರೇ ಎಂದು ನಾನು ಕಾಯುತ್ತಿದ್ದೆ. ದೇವರೇ ಇವರನ್ನಿಲ್ಲಿ ಕರೆದುಕೊಂಡು ಬಂದಿದ್ದಾನೆ. ”

“ ನಶಿಸಿ ಹೋಗುತ್ತಿರುವ ಕಲೆಯೆಂದೇಕೆ ಹೇಳುವಿರಿ ರಾಮುಸ್ವಾಮಪ್ಪನವರೇ ? ”

“ ಅಷ್ಟಲ್ಲದೆ ಇನ್ನೇನು ಸ್ವಾಮಿ. ನಮ್ಮ ಕಲೆ ಯಾರಿಗೆ ಬೇಕಾಗಿದೆ. ಈ ಕಲೆಗೆ ರಾಜಾಶ್ರಯವಿಲ್ಲ – ಜನಗಳ ಆಶ್ರಯವಿಲ್ಲ. ಮೊದಲು ತಾಫೆ ಇಲ್ಲದೆ ಯಾವ ಶುಭ ಕೆಲಸವೂ ಆಗುವುದಕ್ಕೇ ಸಾಧ್ಯವಿರಲಿಲ್ಲ. ಈಗ ಗ್ರಾಮಫೋನು, ರೇಡಿಯೊ ಇಟ್ಟುಕೊಂಡು ಶುಭ ಕೆಲಸಗಳನ್ನು ಮುಗಿಸಿಬಿಡುತ್ತಾರೆ. ”

“ ಪ್ರೋತ್ಸಾಹವಿಲ್ಲದೆ ಈ ಕಲೆ ಮೂಲೆಗುಂಪಾಗುತ್ತಿದೆಯೆನ್ನುವುದನ್ನು ನಾನು ಒಪ್ಪುತ್ತೇನೆ ರಾಮುಸ್ವಾಮಪ್ಪನವರೇ. ಆದರೆ ಕಲಾವಿದರ ಅವಿವೇಕವೂ

ಈ ಅವನತಿಗೆ ಕಾರಣವಾಗಿಲ್ಲವೇ ? "

" ಭರತನಾಟ್ಯ ಹಾಳಾಗುವುದಕ್ಕೆ ಅವರೇ ಮುಖ್ಯ ಕಾರಣ ಸ್ವಾಮಿ. ಕಲಿಯುವವರಲ್ಲಿ ಶ್ರದ್ಧೆ ಭಕ್ತಿ ಸಂಪೂರ್ಣವಾಗಿ ಲಯವಾಗಿ ಹೋಗಿವೆ. ಪೂರ್ವದಲ್ಲಿ ಕಲಾವಂತರು ಭರತನಾಟ್ಯವನ್ನು ಹತ್ತಾರು ವರ್ಷ ಭಕ್ತಿಯಿಂದ ಗುರುಮುಖೇನ ಅಭ್ಯಾಸ ಮಾಡುತ್ತಿದ್ದರು. ಯಾವನಾದರೂ ಒಬ್ಬನನ್ನು ನಂಬಿಕೊಂಡು ತಮ್ಮ ವಿದ್ಯೆ ಊರ್ಜಿತಪಡಿಸಿಕೊಳ್ಳುತ್ತಿದ್ದರು. ಈಗ, ನಾಲ್ಕು ತಿಂಗಳು ಕಲಿತರೆ ಸಾಕು – ಅವಳಾಗಲೇ ಪ್ರವೀಣೆಯಾಗಿ ಬಿಡುತ್ತಾಳೆ. ಮದುವೆ ಮನೆಗಳಲ್ಲಿ ತಾಫೆ ಕಟ್ಟುತ್ತಾಳೆ. ತಾಫೆ ಕಟ್ಟುವ ನೆಪದಲ್ಲಿ ಗಿರಾಕಿ ಗಳನ್ನು ಸಂಪಾದಿಸುತ್ತಾಳೆ. ನಾಟ್ಯವಿದ್ಯೆ ಅವರಿಗೆ ಗಿರಾಕಿಗಳನ್ನು ಹೊಂದಿಸಿ ಕೊಡುವ ಸಾಧನವಾಗಿದೆ. – ನಾಟ್ಯ ವೇದದ ಸಮಾನ ಸ್ವಾಮಿ. ಅದನ್ನು ತಪಸ್ಸಿನಿಂದ ಪಡೆದುಕೊಳ್ಳಬೇಕಲ್ಲದೆ ವಿಷಯಾಸಕ್ತಿಯಿಂದಲ್ಲ. ನಾನೂ ನಮ್ಮಕ್ಕ ಇದುವರೆವಿಗೆ ನೂರಾರು ಜನಕ್ಕೆ ನಾಟ್ಯ ಕಲಿಸಿದ್ದೇವೆ. ನಮ್ಮ ಹೆಸರು ಉಳಿಸಿ, ವಿದ್ಯೆಯನ್ನು ಮುಂದುವರಿಸಿಕೊಂಡು ಹೋಗುವವರು ಒಬ್ಬರೂ ಇಲ್ಲ – ಇದೇ ನಮಗೊಂದು ದೊಡ್ಡ ವ್ಯಸನ. "

" ನಿಮ್ಮ ಅಕ್ಕನವರಿಗೂ ನಾಟ್ಯವಿದ್ಯೆ ಬರುತ್ತದೆಯೇನು ? "

ಎಂದು ಕೀರ್ತಿ ಕೇಳಿದ. ರಾಮಸ್ವಾಮಪ್ಪ ಮೌನವಾಗಿದ್ದುದನ್ನು ಕಂಡು ಆನಂದರಾಯರು

" ಜಯಮ್ಮನವರ ಹೆಸರು ಕೇಳದೆ ಇರುವವರೇ ಇಲ್ಲ ಕೀರ್ತಿಗಳೇ. ದಕ್ಷಿಣ ಹಿಂದೂಸ್ಥಾನದಲ್ಲಿಯೇ ಅವರಂಥ ನಾಟ್ಯಕಲಾ ಪ್ರವೀಣೆಯರು ಇನ್ನೊಬ್ಬರಿಲ್ಲ. ಈಗ ವಯಸ್ಸಾಗಿದೆ – ಅಭಿನಯ ಮಾಡುವುದಿಲ್ಲ. "

ಜಯಮ್ಮನವರ ಅಭಿನಯ ನೋಡಬೇಕೆಂಬ ಉತ್ಕಟೇಚ್ಛೆ ಕೀರ್ತಿಯ ಮನಸ್ಸಿನಲ್ಲಿ ಮೂಡಿತು.

" ಜಯಮ್ಮನವರ ಅಭಿನಯ ನೋಡಬೇಕಲ್ಲ. ಅವರು ಹೆಚ್ಚು ಶ್ರಮ ವಹಿಸಬೇಕಾಗಿಲ್ಲ – ಕುಳಿತುಕೊಂಡೇ ಅಭಿನಯ ತೋರಿಸಿದರೂ ಸಾಕು. "

ಎಂದು ಕೀರ್ತಿ ಪ್ರಾರ್ಥಿಸಿಕೊಂಡ.

" ಅವರದು ಇವತ್ತು ಬೇಡ. ಮತ್ತೆ ಯಾವಾಗಲಾದರೂ ಆಗಲಿ. ಅವರೇ ಶಿಕ್ಷಣವಿತ್ತಿರುವ ಇಬ್ಬರು ಮಕ್ಕಳ ಅಭಿನಯ ಮಾಡಿಸುತ್ತೇನೆ. "

ಎಂದು ರಾಮಸ್ವಾಮಪ್ಪ ಸಮಾಧಾನ ಹೇಳಿ ಎದ್ದು ಒಳಕ್ಕೆ ಹೋದ.

ಕೀರ್ತಿ, ಅವನ ಗೆಳೆಯರು ರಾಮಸ್ವಾಮಪ್ಪನ ಮನೆಯ ರೂಪಲಕ್ಷಣಗಳನ್ನು ವೀಕ್ಷಿಸಿದರು. ಹಳೆಯ ಕಾಲದ ಮಣ್ಣಿನ ಮನೆ. ಚಾಪೆ, ಗಳು ಹಾಕಿ, ಮೇಲೆ ಮಣ್ಣು ಸುರಿದು ಕಟ್ಟಿದ ಮೇಲ್ಚಾವಣಿ. ನೆಲದ ಮೇಲೆ ನಿಂತುಕೊಂಡು ಚಾವಣಿಯನ್ನು ಬೆರಳು ತುದಿಯಿಂದ ಸುಲಭವಾಗಿ ಮುಟ್ಟಬಹುದಾಗಿತ್ತು. ಪ್ರಮಾಣವಿಲ್ಲದೆ ಕಟ್ಟಿದ ಗೋಡೆಗಳು, ಹಜಾರಕ್ಕೆ ಬರುವ ಮುನ್ನವೇ ಸ್ನಾನಗೃಹ – ಶೌಚಗೃಹ. ಹಜಾರದ ಅತ್ತಿತ್ತ ಕೋಣೆಗಳು. ಅವುಗಳಲ್ಲಿ ಒಂದು ಅಡಿಗೆಯ ಮನೆ. ಕೋಣೆಯ ಬಾಗಿಲುವಾಡಗಳಿಗೆ ಮಣಿ ತೋರಣಗಳು. ಹಜಾರದಲ್ಲಿ ನಾಲ್ಕಾರು ಗುಳೋಪುಗಳು, ರಸಗುಂಡುಗಳು ತೂಗುಹಾಕಲ್ಪಟ್ಟಿದ್ದವು. ಗೋಡೆಯ ಒಂದೆಡೆ ಹಣತೆಯಿಡಲು ನೇತು ಹಾಕಿದ್ದ ಮರದ ಪೀಠ. ಅದರ ಸುತ್ತ ಹೊಗೆಯ ಪ್ರಭಾವಳಿ. ಹಜಾರದಲ್ಲಿದ್ದ ಒಂದು ಗೂಡಿನಲ್ಲಿ ಲಾಟೀನು. ಗೋಡೆಗಳನ್ನು ಹಳೆಯ ಕಾಲದ ಕೈಬರೆಹದ ಚಿತ್ರಗಳು ಅಲಂಕರಿಸಿದ್ದವು. ಅವುಗಳ ಜತೆಗೆ ಅಲ್ಲಲ್ಲಿ ರವಿವರ್ಮನ ಮಾನಿನಿ, ವಾರಿಣಿ, ತಿಲೋತ್ತಮೆಯರು. ಗೋಡೆಯೊಂದರ ಮೇಲೆ ದೊಡ್ಡ ಪ್ರಮಾಣದ ಶ್ರೀರಾಮ ಪಟ್ಟಾಭಿಷೇಕ ಮತ್ತು ತಿರುಪತಿ ವೆಂಕಟಾಚಲಪತಿ ಚಿತ್ರಗಳು. ಕೋಣೆಗೆ ಪ್ರವೇಶ ಮಾಡುವ ಬಾಗಿಲುವಾಡದ ಮೇಲುಗಡೆ ಜಯಮ್ಮ, ಅವರ ತಾಯಿಯ ಕೆಲವು ನಾಟ್ಯಚಿತ್ರಗಳು.

" ನೋಡಿ, ಕಲಾವಿದರಿಗೆ ಎಂಥಾ ದುರ್ಗತಿ ಬಂದಿದೆ ಈಗ "

ಎಂದು ಆನಂದರಾಯರು ಕಳಕಳಿಯಿಂದ ನುಡಿದರು.

" ಶಿಕ್ಷಣ ಕೊಡುವ ವಿಷಯ ಮಾತನಾಡಿ ಗೊತ್ತುಮಾಡಿ ಬಿಡಿ ಆನಂದ ರಾಯರೇ "

ಎಂದು ಕೀರ್ತಿ ತಿಳಿಸಿದ.

ಹತ್ತು ಹದಿನೈದು ನಿಮಿಷಗಳ ತರುವಾಯ ರಾಮಸ್ವಾಮಪ್ಪ ಕೈಯಲ್ಲಿ ತಟ್ಟೆ, ಬಟ್ಟಲುಗಳನ್ನು ಹಿಡಿದು ಪ್ರವೇಶಿಸಿದ.

" ಇದೆಲ್ಲಾ ಏಕೆ ರಾಮಸ್ವಾಮಪ್ಪನವರೇ. "

ಎಂದು ಆನಂದರಾಯರು ಕೇಳಿದರು.

" ಬಡವರ ಮನೆಗೆ ತಾವುಗಳೆಲ್ಲಾ ಬಂದಿರುವಾಗ ಸ್ವಲ್ಪ ಹಾಲೂಹಣ್ಣು ಬೇಡವೇ ? "

" ನಿಮ್ಮಂಥ ಶ್ರೀಮಂತರೇ ಇಲ್ಲ. ಬಡವರು ಎಂದೇಕೆ ಹೇಳಿಕೊಳ್ಳು ವಿರಿ. ನಾಟ್ಯಸರಸ್ವತಿಯ ವರಪುತ್ರರು ನೀವು. "

ಎಂದು ಆನಂದರಾಯರು ಉಪಚರಿಸಿದರು. ಎಲ್ಲರ ಮುಂದೆಯೂ ಹಣ್ಣಿನ ತಟ್ಟೆ, ಹಾಲಿನ ಬಟ್ಟಲು ಬಂದಿತು. ಉಪಾಹಾರ ಮುಗಿದ ಮೇಲೆ ರಾಮಸ್ವಾಮಪ್ಪ ತಾಂಬೂಲದ ತಟ್ಟೆ ತಂದಿಟ್ಟು ತಾನೂ ಕುಳಿತುಕೊಂಡ.

" ಜಯಮ್ಮನವರು ಬರುತ್ತಾರೋ ? "

" ಇಗೋ ಬರುತ್ತಾರೆ. ಮನೆಯಲ್ಲಿ ಯಾರೂ ಇಲ್ಲ. ನಾನೂ ಅಕ್ಕ ಇಬ್ಬರೇ ಇರುವುದು. ಅವರೇ ಎಲ್ಲಾ ನೋಡಿಕೊಳ್ಳಬೇಕಾಗಿದೆ. "

" ಶಿಷ್ಯರು ಇದ್ದಾರೆ ಎಂದಿರಿ ? "

" ಅವರೂ ಬಂದಿದ್ದಾರೆ. "

ಜಯಮ್ಮ ತನ್ನ ಇಬ್ಬರು ಶಿಷ್ಯೆಯರೊಡನೆ ಪ್ರವೇಶಿಸಿದಳು. ಜಯಮ್ಮನ ವಯಸ್ಸು ಅರವತ್ತು ದಾಟಿತ್ತಾದರೂ ಮುಖದಲ್ಲಿ ಸೌಮ್ಯ ಸೌಂದರ್ಯ ನೆಲ ಸಿತ್ತು. ತಲೆಯಲ್ಲಿ ಒಂದಾದರೂ ಬಿಳಿ ಕೂದಲಿರಲಿಲ್ಲ. ಬೈತಲೆ ಅರ್ಧ ಅಂಗುಲದಷ್ಟು ವಿಸ್ತರಿಸಿಕೊಂಡಿತ್ತು. ಆಕೆಯ ಕಿವಿಯಲ್ಲಿದ್ದುದು ಕೆಂಪಿನೋಲೆ; ಮೂಗಿನ ಮೇಲೆ ವಜ್ರದ ನತ್ತು ಹೊಳೆಯುತ್ತಿತ್ತು. ಕೊರ ಳಲ್ಲಿ ಒಂದು ಗುಂಡು ಸರ. ಹಳೆಯ ಕಾಲದ ಪೀತಾಂಬರ, ತೋಳುದ್ದದ ಹಸಿರು ರವಿಕೆ ಧರಿಸಿದ್ದಳು. ಚಿನ್ನದ ಬಳೆಗಳ ಜತೆಗೆ ಕೈತುಂಬ ಚರ್ಕಿಸಾಣೆ ಕೆಂಪು ಬಳೆಗಳು ಶೋಭಿಸುತ್ತಿದ್ದವು. ಹಣೆಯ ಮೇಲೆ ದೊಡ್ಡದಾಗಿ ದುಂಡು ಕುಂಕುಮ. ಕೆನ್ನೆಯ ಮೇಲೆ ಅರಶಿನ. ತಲೆಯ ತುಂಬ ಹೂ. ಜಯಮ್ಮ ಸಮಕಾಲೀನ ವ್ಯಕ್ತಿಯಂತೆ ಕಾಣದೆ, ಯಾವದೋ ಪುರಾಣದ ಪುಟದಂತಿ ದ್ದಳು. ಕೀರ್ತಿ, ಆನಂದರಾಯರು, ಕೀರ್ತಿಯ ಗೆಳೆಯರು ಎದ್ದು ನಿಂತು ಆಕೆಗೆ ನಮಸ್ಕರಿಸಿದರು.

" ಕುಳಿತುಕೊಳ್ಳಿಯಪ್ಪ. ನೀವೆಲ್ಲಾ ಬಂದದ್ದು ತುಂಬ ಸಂತೋಷ. "

" ನಿಮ್ಮ ಅಭಿನಯ ನೋಡಬೇಕೆಂದು ತುಂಬ ಆಸಕ್ತರಾಗಿದ್ದೆವು. "

" ಅಯ್ಯೋ ! ಆ ಕಾಲ ಆಗಿ ಹೋಯ್ತಪ್ಪ. ಅಭಿನಯ ಮಾಡುವಷ್ಟು

ದೇಹತ್ರಾಣವಿಲ್ಲ. ಆಗಲಿ. ಯಾವಾಗಲಾದರೂ ಕುಣಿತೇ ಅಭಿನಯ ತೋರಿಸುತ್ತೇನೆ. ಇವತ್ತು ಈ ಮಕ್ಕಳು ಭಾಮಾ, ಚಿನ್ನ ಅಭಿನಯಿಸುತ್ತಾರೆ."

" ನಿಮ್ಮ ಶಿಷ್ಯರೇ. "

" ಹೌದು. ಆದರೆ ನನಗಿಂತ ಹೆಚ್ಚು ಪಾಠ ರಾಮೂನೇ ಹೇಳಿದ್ದಾನೆ."

" ಆರಂಭಿಸಬಹುದೋ ? " ಎಂದು ರಾಮಸ್ವಾಮಪ್ಪ ಕೇಳಿದ.

ಆನಂದರಾಯರು ಎಲ್ಲರ ಪರವಾಗಿ 'ಆಗಬಹುದು' ಎಂದರು. ರಾಮಸ್ವಾಮಪ್ಪ ಗೌಸಣಿಗೆ ತೆಗೆದು ತಂಬೂರಿಯನ್ನು ತಂದು ಅಕ್ಕನ ಕೈಯಲ್ಲಿತ್ತ. ಶಿಷ್ಯೆಯರಿಬ್ಬರೂ ಕಾಲುಗಳಿಗೆ ಗೆಜ್ಜೆ ಬಿಗಿದುಕೊಂಡರು. ರಾಮಸ್ವಾಮಪ್ಪ ಕೈಯಲ್ಲಿ ಮುರ, ಕೋಲು ಹಿಡಿದು ತಾಳ ಹಾಕಲು ಕುಳಿತ.

ಜಯಮ್ಮ ತನ್ನ ಭವ್ಯ ಕಂಠದಿಂದ ನಾಂದಿ ಶ್ಲೋಕ ಹಾಡಿದಳು. ಇಳಿವಯಸ್ಸಿನಲ್ಲಿಯೂ ಜಯಮ್ಮನ ಕಂಠದಲ್ಲಿದ್ದ ಸೌಷ್ಟವ, ಶ್ರುತಿಬದ್ಧತೆ, ನಾದ ಸಂಪತ್ತು ಎಲ್ಲರನ್ನೂ ಬೆರಗುಗೊಳಿಸಿತು.

ಮಕ್ಕಳು ಒಂದು ವರ್ಣಕ್ಕೆ ಅಭಿನಯ ಕಟ್ಟಿದರು. ತರುವಾಯ ಒಂದೆರಡು ಪದಗಳಾದವು. ಕೊನೆಗೆ ಜಯದೇವ ಕವಿಯ ಅಷ್ಟಪದಿ, ಪ್ರದರ್ಶನ ಒಂದೂವರೆ ಗಂಟೆಕಾಲ ಸತತವಾಗಿ ನಡೆಯಿತು. ಯಾರಿಗೂ ಕಾಲದ ನಡೆಯ ಕಡೆ ಗಮನವಿಲ್ಲ. ಮಂಗಳಾಚರಣೆಯ ಶ್ಲೋಕ ಹಾಡಿ ಜಯಮ್ಮ ತಂಬೂರಿ ಮೆಲ್ಲನೆ ಕೆಳಗಿಳಿಸಿದಳು. ಕೀರ್ತಿಯ ಬಾಯಿಂದ ಸಹಜೋದ್ಗಾರ ಹೊರಟಿತು.

" This is real Art ( ಇದೇ ನಿಜವಾದ ಕಲೆ )"

" Real and great " ( ನಿಜ ಹಾಗೂ ಭವ್ಯ ) "

ಎಂದು ಆನಂದರಾಯರು ಸೇರಿಸಿದರು.

ಜಯಮ್ಮ ನಸುನಗುತ್ತ

" ಅದೇನು ಸ್ವಾಮಿ ಇಂಗ್ಲಿಷಿನಲ್ಲಿ ಹೇಳಿದಿರಿ. ನಾವು ಅಶಿಕ್ಷಿತ ಜನ – ನಮಗೆ ಕನ್ನಡದಲ್ಲಿ ಹೇಳಿ " ಎಂದಳು.

ಆನಂದರಾಯರು ಬಾಯಿಯ ಮೇಲೆ ಬೆರಳಿಟ್ಟುಕೊಂಡು

" ನೀವು ಅಶಿಕ್ಷಿತರೇ ತಾಯಿ – ನಾಟ್ಯ ಸರಸ್ವತಿ ನಿಮ್ಮ ಹೃದಯದಲ್ಲಿ ನೆಲಸಿದ್ದಾಳೆ. "

" ಅಯ್ಯೋ – ನಮ್ಮಂಥವರನ್ನು ಆಶ್ರಯಿಸಿ ಸರಸ್ವತಿ ಗತಿಹೀನೆ ಯಾದಳು. ".

" ವಿದ್ಯೆಗೆ ನಾಶವಿಲ್ಲ ಜಯಮ್ಮನವರೇ. ಕಾಲಪರಿಸ್ಥಿತಿಯಿಂದ ತಾತ್ಕಾಲಿಕ ಕ್ಷೋಭೆ ಬಂದಿರಬಹುದು. ಸೂರ್ಯನಿಗೂ ಗ್ರಹಣ ಹಿಡಿಯುವು ದಿಲ್ಲವೇ ? "

" ನಿಮ್ಮ ಶಿಷ್ಯರು ಬಹಳ ಚೆನ್ನಾಗಿ ಅಭಿನಯಿಸುತ್ತಾರೆ. "

ಎಂದು ಕೀರ್ತಿ ಮೆಚ್ಚುಗೆ ವ್ಯಕ್ತಪಡಿಸಿದ.

" ಇವರಿಗಿಂತ ಚೆನ್ನಾಗಿ ಅಭಿನಯಿಸುತ್ತಿದ್ದ ಎಷ್ಟೋ ಜನಗಳಿಗೆ ಪಾಠ ಹೇಳಿದ್ದೇನಪ್ಪಾ. ಎಲ್ಲರೂ ದಿಕ್ಕಾಪಾಲಾದರು. ಸಂಪಾದನೆಗೆ ಹೊರಟ ಮೇಲೆ ವಿದ್ಯೆಗೆ ಗೌರವ ಹೇಗೆ ಉಳಿಯುತ್ತದೆ. ಭರತ ನಾಟ್ಯಕ್ಕೆ ದೈಹಿಕ ಮಾನಸಿಕ ಶುದ್ಧತೆ ಬೇಕು. ಇದು ಒಂದು ಯೋಗ. ಶ್ರದ್ಧೆಯಿಂದ ಮುಂದು ವರಿದರೆ ಸಿದ್ಧಿ ದೊರಕುತ್ತದೆ– ಆಸೆಗಳಿಗೆ ಮನಸೋತರೆ ಯೋಗಭ್ರಷ್ಟತ್ವ, ಪ್ರಾಪ್ತಿಯಾಗುತ್ತದೆ. "

" ನಮ್ಮ ಕೀರ್ತಿಯವರಿಗೆ ಪಾಠ ಹೇಳಿಕೊಡಿಯಮ್ಮ. ನಿಮ್ಮ ವಿದ್ಯೆಯ ಗೌರವ ಕಾಪಾಡಿ, ದೇಶದೇಶಗಳಲ್ಲಿ ಅದನ್ನು ಪ್ರಸಾರ ಮಾಡುತ್ತಾರೆ. ದೇವರು ಅವರಿಗೆ ಎಲ್ಲಾ ಅನುಕೂಲವನ್ನೂ ಕೊಟ್ಟಿದ್ದಾನೆ. "

" ಆಗಬಹುದು. ನನ್ನ ಅಭ್ಯಂತರವೇನೂ ಇಲ್ಲ. "

ಎಂದು ಜಯಮ್ಮ ಆಶ್ವಾಸನವಿತ್ತಳು. ಆನಂದರಾಯರು, ರಾಮ ಸ್ವಾಮಪ್ಪನ ಕಡೆ ತಿರುಗಿ

" ವ್ಯವಹಾರ ಭಾಗ ಮುಗಿಸಿಬಿಟ್ಟು, ಪಾಠ ಯಾವತ್ತು ಆರಂಭಿಸುವು ದೆಂದು ನಿಶ್ಚಯಿಸಿದರೆ ಒಳ್ಳೆಯದಲ್ಲವೇ ? "

" ವ್ಯವಹಾರ ಭಾಗವೇನು ಬಂತು ಸ್ವಾಮಿ. ನೀವು ಹೇಗೆ ಹೇಳಿದರೆ ಹಾಗೆ ಮಾಡುವುದಕ್ಕೆ ನಾನು ಸಿದ್ಧನಾಗಿದ್ದೇನೆ. ಪಕ್ಕವಾದ್ಯಕ್ಕೆ ಒಬ್ಬ ಮೃದಂಗದವನನ್ನು ಗೊತ್ತು ಮಾಡಿಕೊಂಡರೆ ಒಳ್ಳೆಯದು – ತಾಳ ಖಚಿತ ವಾಗುತ್ತದೆ. ಇವತ್ತು ಶುಕ್ರವಾರ – ನಾಳೆ ಗುರುವಾರ ದಿನ ಚೆನ್ನಾಗಿದೆ. ಗುರುವಾರ ಗೆಜ್ಜೆಪೂಜೆ ಮಾಡಿಬಿಡಬಹುದು. "

" ಅದಕ್ಕೆ ಸ್ವಲ್ಪ ಖರ್ಚು ತಗಲುತ್ತದಲ್ಲವೇ ? "

" ಹೌದು. ನಮ್ಮ ಜನಗಳನ್ನೆಲ್ಲಾ ಕರೆದು ಊಟ ಹಾಕಬೇಕಾಗುತ್ತದೆ. "

ಕೀರ್ತಿ ತಿಂಗಳಿಗೆ ನೂರೈವತ್ತು ಕೊಡುವುದೆಂದೂ, ಅದರಲ್ಲಿಯೇ ಮೃದಂಗದವನ ಖರ್ಚು ರಾಮಸ್ವಾಮಪ್ಪ ಪೂರೈಸಬೇಕೆಂದೂ ಆನಂದರಾಯರು ಸೂಚಿಸಿ, ಗೆಜ್ಜೆಪೂಜೆಗೆ ಮುನ್ನೂರು ರೂಪಾಯಿಗಳನ್ನು ಗೊತ್ತುಮಾಡಿದರು. ರಾಮಸ್ವಾಮಪ್ಪ, ಜಯಮ್ಮ ಸಂತೋಷ ವ್ಯಕ್ತ ಮಾಡಿದರು.

ಹೊರಡಲನುವಾಗಿ ಎಲ್ಲರೂ ಎದ್ದರು.

ರಾಮಸ್ವಾಮಪ್ಪ ವಿನಯದಿಂದ

" ಹೊತ್ತಾಯಿತು. ಇವರು ಬಹಳ ದೂರ ಹೋಗಬೇಕು. "

" ಯೋಚನೆಯಿಲ್ಲ – ಕಾರು ತಂದಿದ್ದಾರೆ. ಜಯಮ್ಮನವರೇ, ನೀವು ಒಂದು ದಿನ ನನ್ನ ಕಲಾಶಾಲೆಯಲ್ಲಿ ಪ್ರದರ್ಶನ ಕೊಡಬೇಕು. ಭರತನಾಟ್ಯಾಭಿಮಾನಿಗಳು ನಮ್ಮೂರಿನಲ್ಲಿಯೂ ಕೆಲವರಿದ್ದಾರೆ. ಅವರನ್ನು ಕರೆಯಬೇಕೆಂದು ನನಗೆ ತುಂಬ ಮನಸ್ಸಾಗಿದೆ. "

" ನನ್ನ ಅಭಿನಯ ಈಗ ಯಾರಿಗೆ ಬೇಕು ರಾಯರೇ. ಸಣ್ಣ ಪುಟ್ಟ ಹುಡುಗಿಯರು ಕುಣಿದರೆ ಜನ ಎವೆ ಹಾಕದೆ ನೋಡುತ್ತಾರೆ. "

" ಹಾಗಲ್ಲಮ್ಮ. ನಿಮ್ಮಂಥ ವಿದುಷಿಯರನ್ನು ಅರ್ಥ ಮಾಡಿಕೊಳ್ಳುವವರೂ ಕೆಲವರಿದ್ದಾರೆ. "

" ಆಗಲಿ. ಸ್ವಲ್ಪ ಕಾಲಾವಕಾಶ ಕೊಡಿ. ನನಗೂ ಎಲ್ಲಾ ಮರೆತು ಹೋಗುತ್ತಿದೆ. ನಾಲ್ಕು ದಿನ ನಾನೂ ಅಭ್ಯಾಸ ಮಾಡಿಕೊಳ್ಳುತ್ತೇನೆ. "

ಎಂದು ಹೇಳಿದಳು.

ರಾಯರೊಂದಿಗೆ ಕೀರ್ತಿ, ಅವನ ಗೆಳೆಯರು ಅವರ ಮನೆಯ ಬಳಿಗೆ ಬಂದರು. ಕೀರ್ತಿ ಹೃತ್ಪೂರ್ವಕ ಕೃತಜ್ಞತೆಯನ್ನು ರಾಯರಿಗೆ ತಿಳಿಸಿ

" ನಾಳೆ ನಮ್ಮ ಮನೆಗೆ ಬಂದರೆ ಹಣ ಕೊಡುತ್ತೇನೆ. – ನಮ್ಮ ಮನೆ ಎಲ್ಲಿದೆ ಗೊತ್ತೋ ? ನಿಮಗೆ ಅನುಕೂಲವಾಗುವ ವೇಳೆ ತಿಳಿಸಿದರೆ ಕಾರ್ ಕಳಿಸಿಕೊಡುತ್ತೇನೆ. "

" ಬೇಡಿ – ನಾನೇ ಬರುತ್ತೇನೆ. ನಿಮ್ಮ ಮನೆ ನನಗೆ ಚೆನ್ನಾಗಿ ಗೊತ್ತು. ನಿಮ್ಮ ಮನೆ ಸಮೀಪದಲ್ಲಿ ನನಗೊಂದು ಪಾಠವೂ ಇತ್ತು. ನಾಳೆ

ಮೂರು ಗಂಟೆಗೆ ಶಾಲೆ ಮುಗಿದು ಹೋಗುತ್ತದೆ. ಮೂರೂವರೆ ವೇಳೆಗೆ ನಿಮ್ಮ ಮನೆಗೆ ಬರುತ್ತೇನೆ. ಆಗಬಹುದೋ?"

"ಹಾಗೇ ಆಗಲಿ."

ಎಂದು ಕೀರ್ತಿ ತನ್ನ ಒಪ್ಪಿಗೆ ಸೂಚಿಸಿದ.

ಕೀರ್ತಿ ದಾರಿಯಲ್ಲಿ ತನ್ನ ಗೆಳೆಯರನ್ನು ಅವರವರ ಮನೆ ಮುಟ್ಟಿಸಿ ತನ್ನ ಮನೆಗೆ ಬಂದ.

೫

ಕೃಷ್ಣಚಂದ್ರರು ಪ್ರತಿನಿತ್ಯ ಎಂಟು ಗಂಟೆಗೆ ಸರಿಯಾಗಿ ಊಟ ಮುಗಿಸುತ್ತಿದ್ದರು. ಅವರ ಜತೆ ಕರುಣ ತನ್ನ ಊಟವನ್ನು ಮುಗಿಸಿದ್ದಳು. ಜೆಸ್ಸಿ ಕೀರ್ತಿಯ ದಾರಿ ನೋಡುತ್ತಿದ್ದಳು.

ಕೀರ್ತಿ ಬರಲು ಅವನಿಗೆ ಮೇಜಿನ ಮೇಲೆ ಊಟ ಸಿದ್ಧಗೊಳಿಸಿ, ಜತೆಯಲ್ಲಿ ಜೆಸ್ಸಿ ಕುಳಿತುಕೊಂಡು

"ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆ ಸನ್ (Son)" ಎಂದು ಕೇಳಿದಳು. ಸಂತೋಷಸಾಗರದಲ್ಲಿ ಮುಳುಗಿದ್ದ ಕೀರ್ತಿಯ ಕಿವಿಗಳ ಮೇಲೆ ಜೆಸ್ಸಿಯ ಮಾತು ಬೀಳಲೇ ಇಲ್ಲ. ಜೆಸ್ಸಿ ಮತ್ತೊಮ್ಮೆ ಪ್ರಶ್ನೆ ಕೇಳಿ

"ಏನಾಯಿತು ಸನ್. ಇವತ್ತು ಬಹಳ ಸಂತೋಷವಾಗಿದ್ದೀ!"

"ಹೌದು ಜೆಸ್ಸಿ. ಐ ಆ್ಯಮ್ ವೆರಿ ಹ್ಯಾಪಿ (I am very happy.)"

"ಏನಾಯಿತು ಹೇಳಬಾರದೇ?"

ಕೀರ್ತಿ ಒಂದು ಟೋಸ್ಟ ಕೈಗೆ ತೆಗೆದುಕೊಂಡು, ಅದರ ಮೇಲೆ ತೆಳುವಾಗಿ ಜಾಮ್ ಸವರುತ್ತ

"ಡ್ಯಾಡಿ ನನ್ನ ಕೇಳಿದರೇ ಜೆಸ್ಸಿ."

"ಕೇಳಿದರು."

"ಎಚ್ಚರವಾಗಿದ್ದಾರೆಯೇ?"

"ಇಲ್ಲ – ಮಲಗಿಕೊಂಡರು."

"ಜೆಸ್ಸಿ. ನಾನೊಂದು ಗುಟ್ಟು ಹೇಳುತ್ತೇನೆ. ನೀನದನ್ನು ಡ್ಯಾಡಿಗಾಗಲಿ, ಕರುಣೆಗಾಗಲಿ ತಿಳಿಸಬಾರದು."

ಜೆಸ್ಸಿ ಯೋಚನೆ ಮಾಡುತ್ತಾ

"ನಿನ್ನ ಗುಟ್ಟು ನನಗೆ ಹೇಳಬೇಡ ಸನ್. ನಿನ್ನ ಡ್ಯಾಡಿಯಿಂದ ನಾನು ಯಾವದನ್ನೂ ಮುಚ್ಚಿಡಲಾರೆ. ನನ್ನದು ಒಡಕು ಬಾಯಿ. ನಿನ್ನ ಗುಟ್ಟು ರಟ್ಟು ಮಾಡಿ ನಾನು ಸುಳ್ಳಾಗಬಾರದು."

"ಇಲ್ಲ ಜೆಸ್ಸಿ – ನೀನು ಕೇಳಲೇ ಬೇಕು. ನಿನ್ನಿಂದ ನನಗೆ ತುಂಬ ಸಹಾಯವಾಗಬೇಕಾಗಿದೆ."

"ಹೇಳು ಸನ್. ನೀನು ಸಂತೋಷವಾಗಿದ್ದರೆ ಸಾಕು."

ಆನಂದರಾಯರ ಪರಿಚಯವಾದ ವಿಷಯ, ರಾಮಸ್ವಾಮಪ್ಪನ ಮನೆಗೆ ಹೋದ ವಿಷಯ, ಅವನಲ್ಲಿ ಭರತನಾಟ್ಯ ಕಲಿಯುವ ವಿಷಯವನ್ನೆಲ್ಲಾ ಕೀರ್ತಿ ಸವಿಸ್ತಾರವಾಗಿ ಜೆಸ್ಸಿಗೆ ಒಪ್ಪಿಸಿದ. ಜೆಸ್ಸಿಯ ಹುಬ್ಬುಗಳು ಬಿಗಿದುಕೊಂಡವು – ಹಣೆಯ ಮೇಲೆ ಗೆರೆಗಳು ಮೂಡಿದವು.

"ಅವೆಲ್ಲಾ ಕೆಟ್ಟ ಮನೆಗಳಲ್ಲವೇ ಸನ್. ನಿಮ್ಮ ತಂದೆಗೆ ತಿಳಿದರೆ ಕೋಪ ಮಾಡಿಕೊಳ್ಳುತ್ತಾರೆ."

"ರಾಮಸ್ವಾಮಪ್ಪನವರ ಅಕ್ಕ ಜಯಮ್ಮನವರನ್ನು ನೀನು ನೋಡಬೇಕು ಜೆಸ್ಸಿ – ಸಾಕ್ಷಾತ್ ದೇವತೆಯ ಹಾಗಿದ್ದಾರೆ. ಅವರು ತುಂಬ ಒಳ್ಳೆಯವರು ಜೆಸ್ಸಿ – ಉತ್ತಮ ಕಲಾವಿದರು. ಈ ಅವಕಾಶ ಬಿಟ್ಟರೆ ನನಗೆ ಮುಂದೆ ಇಂಥ ಜನ ಸಿಕ್ಕುವುದಿಲ್ಲ. ನಾಳೆ ಆನಂದರಾಯರು ಬರುತ್ತಾರೆ – ಅವರನ್ನು ನೀನೇ ಕೇಳಿ ನೋಡು."

"ನಾಟ್ಯ ಕಲಿಯಲು ನಿರ್ಧರಿಸಿರುವೆಯಾ ಸನ್."

"ಉದಯಶಂಕರರನ್ನು ನೋಡಿದಾರಭ್ಯ ನನಗೆ ಊಟ, ನಿದ್ರೆ ಒಂದೂ ಬೇಡವಾಗಿದೆ ಜೆಸ್ಸಿ."

"ನಾನು ಯೋಚನೆ ಮಾಡಿ, ನಾಳೆ ಆನಂದರಾಯರು ಬಂದಾಗ ಅವರ ಜತೆ ಮಾತನಾಡಿ ನನ್ನ ಅಭಿಪ್ರಾಯ ತಿಳಿಸುತ್ತೇನೆ. – ನೀನು ಸುಮ್ಮನೆ ಕಾಲಹರಣ ಮಾಡಿಕೊಂಡು, ಜೀವನ ವ್ಯರ್ಥ ಮಾಡಿಕೊಳ್ಳುತ್ತಿರುವೆಯಲ್ಲಾ ಎಂದು ನಿನ್ನ ಡ್ಯಾಡಿ ತುಂಬ ವ್ಯಸನಪಡುತ್ತಿದ್ದಾರೆ."

" ಇನ್ನು ಅವರು ವ್ಯಸನಪಡಬೇಕಾದದ್ದಿಲ್ಲ ಜೆಸ್ಸಿ. ನಾನು ನಾಟ್ಯ ಕಲಿತು ಉದಯಶಂಕರರಿಗಿಂತಲೂ ದೊಡ್ಡ ಇಂಟರ್ ನ್ಯಾಷನಲ್ ಡ್ಯಾನ್ಸರ್ ( International Dancer ) ಆಗುತ್ತೇನೆ. ಭಾರತದ ನಿಜನ್ಸ್ಕಿ ಆಗುತ್ತೇನೆ."

ಜೆಸ್ಸಿ ಕಣ್ಣುಗಳಲ್ಲಿ ಆನಂದಭಾಷ್ಪ ಮೂಡಿತು. ಕೀರ್ತಿಯನ್ನಪ್ಪಿ ಮುದ್ದಿಟ್ಟು

" ನಿನ್ನ ನಾಟ್ಯ ನನಗೆ ತೋರಿಸುತ್ತೀಯಾ ಸನ್ "

ಎಂದು ಕೇಳಿದಳು.

" ನಿನ್ನ ಆಶೀರ್ವಾದ ಪಡೆದೇ ನಾನು ನಾಟ್ಯವಾಡುತ್ತೇನೆ ಜೆಸ್ಸಿ. ಯು ಆರ್ ಎನ್ ಎಂಜಲ್ ( You are an angel ! ) "

ಜೆಸ್ಸಿಯ ಕಂಠಯುಬ್ಬಿ ಬಂತು. ಅವಳ ಬಾಯಲ್ಲಿ ಮಾತು ಹೊರಡ ಲಿಲ್ಲ. ಸ್ವಲ್ಪ ಕಾಲ ತೆಗೆದುಕೊಂಡು ಚೇತರಿಸಿಕೊಂಡು

" ಗೋ ಸನ್, ಯು ಆರ್ ಎ ಬಿಗ್ ಟೀಸ್ ( Go son, you are a big tease ) "

ಎಂದು ಹೇಳಿದಳು. ಜೆಸ್ಸಿಯ ಅಂತಃಕರಣದ ಮೇಲೆ ಲಾಸ್ಯವಾಡಿ, ಅವಳ ಕಡೆಯಿಂದ ಬೇಕಾದ ಸೇವೆ, ಉಪಚಾರ ಸಲ್ಲಿಸಿಕೊಳ್ಳುವ ಕಲೆ ಕೀರ್ತಿಗೆ ಚೆನ್ನಾಗಿ ಸಾಧಿಸಿತು.

ಮಾರನೆಯ ದಿನ ಮೂರೂವರೆ ಗಂಟೆಗೆ ಸರಿಯಾಗಿ ಆನಂದರಾಯರು ' ಏವನ್ ವಿಲ್ಲಾ ' ಗೆ ಬಂದರು. ಕೀರ್ತಿ ಅವರನ್ನು ಸ್ವಾಗತಿಸಿ ಅವರಿಗೆ ಜೆಸ್ಸಿಯ ಪರಿಚಯ ಮಾಡಿಕೊಟ್ಟ. ರಾಮಸ್ವಾಮಪ್ಪನ ಮನೆಗೆ ಕೀರ್ತಿ ಹೋಗುವುದರಿಂದ ಅವನ ಶೀಲ ಭಂಗವಾಗುವುದಿಲ್ಲ ಎಂಬ ಆಶ್ವಾಸನವಷ್ಟೇ ಜೆಸ್ಸಿಗೆ ಆನಂದರಾಯರಿಂದ ಬೇಕಾಗಿದ್ದುದು. ರಾಯರು ಆಶ್ವಾಸನ ಕೊಟ್ಟು ದಲ್ಲದೆ

" ಜೆಸ್ಸಿಯವರೇ, ನಾಟ್ಯಸಿಪುಣೆ ಜಯಮ್ಮನವರು ವೇಶ್ಯಾ ಕುಲದಲ್ಲಿ ಹುಟ್ಟಿದರು. ಆದರೆ ವೇಶ್ಯಾಜೀವನ ಅವಲಂಬಿಸಲಿಲ್ಲ. ಕಲಾವಿದ ಅಂತ-ರಂಗ, ಬಹಿರಂಗ ಶುದ್ಧವಾಗಿಲ್ಲದಿದ್ದರೆ ಅವನ ಕಲೆ ಪರಿಶುದ್ಧವಾಗಿರುವುದಿಲ್ಲ ಎನ್ನುವುದೇ ಅವರ ಅಭಿಮತ. ಸ್ವಜನರ ಮಾರ್ಗವನ್ನು ಜಯಮ್ಮನವರು ಅನುಸರಿಸಿ ವೇಶ್ಯಾ ಜೀವನದಿಂದ ಹಣ ಸಂಪಾದನೆ ಮಾಡಲೆತ್ನಿಸಲಿಲ್ಲ.

ಹಾಗೆ ಅವರು ಪ್ರಯತ್ನಿಸಿದ್ದರೆ ಇಂದು ಎರಡು ಮೂರು ಲಕ್ಷ ರೂಪಾಯಿ ಕೈ-ಯಲ್ಲಿ ಇಟ್ಟುಕೊಂಡಿರಬಹುದಾಗಿತ್ತು. ಒಬ್ಬನನ್ನು ಗಂಡನೆಂದು ತಿಳಿದು ಕೊಂಡು ಅವನ ಜತೆ ಬಾಳುವೆ ಸಾಗಿಸಿದರು. ಅವನಿಗೆ ಕಷ್ಟ ಒದಗಿದಾಗ ತಮ್ಮ ಸಮಸ್ತ ಸಂಪತ್ತನ್ನೂ ಅವನಿಗೆ ಧಾರೆಯೆರೆದರು. ಅವನು ದೇಶಾಂತರ ಹೋದರೂ ಭಕ್ತಿಯಿಂದ ಅವನನ್ನೇ ಆರಾಧಿಸುತ್ತಾರೆ. ಹತ್ತಾರು ಬಡ ಮಕ್ಕಳಿಗೆ ಅನ್ನ ಹಾಕಿ, ಬಟ್ಟೆ ಕೊಟ್ಟು ಭರತನಾಟ್ಯವಿದ್ಯೆ ಕಲಿಸಿದ್ದಾರೆ."

ಎಂದು ಹೇಳಿದರು. ಜೆಸ್ಸಿ ಮನಸ್ಸಿಗೆ ಧೈರ್ಯವಾಯಿತು. ಕೀರ್ತಿ ಬೇಡಿದ ಹಣವನ್ನು ತಾನೇ ಕೊಟ್ಟು

"ಗಾಡ್ ಬ್ಲೆಸ್ ಯು ಸನ್ ( God bless you son ! )"

ಎಂದಳು. ಕೀರ್ತಿ ತನ್ನ ಮನಸ್ಸಿನಲ್ಲಿ ಕೊರೆಯುತ್ತಿದ್ದ ಪ್ರಶ್ನೆಯನ್ನೂ ಸೂಕ್ಷ್ಮವಾಗಿ ಜೆಸ್ಸಿಗೆ ನಿವೇದಿಸಿದ.

"ಡ್ಯಾಡಿ ಏನನ್ನುವರೋ ?"

"ಅವರಿಗೆ ನಾನು ಹೇಳುತ್ತೇನೆ ಸನ್. ನೀನು ಯೋಚನೆ ಮಾಡ ಬೇಡ."

"ಕರುಣೆಗೆ ಹೇಳಬೇಡ ಜೆಸ್ಸಿ. ಅವಳದು ಒಡಕು ಬಾಯಿ. ಕೂಡಲೆ ಹೋಗಿ ಡ್ಯಾಡಿಗೆ ತಿಳಿಸಿಬಿಡುತ್ತಾಳೆ."

"ಹೇಳುವುದಿಲ್ಲ. ನೀನು ನಿರಾತಂಕವಾಗಿರು."

ಎಂದು ಧೈರ್ಯ ಹೇಳಿದಳು.

ಜೆಸ್ಸಿ, ಕೀರ್ತಿಯ ಯೋಗಕ್ಷೇಮ ಯೋಚಿಸುತ್ತಿದ್ದಂತೆ ಕರುಣೆಯ ಯೋಗಕ್ಷೇಮವನ್ನೂ ಯೋಚಿಸುತ್ತಿದ್ದಳು. ಇದ್ದಕ್ಕಿದ್ದಂತೆ ರಾಯರನ್ನು ಕುರಿತು

"ನಿಮಗೆ ಪ್ರತಿನಿತ್ಯ ಒಂದು ಗಂಟೆ ಪುರಸತ್ತು ಸಿಕ್ಕುತ್ತದೆಯೋ ?"

ಎಂದು ಕೇಳಿದಳು. ರಾಯರಿಗೆ ಜೆಸ್ಸಿಯ ಪ್ರಶ್ನೆ ಅರ್ಥವಾಗಲಿಲ್ಲ.

"ಏಕೆ ಜೆಸ್ಸಿಯವರೇ ?"

"ಕರುಣಾ ಸುಮ್ಮನೆ ಕುಳಿತು ಕಾಲಹರಣ ಮಾಡುತ್ತಿದ್ದಾಳೆ. ಅವಳಿಗೆ ಡ್ರಾಯಿಂಗ್, ಪೇಂಟಿಂಗ್ ಪಾಠ ಹೇಳಲು ಸಾಧ್ಯವೇ ?"

"ಅಗತ್ಯವಾಗಿ ಹೇಳುತ್ತೇನೆ. ಪ್ರತಿನಿತ್ಯ ಬರಲು ಸಾಧ್ಯವಿಲ್ಲ. ವಾರಕ್ಕೆ

ಮೂರು ದಿನ ಬರುತ್ತೇನೆ."

"ಹಾಗೇ ಮಾಡಿ. ಅದಕ್ಕೆ ಬೇಕಾದ ಸಾಮಾನುಗಳನ್ನು ನೀವೇ ತೆಗೆದುಕೊಂಡು ಬನ್ನಿ. ನಾಳೆ ನಾಡಿದ್ದರಿಂದ ಪಾಠ ಆರಂಭಿಸಲು ಸಾಧ್ಯವೇ?"

"ನೀವು ಯಾವಾಗ ಹೇಳಿದರೆ ಆವಾಗ ಆರಂಭಿಸುತ್ತೇನೆ."

"ನಾಳೆಯಿಂದಲೇ ಆರಂಭಿಸಿ.?"

ಎಂದು ರಾಯರ ಕೈಗೆ ಸ್ವಲ್ಪ ಹಣವಿತ್ತು

"ಡ್ರಾಯಿಂಗ್ ಸಾಮಾನುಗಳನ್ನು ಮರೆಯದೆ ತೆಗೆದುಕೊಂಡು ಬನ್ನಿ" ಎಂದು ಹೇಳಿದಳು.

೬

ಮೊದಲೇ ನಿರ್ದಿಷ್ಟವಾಗಿದ್ದಂತೆ ಗುರುವಾರ ಕೀರ್ತಿಯ ಪಾಠ ರಾಮಸ್ವಾಮಪ್ಪನ ಮನೆಯಲ್ಲಿ ಆರಂಭವಾಯಿತು. ಕೀರ್ತಿಯ ನಿಲುವು, ಮೈಕಟ್ಟು, ದೇಹದ ಮಾಟ, ವರ್ಣಸೌಂದರ್ಯ ಕಂಡು ರಾಮಸ್ವಾಮಪ್ಪ ಬೆರಗಾಗಿದ್ದ. 'ಈ ಶಿಷ್ಯ ನಿಜವಾಗಿ ನನಗೆ ಕೀರ್ತಿ ತರುತ್ತಾನೆ. ಇವನಿಂದ ನನ್ನ ಕಲೆ ಪ್ರಕಾಶಕ್ಕೆ ಬರುತ್ತದೆ' ಎಂದು ತೃಪ್ತಿಪಟ್ಟುಕೊಂಡ.

ಎರಡು ತಿಂಗಳು ಸತತವಾಗಿ ಅಭ್ಯಾಸ ಸಾಗಿತು. ಒಂದು ದಿನ ಬೆಳಿಗ್ಗೆ ಕೃಷ್ಣಚಂದ್ರರು ಮಗನಿಗೆ ಹೇಳಿ ಕಳಿಸಿದರು. ಕೀರ್ತಿಯ ಹೃದಯ ಬಡಿದುಕೊಳ್ಳಲಾರಂಭಿಸಿತು. ತಂದೆಯ ನಿರೂಪ ತಂದ ಡಿಕ್ಕಿಯನ್ನು (Dickie)

"ಡ್ಯಾಡಿ ಏನು ಮಾಡುತ್ತಿದ್ದರು" ಎಂದು ಕೇಳಿದ.

"ಪೇಪರ್ ನೋಡುತ್ತಿದ್ದರು."

"ನನಗೇಕೆ ಹೇಳಿ ಕಳಿಸಿದ್ದಾರೆ."

"ನನಗೆ ಗೊತ್ತಿಲ್ಲ."

"ಡ್ಯಾಡಿ ಹಸನ್ಮುಖಿಗಳಾಗಿದ್ದರೇ?"

"ದಿನವೂ ಇರುವ ಹಾಗೆ ಇದ್ದಾರೆ."

" ಬ್ರೆಕ್‌ಫಾಸ್ಟ ( Breakfast ) ತೆಗೆದುಕೊಂಡರೇ ? "

" ತೆಗೆದುಕೊಂಡರು. "

ಕೀರ್ತಿ ಬಟ್ಟೆ ಹಾಕಿಕೊಂಡು ತಂದೆಯನ್ನು ಕಾಣಲು ಹೋದ. ಕೃಷ್ಣ ಚಂದ್ರರು ತಮ್ಮ ಪೈಪಿಗೆ, ತಂಬಾಕು ತುಂಬುತ್ತ ಆರಾಮಾಸನದ ಮೇಲೆ ಕುಳಿತಿದ್ದರು. ಅವರ ತೊಡೆಯ ಮೇಲೆ ಅಂದಿನ ' ಹಿಂದೂ ' ( Hindu ) ಪತ್ರಿಕೆಯಿತ್ತು. ಕೀರ್ತಿಯು ತಂದೆಯ ರೂಮು ಪ್ರವೇಶಿಸಿ

" ಗುಡ್ ಮಾರ್ನಿಂಗ್ ಡ್ಯಾಡಿ ( Good Morning Daddy ) "

" ವೆರಿ ಗುಡ್ ಮಾರ್ನಿಂಗ್ ಸನ್ ( Very Good Morning Son, )

ತಂದೆಯ ಕುರ್ಚಿಯ ಬಳಿಗೆ ಬಂದು ಕೀರ್ತಿ ಸಣ್ಣ ಸ್ಟೂಲ್ ಎಳೆದು ಕೊಂಡು ಕುಳಿತುಕೊಂಡ. ಕೃಷ್ಣಚಂದ್ರರು ತಮ್ಮ ಪೈಪ್ ಹಚ್ಚಿಕೊಳ್ಳುತ್ತಿದ್ದರು. ತಂದೆ ಯಾಕೆ ಬರಮಾಡಿದ್ದಾರೆಂದು ತಿಳಿಯಲು ಕೀರ್ತಿ ತವಕಪಡುತ್ತಿದ್ದ. ಕೃಷ್ಣಚಂದ್ರರು ಎರಡು ಮೂರು ಬಾರಿ ಪೈಪ್ ಎಳೆದು, ಸಾವಕಾಶ ವಾಗಿ ಹೊಗೆ ಬಿಡುತ್ತಾ

" ನಿನ್ನ ಶಿಕ್ಷಣ ಹೇಗೆ ಸಾಗಿದೆ ಸನ್. "

ಎಂದು ಕೇಳಿದರು. ಕೀರ್ತಿಗೆ ಚಳಿ ಬಿಟ್ಟಂತಾಯಿತು. ಜೆಸ್ಸಿಯನ್ನು ಮನಸ್ಸಿನಲ್ಲಿಯೇ ಸ್ಮರಿಸಿಕೊಂಡ.

" ಕ್ರಮವಾಗಿ ಸಾಗಿದೆ. "

" ನೀನು ನಾಟ್ಯ ಕಲಿಯುತ್ತಿರುವ ವಿಷಯ ನನಗೆ ನಿನ್ನೆ ತಿಳಿಯಿತು. ಜೆಸ್ಸಿ ಹೇಳಿದಳು. ಎರಡು ತಿಂಗಳು ಇದನ್ನೇಕೆ ಮುಚ್ಚಿಡಬೇಕಾಗಿತ್ತು. "

" ನೀವೇನು ಹೇಳುವಿರೋ ಎಂದು ನಾನು ಹಾಗೆ ಮಾಡಬೇಕಾಯಿತು."

" ಚಿಂತೆಯಿಲ್ಲ. ನೀನು ಯಾವದಾದರೂ ಮಾರ್ಗ ಹಿಡಿದು, ಕ್ರಮ ವಾದ ಶಿಕ್ಷಣ ಪಡೆಯಬೇಕೆಂದು ನನ್ನ ಮನಸ್ಸಿನಲ್ಲಿತ್ತು. ನಾಟ್ಯಕಲೆಯಲ್ಲಿ ನಿನಗೆ ಮನಸ್ಸಿದ್ದರೆ ಅದನ್ನೇ ಅನುಸರಿಸು. ಆದರೆ ಇದು ಸುಲಭವಾಗಿ ಸಾಧಿಸುವ ವಿದ್ಯವಲ್ಲ. ತುಂಬ ಶ್ರಮಪಡಬೇಕು. ಮೈಮೂಳೆಗಳನ್ನೆಲ್ಲಾ ಮುರಿದು ಕೊಳ್ಳಬೇಕು. ಅಭ್ಯಾಸದ ಜತೆಗೆ ವಿಪುಲ ವ್ಯಾಸಂಗವನ್ನೂ ಮಾಡಬೇಕು. ಇಷ್ಟು ಶ್ರಮ ವಹಿಸಲು ಸಿದ್ಧನಾಗಿರುವೆಯಾ ?—ನಾನು ಖರ್ಚು ಮಾಡಲು ಯೋಚನೆ ಮಾಡುತ್ತಿರುವೆನೆಂದು ಭಾವಿಸಬೇಡ ಸನ್. ನಾನು ಸಂಪಾದಿ

ಸಿರುವುದು ನಿಮಗಲ್ಲದೆ ಇನ್ನು ಯಾರಿಗೆ?— ನಾಟ್ಯವಿದ್ಯೆ ಕಲಿಯುವ ಆಸೆ ನಿನ್ನ ಮನಸ್ಸಿನಲ್ಲಿ ಹೇಗೆ ಹುಟ್ಟಿತು ? "

" ಉದಯಶಂಕರ್ ಅವರ ಪ್ರದರ್ಶನ ನೋಡಿದೆ. ಅವರಂತೆ ನಾನೂ ಉತ್ತಮ ಕಲಾವಿದನಾಗಬೇಕೆನ್ನಿಸಿತು. "

" ನಿನ್ನ ಆಸೆ ಸಹಜವಾದುದೆ. ನಾಟ್ಯಕಲೆಯಲ್ಲಿ ಪ್ರಾವೀಣ್ಯ ದೊರಕಿಸಿ ಕೊಳ್ಳಲು ಉದಯಶಂಕರ ಎಷ್ಟು ಕಷ್ಟಪಟ್ಟಿದ್ದಾರೆ ಬಲ್ಲೆಯಾ ?— ಅದಕ್ಕಾಗಿ ಎಷ್ಟು ತ್ಯಾಗ ಮಾಡಿದ್ದಾರೆ ಬಲ್ಲೆಯಾ ? ಕಲಾಸಿದ್ಧಿ ಸುಲಭವಾಗಿ ದೊರಕು ವದಿಲ್ಲ ಕೀರ್ತಿ. ಮೈಮುರಿದು, ಮನಮುರಿತು ಅದಕ್ಕಾಗಿ ದುಡಿಯಬೇಕು. ಜೀವಮಾನವನ್ನೇ ಇದಕ್ಕಾಗಿ ವಿನಿಯೋಗಿಸಬೇಕು. ದೃಢನಿಷ್ಠೆ, ಸತ್ಯ ಸಂಕಲ್ಪವಿಲ್ಲದಿದ್ದರೆ ಕಲೆಯ ಬೆಳಕು ಹತ್ತಿರ ಸುಳಿಯುವುದಿಲ್ಲ. "

" ಮನಸ್ಸು ಗಟ್ಟಿಮಾಡಿಕೊಂಡಿದ್ದೇನೆ ಡ್ಯಾಡಿ – ನೀವು ಹೇಳಿದಂತೆ ಮೈಮುರಿದು, ಮನಮುರಿತು ಇದಕ್ಕಾಗಿ ದುಡಿಯುತ್ತೇನೆ. ಅದೃಷ್ಟವಶಾತ್ ನನಗೆ ಒಳ್ಳೆಯ ಗುರುಗಳೂ ಸಿಕ್ಕಿದ್ದಾರೆ. ಇತರರು ಒಂದು ವರ್ಷದಲ್ಲಿ ಕಲಿ ಯುವಷ್ಟನ್ನು ನಾನು ಎರಡು ತಿಂಗಳಲ್ಲಿ ಕಲಿತಿದ್ದೇನೆಂದು ಗುರುಗಳು ಮೆಚ್ಚಿ ಕೊಂಡಿದ್ದಾರೆ. "

" ಇದನ್ನು ಕೇಳಿ ನನಗೆ ತುಂಬ ಸಂತೋಷವಾಯಿತು. ನಿನ್ನ ಅಭ್ಯಾಸ ನಿರ್ವಿಘ್ನವಾಗಿ ಸಾಗಲಿ. ಗಾಡ್ ಬ್ಲೆಸ್ ಯು ( God Bless You )" ಎಂದರು.

ಕೀರ್ತಿಗೆ ದೊಡ್ಡ ಪರೀಕ್ಷೆಯಲ್ಲಿ ತೇರ್ಗಡೆಯಾದಷ್ಟು ಸಂತೋಷ ವಾಯಿತು. ಅವನು ಎದ್ದು ಹೊರಡಬೇಕೆಂದು ಪ್ರಯತ್ನಿಸುತ್ತಿರುವಲ್ಲಿ ತಂದೆ ಯವರು ತಲೆಯ ಮೇಲೆ ಕೈಯಿಟ್ಟು

" ನಿನಗೊಂದು ವಿಷಯ ಹೇಳಬೇಕಾಗಿದೆ ಸನ್ " ಎಂದರು.

ಕೀರ್ತಿ ಕತ್ತೆತ್ತಿ ನೋಡಿ

" ಏನದು " ಎಂದ.

" ಜೆಸ್ಸಿ ಬಹಳ ಕಾಹಿಲೆಯಿದ್ದಾಳೆ ಎನ್ನುವ ವಿಷಯ ನಿನಗೆ ಗೊತ್ತಿ ದೆಯೊ ಇಲ್ಲವೋ !........ "

" ಇಲ್ಲ – ಗೊತ್ತಿಲ್ಲ. "

“ ಅವಳು ಮೃತ್ಯುವಿನೊಂದಿಗೆ ಹೋರಾಡುತ್ತಿದ್ದಾಳೆ. ನಿನ್ನ ಶಿಕ್ಷಣದ ವಿಷಯ ಅವಳಿಗೆ ನವಶಕ್ತಿಯನ್ನಿತ್ತಿದೆ. ಅವಳನ್ನು ನಿರಾಶಳನ್ನಾಗಿ ಮಾಡ ಬೇಡ. ”

ಕೀರ್ತಿಗೆ ದುಃಖವುಕ್ಕಿ ಬಂತು. ತಂದೆಯ ಕೈಹಿಡಿದುಕೊಂಡು ಕಣ್ಣೊ ಗೊತ್ತಿಕೊಳ್ಳುತ್ತಾ

“ ದೇವರಾಣೆ ಮಾಡಿ ಹೇಳುತ್ತೇನೆ – ನಿರಾಶೆಗೊಳಿಸುವುದಿಲ್ಲ. ”

ಎಂದು ಹೇಳಿ ಅಲ್ಲಿಂದ ಹೊರಟುಬಿಟ್ಟ. ಕೃಷ್ಣಚಂದ್ರರು ತಮ್ಮಷ್ಟಕ್ಕೇ ‘ ಗಾಡ್ ಬ್ಲೆಸ್ ಯು ( God Bless You ) ’ ಎಂದುಕೊಂಡರು.

ಶಾಲೆಯ ಕೆಲಸದಿಂದ ಬಿಡುಗಡೆದೊರೆತಾಗ ಆನಂದರಾಯರು ‘ಏವನ್ ವಿಲ್ಲಾ’ ಗೆ ಬರುತ್ತಿದ್ದರು. ಕೀರ್ತಿ ಮನೆಯಲ್ಲಿಲ್ಲದಿದ್ದರೆ ಕೃಷ್ಣಚಂದ್ರರು, ಜೆಸ್ಸಿ, ಕರುಣೆಯ ಜತೆ ಮಾತನಾಡುತ್ತ ಕೂಡುತ್ತಿದ್ದರು. ಅವರ ಬಾಯಿಂದ ಮಗನ ವಿದ್ಯಾಪ್ರಗತಿಯ ವಿಷಯ ಕೇಳಿ ಕೃಷ್ಣಚಂದ್ರರು ಹರ್ಷಚಿತ್ತರಾಗುತ್ತಿದ್ದರು. ಪಾಠಕ್ಕೆ ಹೋದಾಗ ಕೀರ್ತಿ ಆನಂದರಾಯರನ್ನು ಕಂಡುಬರುತ್ತಿದ್ದ. ರಾಯರಿಗೆ ಪುರಸತ್ತಿದ್ದರೆ ಅವರೂ ಕೀರ್ತಿಯ ಜತೆ ರಾಮಸ್ವಾಮಪ್ಪನ ಮನೆಗೆ ಬರುತ್ತಿದ್ದರು.

ನಾಲ್ಕು ತಿಂಗಳು ಕಳೆದವು.—ಒಂದು ದಿನ ಪಾಠ ಮುಗಿಸಿಕೊಂಡು ಬರುತ್ತಿರುವಾಗ ರಾಯರು

“ ದೊಡ್ಡ ಕಲಾಭಿಮಾನಿಗಳ ಪರಿಚಯ ನಿಮಗೆ ಮಾಡಿಕೊಡಲು ನಾನು ಉತ್ಸುಕನಾಗಿದ್ದೇನೆ ” ಎಂದರು.

“ ಯಾರವರು ? ”

“ ಅವರ ಹೆಸರು ನೀವು ಕೇಳಿರಬಹುದು. ಇಂಗ್ಲಿಷ್ ಪತ್ರಿಕೆಯಲ್ಲಿ ಮೇಲಿಂದ ಮೇಲೆ ಲೇಖನಗಳನ್ನು ಬರೆಯುತ್ತಿರುತ್ತಾರೆ. ಕೆಲವು ಗ್ರಂಥ ಗಳನ್ನೂ ಬರೆದಿದ್ದಾರೆ. ”

“ ಅವರ ಹೆಸರೇನು ? ”

“ ಜೀವಾನಂದಂ. ”

“ ಬಲ್ಲೆಬಲ್ಲೆ. ಅವರ ಒಂದೆರಡು ಗ್ರಂಥಗಳನ್ನೂ ನೋಡಿದ್ದೇನೆ. ”

" ಅವರೂ ಕಂಟೋನ್ಮೆಂಟಿನಲ್ಲೇ ಇದ್ದಾರೆ. ನಿಮಗೆ ಅವರ ಪರಿಚಯ ಏದೆಯೇ ? "

" ಪರಿಚಯವಿಲ್ಲ. ಹೆಸರು ಕೇಳಿಬಲ್ಲೆ. "

" ಅವರಲ್ಲಿಗೆ ಹೋಗೋಣವೇ ? "

" ಹೋಗೋಣ. "

" ಭಾನುವಾರ ಬರುತ್ತೇವೆಂದು ತಿಳಿಸುತ್ತೇನೆ. "

" ಸಂಜೆಗೆ ನನಗೆ ಪಾಠವಿರುತ್ತದೆ. "

" ನಾಲ್ಕು ಗಂಟೆಗೆ ಹೋಗೋಣ. ಅವರನ್ನು ನೋಡಿಕೊಂಡು ರಾಮ ಸ್ವಾಮಪ್ಪನವರ ಮನೆಗೆ ಬಂದರಾಯಿತು. "

" ಆಗಬಹುದು. ಆ ವೇಳೆಗೆ ನೀವು ನಮ್ಮ ಮನೆಗೆ ಬರಬೇಕಾಗುತ್ತದೆ."

" ಮೂರೂವರೆಗೆ ನಾನು ಬರುತ್ತೇನೆ "

ಎಂದು ರಾಯರು ಮಾತುಕೊಟ್ಟರು.

ಕಲಾಪ್ರಪಂಚದಲ್ಲಿ ಜೀವಾನಂದಂ ಪರಿಚಯವಿಲ್ಲದವರು ಯಾರೂ ಇರಲಿಲ್ಲ. ' ನ್ಯೂ ಇಂಡಿಯಾ ' ಪತ್ರಿಕೆಯಿಂದ ಆರಂಭವಾದ ಅವರ ಲೇಖನ ವ್ಯವಸಾಯ ಕಾಲಕ್ರಮೇಣ ' ಹಿಂದೂ ' – ' ಇಂಡಿಯನ್ ಎಕ್ಸ್‌ಪ್ರೆಸ್ ' – ' ಟೈಮ್ಸ್ ಆಫ್ ಇಂಡಿಯಾ ' – ' ಮಾಡರ್ನ್ ರಿವ್ಯೂ ' – ' ಇಲ್ಲಸ್ಟ್ರೇಟೆಡ್ ವೀಕ್ಲಿ ' ಪತ್ರಿಕೆಗಳಿಗೂ ಹಬ್ಬಿತ್ತು. ಅಮೇರಿಕಾದ ' ಏಷ್ಯಾ ' – ಇಂಗ್ಲೆಂಡಿನ ' ಸ್ಟೂಡಿಯೊ ' ಅವರ ಕೆಲವು ಲೇಖನಗಳನ್ನು ಪ್ರಕಟಿಸಿ ಅವರಿಗೆ ' ಅಂತರ-ರಾಷ್ಟ್ರೀಯ ಖ್ಯಾತಿ ' ಯನ್ನು ಗಳಿಸಿಕೊಟ್ಟಿದ್ದವು.

ಜೀವಾನಂದಂ ಒಂದು ಬಗೆಯಲ್ಲಿ ' ರಹಸ್ಯವ್ಯಕ್ತಿ ' ಗಳಾಗಿದ್ದರು. ಕಂಟೋನ್ಮೆಂಟಿನ ಇನ್‌ಫೆಂಟ್ರಿ ರಸ್ತೆಯಲ್ಲಿದ್ದ ಒಂದು ಭವ್ಯವಾದ ಮನೆಯಲ್ಲಿ ವಾಸ ಮಾಡುತ್ತಿದ್ದರು. ಮನೆಯ ಮಾಲಿಕ ಒಬ್ಬ ಇಂಗ್ಲಿಷ್ ವರ್ತಕ. ಸ್ಮಿತ್ ಜೀವಾನಂದಂ ಮೇಲಣ ಗೆಳೆತನಕ್ಕಾಗಿ ಮನೆಯನ್ನು ಬಾಡಿಗೆಯಿಲ್ಲದೆ ಕೊಟ್ಟಿದ್ದನಂತೆ! ಯಾವ ಕಾರಣಕ್ಕೋ ಜೀವಾನಂದಂ ವಿವಾಹ ಮಾಡಿ ಕೊಂಡಿರಲಿಲ್ಲ. ಅವರ ಮನೆಯಲ್ಲಿ ಒಬ್ಬ ಬಟ್ಲರ್ – ಒಬ್ಬ ಮೇಡ್ (Maid) ಇದ್ದರು. ಬಟ್ಲರನ ಒಬ್ಬ ಮಗ ಪೆರಿಸಾಮಿ ತೋಟದ ಕೆಲಸ ಮಾಡುತ್ತಿದ್ದ. ಇನ್ನೊಬ್ಬ ಮಗ ನಮಶ್ಶಿವಾಯಂ ಆಳುಮಗನಾಗಿದ್ದ. ಜೀವಾನಂದಂ ಅವರ

ಡ್ರೈವರ್ ಮುರುಘೇಶನೂ ಅವರ ಕಾಂಪೌಂಡಿನಲ್ಲಿದ್ದ ಸಣ್ಣ ಮನೆಯಲ್ಲಿ ವಾಸಮಾಡುತ್ತಿದ್ದ.

ಜೀವಾನಂದಂ ವಾಸಿಸುತ್ತಿದ್ದ ಮನೆಯಲ್ಲಿ ಮೊದಲು ಅವರ ಇಂಗ್ಲಿಷ್ ಮಿತ್ರ ಸ್ಮಿತ್ ವಾಸಮಾಡುತ್ತಿದ್ದ. ಅವನು ಮನೆಯನ್ನು ಫರ್ನೀಚರ್ ಸಹಿತ ಜೀವಾನಂದಂಗೆ ಬಿಟ್ಟುಕೊಟ್ಟಿದ್ದ. ವೆರಾಂಡಾದಲ್ಲಿ ನಾಲ್ಕಾರು ಬೆತ್ತದ ಕುರ್ಚಿಗಳು, ಬೆತ್ತದ ಮೇಜು; ಅದರ ಬದಿಗಿದ್ದ 'ಸ್ವಾಗತ ಕೋಣೆ' ( Reception room ) ಯಲ್ಲಿ ಮೂರು ಗೋಡೆಯ ಒತ್ತಿಗೂ ಮೂರು ಸೋಫಾ – ಮಧ್ಯೆ ಕಾಶ್ಮೀರದ ಮರಗೆಲಸದ ಮೇಜು. ನಾಲ್ಕು ಮೂಲೆಗಳಲ್ಲಿಯೂ ನಾಲ್ಕು ಭವ್ಯವಾದ ಕಂಚಿನ ಪುತ್ಥಳಿಗಳು – ಸಾಂಚಿಯ ಬುದ್ಧ, ನಟರಾಜ, ರಾಧಾಕೃಷ್ಣ ಮತ್ತು ಮ್ಯಾಡೋನಾ ಮತ್ತು ಮಗು. ಗೋಡೆಗಳ ಮೇಲೆ ಅಬ್ದುಲ್ ರಹಮಾನ್ ಚುಗ್ತಾಯ್, ಅಸಿತಕುಮಾರ ಹಾಲ್ದರ್, ದೇವಿಪ್ರಸಾದ ರಾಯ್ ಚೌಧುರಿ ಮತ್ತು ನಂದಾಲಾಲ ಬಸು ಅವರ ಕಲಾಕೃತಿಗಳು. 'ಸ್ವಾಗತ ಕೋಣೆ' ಯ ಮಗ್ಗುಲಿಗಿದ್ದುದೇ ಜೀವಾನಂದಂ ಅವರ 'ವ್ಯಾಸಂಗ ಕೋಣೆ'. ನಾಲ್ಕು ಬೀರು ತುಂಬ ವಿವಿಧ ಕಲೆಗಳನ್ನು ಕುರಿತ ಗ್ರಂಥಗಳು. ಮಧ್ಯೆ ಸೊಗಸಾದ ಮೇಜು, ತಿರುಗಣೆ ಕುರ್ಚಿ. ಅದರ ಹಿಂದೆಯೇ ಜೀವಾನಂದಂ ಅವರ ಶಯ್ಯಾಗೃಹ. ತೊಟ್ಟಿಯಲ್ಲಿ ವಿಶಾಲವಾದ ಮೇಜು, ಎಂಟು ಕುರ್ಚಿಗಳು. ಅದನ್ನೇ ಜೀವಾನಂದಂ 'ಭೋಜನ ಗೃಹ' ವಾಗಿಯೂ ಉಪಯೋಗಿಸುತ್ತಿದ್ದರು. ಎಡಮಗ್ಗುಲಿಗಿದ್ದ ಎರಡು ಕೋಣೆಗಳ ಬೀಗ ಯಾವಾಗಲೂ ಹಾಕಿಯೇ ಇರುತ್ತಿತ್ತು. ಜೀವಾನಂದಂ ಆ ಕೋಣೆಗಳನ್ನು ಉಪಯೋಗಿಸುತ್ತಿರಲಿಲ್ಲ.

ಜೀವಾನಂದಂ ಅವರ ಉಡುಪು, ಜೀವನಕ್ರಮ ಎಲ್ಲವೂ ಮೇಲುಮಟ್ಟದಲ್ಲಿಯೇ ಇದ್ದವು. ಸರ್ಜ್, ಟ್ವೀಡ್, ಫ್ಲಿಪ್‌ಕಾರ್ಡ ಬಿಟ್ಟು ಅವರು ಬೇರೆ ಬಟ್ಟೆ ಧರಿಸಿದುದಿಲ್ಲ. ಮನೆಯಲ್ಲಿ ಉಪಯೋಗಿಸುತ್ತಿದ್ದ 'ಅಂಡರ್‌ವೇರ್' ( underwear ), ಸ್ಲೀಪಿಂಗ್ ಸೂಟ್ ( Sleeping Suit ) ಕೂಡ ಸಿಲ್ಕ್, ಫ್ಲಾನಲ್‌ಗಳಿಂದ ಮಾಡಿದವುಗಳಾಗಿದ್ದವು.

ಇಂಥ ವೈಭವ ಜೀವನ ನಡೆಸುವುದಕ್ಕೆ ಜೀವಾನಂದಂ ಅವರಿಗೆ ಮಾರ್ಗವೆಲ್ಲಿಯದು? ಅವರಿಗೆ ಪಿತ್ರಾರ್ಜಿತ ಆಸ್ತಿ ಇದೆಯೇ? ಅವರು ಯಾವ

ಊರಿನವರು? ಬೆಂಗಳೂರಿಗೆ ಯಾವಾಗ – ಹೇಗೆ – ಏಕೆ ಬಂದರು? ಅವರ ಲೇಖನವೃತ್ತಿ, ಗ್ರಂಥರಚನೆಯಲ್ಲಿ ಸಂಪಾದನೆಯಾಗುತ್ತಿದ್ದಿತೇ? ಮೊದಲಾದ ಹಲವಾರು ಪ್ರಶ್ನೆಗಳಿಗೆ ಯಾರೂ ಉತ್ತರ ಕಂಡರಿಯರು. ಎಲ್ಲವೂ 'ಚಿದಂಬರ ರಹಸ್ಯ.'

ಜೀವಾನಂದಂ ಅವರ ಮನೆಯಲ್ಲಿ ಸದಾ ಸಣ್ಣ ಪುಟ್ಟ ಸಂಸ್ಥಾನಗಳ ರಾಜರಾಣಿಯರೂ, ಮದರಾಸಿನ ಕೆಲವು ಲಕ್ಷಾಧೀಶ್ವರರೂ, ಹೈದರಾಬಾದಿನ ಕೆಲವು ನವಾಬರೂ, ರಾಜಾಸಾಹೇಬರೂ ಸದಾ ಓಡಿಯಾಡುತ್ತಿದ್ದರು. ಅವರ ಮನೆಯ ಮುಂದೆ ಪೇಜ್, ಪೆಕಾರ್ಡ್, ನೇಪಿಯರ್, ಸನ್, ರೋಲ್ಸ್ ರಾಯ್ಸ್ ಕಾರುಗಳು ನಿಲ್ಲದ ದಿನವಿಲ್ಲ.

ಭಾನುವಾರ ನಾಲ್ಕು ಗಂಟೆಗೆ ಕೀರ್ತಿ, ಆನಂದರಾಯರು ಬಂದಾಗ, ಅವರಿಗೆ ಸ್ವಾಗತ ಬಯಸಿದವನು ನಮಶ್ಶಿವಾಯಂ. ಅವನನ್ನನುಸರಿಸಿ ಹೋಗಿ ಇಬ್ಬರೂ 'ಸ್ವಾಗತ ಕೋಣೆ' ಯಲ್ಲಿ ಕುಳಿತರು. ಗೋಡೆಗಳ ಮೇಲಿದ್ದ ಚಿತ್ರಗಳನ್ನೂ ಮೂಲೆಗಳಲ್ಲಿದ್ದ ಕಂಚಿನ ಪುತ್ಥಳಿಗಳನ್ನೂ ಕಂಡು ಕೀರ್ತಿ ವಿಸ್ಮಯಗೊಂಡ. ನಟರಾಜನ ಭವ್ಯವಿಲಾಸ ನೋಡಿ ಕೀರ್ತಿ ಮೈ-ಮರೆತುಬಿಟ್ಟ.

ಜೀವಾನಂದಂ ಪ್ರವೇಶಿಸಿ ನಸುನಗುತ್ತ ಇಬ್ಬರನ್ನೂ ಸ್ವಾಗತಿಸಿ, ಕೀರ್ತಿಯ ಕಡೆ ತಿರುಗಿ

"ನಟರಾಜನ ಮೂರ್ತಿ ನಿಮ್ಮ ಮನಸ್ಸಿಗೆ ತುಂಬ ಬಂದಂತೆ ಕಾಣುತ್ತದೆ" ಎಂದರು.

"ಇಟ್ ಈಸ್ ವಂಡರಫುಲ್ ( It is wonderful )"

ಎಂದು ಕೀರ್ತಿ ತನ್ನ ಮೆಚ್ಚುಗೆ ವ್ಯಕ್ತಪಡಿಸಿದ. ಆನಂದರಾಯರು ಮಧ್ಯೆ ಬಾಯಿ ಹಾಕಿ

"ಜೀವಾನಂದಂ ಅವರ ಕಲಾಸಂಗ್ರಹ ನೀವು ನೋಡಬೇಕು. ಇಂಥ ಅನೇಕ ಪುತ್ಥಳಿಗಳು ಅವರಲ್ಲಿ ಇವೆ" ಎಂದರು.

"ಅವುಗಳು ಈಗ ನನ್ನಲ್ಲಿಲ್ಲ ಆನಂದರಾಯರೇ. ಸರ್ ಸಾಲಾರ್ ಜಂಗ್ ಬಹದ್ದೂರರವರು ತೆಗೆದುಕೊಂಡು ಹೋದರು."

ಎಂದು ಜೀವಾನಂದಂ ತಿಳಿಸಿದರು.

ಕೀರ್ತಿಯ ಕಣ್ಣುಗಳು ' ನಟರಾಜ ' ನ ಮೇಲೇ ನೆಟ್ಟಿದ್ದವು. ಜೀವಾನಂದಂ ಅವನ ಕಡೆಗೆ ತಿರುಗಿ

" ನೀವು ಭರತನಾಟ್ಯ ಅಭ್ಯಾಸ ಮಾಡುತ್ತಿರುವಿರಂತೆ ! " ಎಂದರು.

" ಹೌದು. ಆರು ತಿಂಗಳಾಯಿತು ಆರಂಭಿಸಿ. "

" ನಿಮ್ಮ ರಿಹರ್ಸಲ್ (rehearsai) ನನಗೆ ತೋರಿಸುವದಿಲ್ಲವೇನು ? "

" ನಿಮ್ಮ ಕಣ್ಣಿಗೆ ಬೀಳುವಷ್ಟು ನನ್ನ ರಿಹರ್ಸಲ್ ಮುಂದುವರಿದಿಲ್ಲ. "

" ಇವರಿಗೆ ಪಾಠ ಹೇಳುತ್ತಿರುವವರು ಯಾರು ಆನಂದರಾಯರೇ ? "

" ಅವರೇನು ಅಷ್ಟು ಪ್ರಸಿದ್ಧರಲ್ಲ. ಆದರೆ ಶಾಸ್ತ್ರಭಾಗ ಬಹಳ ಚೆನ್ನಾಗಿ ತಿಳಿದುಕೊಂಡಿದ್ದಾರೆ. ಅವರಕ್ಕ ಜಯಮ್ಮ ಒಂದು ಕಾಲದಲ್ಲಿ ಬಹಳ ಪ್ರಸಿದ್ಧ ಭರತನಾಟ್ಯಗಾರ್ತಿಯಾಗಿದ್ದರು. "

" ಅವರ ಹೆಸರು ಕೇಳಿದ್ದೇನೆ. "

" ಕೀರ್ತಿಯವರ ಮೇಲೆ ನೀವು ಅಭಿಮಾನವಿಡಬೇಕು ಜೀವಾನಂದಂ ಅವರೇ. ಕೀರ್ತಿಯವರ ಕಲೆಗೆ ನಿಮ್ಮ ಅಭಿಮಾನದ ಪುಟ ಸಿಕ್ಕಿದರೆ ಚಿನ್ನಕ್ಕೆ ಸುಗಂಧ ದೊರೆತಂತಾಗುತ್ತದೆ. "

" ಕಿರಿಯ ಕಲಾವಿದರು ಮುಂದಕ್ಕೆ ಬರಬೇಕೆನ್ನುವುದೇ ನನ್ನ ಆಕಾಂಕ್ಷೆ ಆನಂದರಾಯರೇ. ಅವರಿಗಾಗಿ ನಾನು ಎಷ್ಟು ಕಷ್ಟಪಡುತ್ತೇನೆಂಬುದನ್ನು ನೀವು ಬಲ್ಲಿರಿ. "

" ಸಂದೇಹವೇನು ? ನೂರಾರು ಜನ ಕಲಾವಿದರು ಇವತ್ತು ಪ್ರಸಿದ್ಧರಾಗಿರುವುದಕ್ಕೆ ನಿಮ್ಮ ಪ್ರಯತ್ನವೇ ಕಾರಣ. "

" ನಮ್ಮ ಜನಗಳಲ್ಲಿ ಸ್ವಲ್ಪವೂ ಕೃತಜ್ಞತೆ ಇಲ್ಲ ನೋಡಿ. ನನ್ನಿಂದ ಸಹಾಯ ಪಡೆದವರು ನನಗೇ ದ್ರೋಹ ಬಗೆಯುತ್ತಾರೆ. "

" ಕೀರ್ತಿಯವರು ಹಾಗಲ್ಲ ಸರ್. ಒಳ್ಳೆಯ ವಂಶಸ್ಥರು. ಅವರ ತಂದೆಯವರು ಕೃಷ್ಣಚಂದ್ರರು – ಅವರ ವಿಷಯ ನೀವು ಕೇಳಿರಬಹುದು. ದೊಡ್ಡ ವ್ಯಕ್ತಿ – ತುಂಬಿದ ಜೀವ. "

" ನನ್ನ ರಿಹರ್ಸಲ್ ನೀವು ನೋಡಿ ಅದರಲ್ಲಿ ಕುಂದು ಕೊರತೆಗಳಿದ್ದರೆ ತಿಳಿಸಬೇಕು. ನಾನು ಹೇಗೆ ಮುಂದುವರಿಯಬೇಕೆನ್ನುವುದನ್ನೂ ತಿಳಿಸಿ ಉಪಕಾರ ಮಾಡಬೇಕು. "

" ಆಗಬಹುದು – ನಿಮ್ಮ ರಿಹರ್ಸಲ್ಲಿಗೆ ಯಾವಾಗ ಕರೆದುಕೊಂಡು ಹೋಗುತ್ತೀರಿ ? "

" ಸದ್ಯದಲ್ಲೇ ನನ್ನ ಗುರುಗಳು ತಮ್ಮ ಗುರುಗಳ ಆರಾಧನೆ ಮಾಡು ತ್ತಾರೆ. ಅವತ್ತು ನಾನು ಸ್ವಲ್ಪ ಹೊತ್ತು ನಾಟ್ಯಪ್ರದರ್ಶನ ಮಾಡಬೇಕೆಂದು ಗುರುಗಳು ತಿಳಿಸಿದ್ದಾರೆ. ಆಹ್ವಾನ ಕಳಿಸುತ್ತೇನೆ – ಆ ದಿನ ತಾವು ಪುರಸತ್ತು ಮಾಡಿಕೊಂಡು ಬರಬೇಕು. "

" ಖಂಡಿತ ಬರುತ್ತೇನೆ. ಸ್ವಲ್ಪ ಮೊದಲೇ ತಿಳಿಸಿ ಬಿಡಿ. "

" ತಿಳಿಸುತ್ತೇನೆ. "

" ಸಣ್ಣ ಮೇಜಿನ ಮೇಲಿದ್ದ ಕರೆಗಂಟೆ (Calling Bell) ಜೀವಾನಂದಂ ಒತ್ತಿದ ಕೂಡಲೆ ನಮಶ್ಶಿವಾಯಂ ಬಂದು ಎದುರಿಗೆ ನಿಂತ.

" ಕಾಫಿ ತೆಗೆದುಕೊಂಡು ಬಾ " ಎಂದು ಹೇಳಿದರು.

ನಮಶ್ಶಿವಾಯಂ ಟ್ರೇಯಲ್ಲಿ ಕೇಕ್ಸ್, ಬಿಸ್ಕತ್ತು, ಟೋಸ್ಟ್, ಬಾಳೆಯ ಹಣ್ಣು, ತಂದಿಟ್ಟು, ಇನ್ನೊಂದು ಟ್ರೇಯಲ್ಲಿ ಕಾಫಿ ಪಾಟ್, ಕಪ್ಪು-ಸಾಸರು ತಂದಿಟ್ಟ.

" ತೆಗೆದುಕೊಳ್ಳಿ " ಎಂದು ಜೀವಾನಂದಂ ಉಪಚರಿಸಿದರು.

ಕೀರ್ತಿ ಒಂದು ಬಿಸ್ಕತ್ತು ತೆಗೆದುಕೊಂಡ. ಆನಂದರಾಯರು ಕೇಕ್ ತೆಗೆದುಕೊಂಡರು. ಜೀವಾನಂದಂ ಒಂದು ಟೋಸ್ಟ ಕೈಗೆತ್ತಿಕೊಂಡರು.

ಉಪಾಹಾರ ಮಾಡುತ್ತಾ ಜೀವಾನಂದಂ

" ನಾಟ್ಯವನ್ನು ಒಂದು ವೃತ್ತಿಯನ್ನಾಗಿ ಕೈಗೊಳ್ಳಬೇಕೆಂದಿರುವಿರೇನು?"

" ಹೌದು – ಅದೇ ನನ್ನ ಉದ್ದೇಶ. "

" ಇದಕ್ಕೆ ಒಂದು ಮಂಡಳಿಯನ್ನೇ ಸ್ಥಾಪಿಸಬೇಕಾಗುತ್ತದೆ. ಸಂಗೀತ ಗಾರರು, ವಾದ್ಯಗಾರರು, ಜತೆಯಲ್ಲಿ ನಾಟ್ಯವಾಡುವವರು ಬೇಕು. ಹೊಸ ಹೊಸ ನಾಟ್ಯಾಂಕಗಳನ್ನು ನಿಯೋಜಿಸಬೇಕು. "

" ನನ್ನ ಶಿಕ್ಷಣ ಮುಗಿದ ಕೂಡಲೇ ಅದೇ ಕೆಲಸ ಮಾಡುತ್ತೇನೆ. ನಮ್ಮ ಮನೆಯ ಕಾಂಪೌಂಡಿನಲ್ಲಿ ಬೇಕಾದಷ್ಟು ಜಾಗವಿದೆ. ರಿಹರ್ಸಲ್ ಮಾಡುವುದಕ್ಕೆ ಅಲ್ಲೇ ಒಂದು ಸಣ್ಣ ಥಿಯೇಟರ್ ನಿರ್ಮಾಣ ಮಾಡಿಸಬೇ ಕೆಂದಿದ್ದೇನೆ. "

" ಬಹಳ ಒಳ್ಳೆಯ ಯೋಚನೆ. "

" ಎಲ್ಲದಕ್ಕೂ ನಿಮ್ಮ ಸಹಾಯ ಬೇಕು. "

" ನನ್ನ ಸಹಕಾರದ ಬಗ್ಗೆ ನೀವು ಯೋಚನೆ ಮಾಡಲೇ ಬೇಡಿ. ಯಾವಾಗ ನೀವು ಬಂದು ಏನು ಹೇಳಿದರೂ ಮಾಡಲು ನಾನು ಸಿದ್ಧನಾಗಿದ್ದೇನೆ. "

ಕೀರ್ತಿ ತನ್ನ ಕಪ್ಪಿಗೆ ಕಾಫಿ ಬಸಿದುಕೊಂಡ. ಜೀವಾನಂದಂ ಅವನ್ನು ನೋಡಿ

" ಕೇಕ್ ತೆಗೆದುಕೊಳ್ಳಿ " ಎಂದರು.

" ಇಲ್ಲ ಕ್ಷಮಿಸಿ. ನಾನೀಗ ' ರಿಹರ್ಸಲ್ ' ಗೆ ಹೊರಟಿದ್ದೇನೆ. ಹೊಟ್ಟೆ ಭಾರವಾದರೆ ತೊಂದರೆಯಾಗುತ್ತದೆ. "

ಆನಂದರಾಯರು ಕೀರ್ತಿಯ ಭಾಗದ ಕೇಕನ್ನು ಕಬಳಿಸಬೇಕಾಯಿತು.

ಜೀವಾನಂದಂ ಅಪ್ಪಣೆ ಪಡೆದು ಕೀರ್ತಿ, ರಾಯರು ಹೊರಟರು. ಕೀರ್ತಿ ಹೃದಯ ಕೃತಜ್ಞತೆಯಿಂದ ತುಂಬಿ ಹೋಗಿತ್ತು.

" ನಿಮ್ಮ ಉಪಕಾರ ನಾನು ಮರೆಯಲಾರೆ ಆನಂದರಾಯರೇ. "

" ಉಪಕಾರ ಏನು ಬಂತು ಕೀರ್ತಿಗಳೇ. ನೀವು ಮುಂದಕ್ಕೆ ಬಂದು ಒಳ್ಳೆಯ ಕಲಾವಿದರೆಂದು ಹೆಸರು ಪಡೆದರೆ ಅದೇ ನನಗೆ ಪ್ರತ್ಯುಪಕಾರ. " ಎಂದರು.

೭

ಕೃಷ್ಣಚಂದ್ರರು ಸೂಚಿಸಿದ್ದಂತೆ ಜೆಸ್ಸಿಯ ದೇಹಸ್ಥಿತಿ ದಿನದಿನಕ್ಕೆ ಚಿಂತೆಗೆ ಕಾರಣವಾಯಿತು. ಆಕೆಯನ್ನು ಪರೀಕ್ಷೆ ಮಾಡಿ ನೋಡಿದ ಡಾಕ್ಟರುಗಳು ಬಂದು ಶ್ವಾಸಕೋಶ ಸಂಪೂರ್ಣವಾಗಿ ಕೆಟ್ಟುಹೋಗಿದೆ ಎಂದು ಹೇಳಿದರು. ಜೆಸ್ಸಿ ಕೆಮ್ಮುವುದನ್ನು ನೋಡುವುದೇ ಕಷ್ಟವಾಗಿತ್ತು. ' ಇನ್ನು ಈಕೆ ಮೂರು ತಿಂಗಳು ಉಳಿದರೆ ಹೆಚ್ಚು ' ಎಂದು ಡಾಕ್ಟರುಗಳು ಮುಹೂರ್ತ ಕಟ್ಟಿದ್ದರು. ಮೂರು ತಿಂಗಳು ಕಳೆದು ಹೋಗಿತ್ತು – ಜೆಸ್ಸಿ ಕೆಮ್ಮುತ್ತ ನರಳುತ್ತಿದ್ದಳೇ

ವಿನಾ ಪ್ರಾಣ ಒಪ್ಪಿಸಿರಲಿಲ್ಲ. ಕರುಣ ಈ ವಿಷಯ ಪ್ರಸ್ತಾಪಿಸಿದಾಗ ಜೆಸ್ಸಿ ನಗುತ್ತ

" ಡಾಕ್ಟರುಗಳ ತಲೆಯಲ್ಲಿ ಮೆದುಳಿದೆ ಎಂದು ತಿಳಿದುಕೊಂಡಿದ್ದೀಯಾ ಕರುಣಾ ಗರ್ಲ್ ( Karuna Girl ) ನಮ್ಮ ಹುಟ್ಟು, ಸಾವು ಅವರ ಕೈಯಲ್ಲಿರುವ ಹಾಗೆ ಮಾತನಾಡುತ್ತಾರೆ ದಡ್ಡರು. ನನ್ನ ಮಗು ನಾಟ್ಯವಾಡುವುದನ್ನೂ– ಜನರೆಲ್ಲಾ ಎದ್ದು ನಿಂತು ಅವನಿಗೆ ಗೌರವ ತೋರಿಸುವುದನ್ನೂ – ಅವನ ಕೊರಳಲ್ಲಿ ನೂರಾರು ಮಾಲೆ ಬೀಳುವುದನ್ನೂ ನೋಡದೆ ನಾನು ಸಾಯುತ್ತೇನೆಯೇ ? "

ಎಂದು ಹೇಳುತ್ತಿದ್ದಳು. ಈ ಆಶಾವಾದದ ಹುಣ್ಣಿಮೆ ಚಂದ್ರನನ್ನು ಯಾವುದೋ ಕಪ್ಪು ಮೋಡ ಬಂದು ಮುಚ್ಚುತ್ತಿತ್ತು. ಕರುಣೆಯನ್ನು ಹತ್ತಿರ ಕರೆದು ಅವಳ ಹಾಲುಗೆನ್ನೆ ನೇವರಿಸುತ್ತ

" ನಿಮ್ಮ ಡ್ಯಾಡಿ ತುಂಬ ಯೋಚನೆ ಮಾಡುತ್ತಿದ್ದಾರೆ ಕರುಣಾಗರ್ಲ್! "

" ಏತಕ್ಕೆ ಜೆಸ್ಸಿ ? "

" ಕೀರ್ತಿಯದು ಒಂದು ದಾರಿ ಗೊತ್ತಾದಂತಾಯಿತು. ಕರುಣ ಏನು ಮಾಡುತ್ತಾಳೋ ಗೊತ್ತಾಗಲಿಲ್ಲ ಎಂದು ಚಿಂತಿಸುತ್ತಾರೆ. "

" ನಾನೇನು ಮಾಡಬೇಕು ? "

" ನೀನು ಮದುವೆಯಾಗಬೇಡವೇ ? "

" ನನಗೆ ಮದುವೆಯಾಗಲು ಇಷ್ಟವಿಲ್ಲ ಜೆಸ್ಸಿ. "

" ಓಲ್ಡ್ ಮೇಡ್ ಆಗಿರಬೇಕೆಂದು ಇಷ್ಟವೇ ? "

" ನಾನು ಮದುವೆಯಾಗಿ ಹೊರಟುಹೋದರೆ ನಿನ್ನ– ಡ್ಯಾಡಿಯನ್ನು ನೋಡಿಕೊಳ್ಳುವವರು ಯಾರು ? "

" ಹುಚ್ಚು ಹುಡುಗಿ. ಜೀವನವೇ ಹಾಗೆ. ಹಣ್ಣೆಲೆ ಉದುರುತ್ತಿರಬೇಕು – ಹಸಿರೆಲೆ ಚಿಗುರುತ್ತಿರಬೇಕು. "

" ನನಗೆ ಮದುವೆಯಾಗಲು ಇಷ್ಟವಿಲ್ಲ ಜೆಸ್ಸಿ. "

" ನಾನು ಒತ್ತಾಯ ಮಾಡುತ್ತಿಲ್ಲ ಕರುಣಾ. ಯೋಚನೆ ಮಾಡು. ಸಾಯುವ ಮುದುಕಿ ಏನೋ ಬಡಬಡಿಸತ್ತೆ ಎಂದು ತಾತ್ಸಾರ ಮಾಡಬೇಡ. "

" ನೀನು ಹೀಗೆ ಮಾತನಾಡಿದರೆ ನನಗೆ ಅಳು ಬರುತ್ತದೆ ಜೆಸ್ಸಿ. "

" ಬೇಡ ಡಾರ್ಲಿಂಗ್ ( Darling ) –ನಿನ್ನ ಕಣ್ಣಲ್ಲಿ ನೀರು ಬಂದರೆ ನಾನು ಸಹಿಸಲಾರೆ " ಎಂದು ಹೇಳಿದಳು.

ಜೆಸ್ಸಿ ಆಡಿದ ಮಾತು ಕರುಣೆಯ ಮೇಲೆ ಪ್ರಭಾವ ಬೀರದೆ ಇರಲಿಲ್ಲ. ಆದರೆ ಅನಿಶ್ಚಯತೆಯ ಹೊನಲು ಅವಳನ್ನು ಕೊಚ್ಚಿಕೊಂಡು ಹೋಗುತ್ತಿತ್ತು. ಏನೂ ತೋರದಿದ್ದರೆ ತನ್ನ ಸ್ಕೆಚ್ ಬುಕ್ (Sketch book) ಹಿಡಿದುಕೊಂಡು ಅದರ ಮೇಲೆ ಚಿತ್ರವಿಚಿತ್ರ ರೇಖಾ ಚಿತ್ರಗಳನ್ನು ಬರೆಯುತ್ತ ಕುಳಿತುಬಿಡುತ್ತಿದ್ದಳು.

' ಗುರುಗಳ ಆರಾಧನೆ ' ತನ್ನ ಮನೆಯಲ್ಲಿ ನಡೆಯುವಂತೆ ಮಾಡಬೇಕೆಂದು ಕೀರ್ತಿಯ ಉತ್ಕಟೇಚ್ಛೆಯಾಗಿತ್ತು. ರಾಮಸ್ವಾಮಪ್ಪನ ಮನೆಯಲ್ಲಿ ಸ್ಥಳ ಸಾಲದು – ಕಿಷ್ಕಿಂದ– ಅದೂ ಅಲ್ಲದೆ, ಅಲ್ಲಿಗೆ ಜೆಸ್ಸಿಯನ್ನೂ ಡ್ಯಾಡಿಯನ್ನೂ, ಕರುಣೆಯನ್ನೂ ಕರೆದುಕೊಂಡು ಹೋಗಲು ಸಾಧ್ಯವಿರಲಿಲ್ಲ. ತನ್ನ ಮನೆಯಲ್ಲಿಯೇ ' ಆರಾಧನೆ ' ನಡೆದರೆ ಜೆಸ್ಸಿ, ಡ್ಯಾಡಿ ನೋಡಲು ಸಾಧ್ಯ ಎಂದು ಯೋಚಿಸಿದ. ಆನಂದರಾಯರೂ ಅವನ ಅಭಿಪ್ರಾಯವನ್ನು ಸಮರ್ಥಿಸಿದರು. ಈ ವಿಷಯ ರಾಮಸ್ವಾಮಪ್ಪನಲ್ಲಿ ಪ್ರಸ್ತಾಪಿಸಿದಾಗ ಅವನು ಹಿಂದುಮುಂದು ನೋಡದೆ

" ಅದು ಮಾತ್ರ ಸಾಧ್ಯವಿಲ್ಲ ಸ್ವಾಮಿ " ಎಂದುಬಿಟ್ಟ.

" ಏಕೆ ರಾಮಸ್ವಾಮಪ್ಪನವರೇ ? " ಎಂದು ರಾಯರು ಕೇಳಿದರು.

" ಈಗ ಇಪ್ಪತ್ತು ವರ್ಷಗಳಿಂದ ಆರಾಧನೆ ಇಲ್ಲಿಯೇ ನಡಸಿಕೊಂಡು ಬಂದಿದ್ದೇವೆ. ಆ ದಿವಸ ನಮ್ಮ ಗುರುಗಳ ಶಿಷ್ಯ-ಶಿಷ್ಯೆಯರೆಲ್ಲಾ ಬರಬೇಕಾಗುತ್ತದೆ. "

" ಅದಕ್ಕೆ ಬೇಕಾದ ವ್ಯವಸ್ಥೆ ಮಾಡೋಣ ರಾಮಸ್ವಾಮಪ್ಪನವರೇ. ಅವರು ಕಂಟೋನ್ಮೆಂಟಿಗೆ ಕೀರ್ತಿಯವರ ಮನೆಗೆ ಹೋಗಿ ಬರುವುದಕ್ಕೆ ಒಂದು ಸ್ಪೆಷಲ್ ಬಸ್ ಗೊತ್ತು ಮಾಡೋಣ. "

" ಲಾಗಾಯತ್ತಿನಿಂದ ಬಂದಿರುವ ಸಂಪ್ರದಾಯ ತಪ್ಪಿಸುವುದಕ್ಕಾಗುತ್ತದೆಯೇ ಸ್ವಾಮಿ. ಆರಾಧನೆ ಇಲ್ಲಿಯೇ ಆಗಬೇಕು – ದೊಡ್ಡರಾಯರು,

ಅಮ್ಮಾವರು ನೋಡಬೇಕಾದರೆ ಅವರ ಮನೆಯಲ್ಲಿ ಒಂದು ದಿನ ನಾಟ್ಯ ಪ್ರದರ್ಶನ ಇಟ್ಟುಕೊಳ್ಳೋಣ ” ಎಂದ.

‘ ಸಂಪ್ರದಾಯದ ಮರಕ್ಕೆ ನೇಣುಹಾಕಿಕೊಂಡೇ ಇವರು ಈ ದುಃಸ್ಥಿತಿಗೆ ಇಳಿದುದು. ಇವರ ಕೈಹಿಡಿದ ಕಲೆಯೂ ಗತಿಹೀನವಾದುದು ’ ಎಂದು ರಾಯರು ಗೊಣಗಿಕೊಂಡರು.

‘ ಆರಾಧನೆಯ ದಿನ ’ ಕೀರ್ತಿ ಸ್ವಲ್ಪ ಬೇಗ ರಾಮಸ್ವಾಮಪ್ಪನವರ ಮನೆಗೆ ಹೋಗಬೇಕಾಗಿದ್ದುದರಿಂದ ಜೀವಾನಂದಂ ಅವರನ್ನು ಕರೆದುಕೊಂಡು ಬರುವ ಹೊಣೆಯನ್ನು ಫ್ರಾನ್ಸಿಸ್ ಮತ್ತು ವೆಸ್ಲಿಗೆ ಒಪ್ಪಿಸಿದ.

‘ ಆರಾಧನೆಯ ದಿನ ’ ಪೂಜೆ, ಪುರಸ್ಕಾರ, ಸಂತರ್ಪಣೆ ಎಲ್ಲವೂ ಮಧ್ಯಾಹ್ನವೇ ಮುಗಿದು ಹೋಗಿತ್ತು. ಸಂಜೆಯ ಕಾರ್ಯಕ್ರಮ ನಾಟ್ಯ ಸೇವೆ, ಮಂಗಳಾರತಿ, ಪ್ರಸಾದ ವಿನಿಯೋಗ. ರಾಮಸ್ವಾಮಪ್ಪ, ಜಯಮ್ಮನ ಸಹಾಧ್ಯಾಯಿಗಳೂ, ಶಿಷ್ಯರೂ ತಂಡತಂಡವಾಗಿ ನೆರೆದಿದ್ದರು. ರಾಮಸ್ವಾಮಪ್ಪನ ಬಡಕುಟೀರವಂದು ರಾಜಸಭೆಯಾಗಿ ಪರಿವರ್ತನಗೊಂಡಿತು.

ಉತ್ಸವದಲ್ಲಿ ಭಾಗ ವಹಿಸಲಿದ್ದ ಕಲಾವಿದೆಯರಿಗೆ ತೊಟ್ಟಿಯಲ್ಲಿದ್ದ ಒಂದು ರೂಮು ಬಿಟ್ಟುಕೊಡಲಾಗಿತ್ತು. ತೊಟ್ಟಿಯ ಬಲಭಾಗದ ರೂಮು ಕೀರ್ತಿಗೆ ಮೀಸಲಾಗಿತ್ತು. ಆನಂದರಾಯರು ಮನೆಯ ಹೊರಗೆ ಕಾದಿದ್ದು, ಜೀವಾನಂದಂ ಅವರನ್ನು ಸ್ವಾಗತಿಸಿ ಒಳಗೆ ಕರೆದುಕೊಂಡು ಬಂದರು. ಆ ನೂಕುನುಗ್ಗಲಿನಲ್ಲಿಯೇ ಸ್ಥಳ ಮಾಡಿಕೊಂಡು ರಾಯರು, ಜೀವಾನಂದಂ, ಫ್ರಾನ್ಸಿಸ್, ವೆಸ್ಲಿ ಕುಳಿತರು. ತೊಟ್ಟಿಯಲ್ಲಿದ್ದ ಸಣ್ಣ ಕಿಟಕಿಯ ತುಂಬ ಜನ, ಬಾಗಿಲಿನಲ್ಲಿ, ಬಾಗಿಲು ಹೊರಗೆ ಜನಜಂಗುಳಿ. ಸೂರಿನಲ್ಲಿದ್ದ ಸಣ್ಣ ಗವಾಕ್ಷಿಯೊಂದೇ ಉಸಿರಿಗೆ ಆಧಾರವಾಗಿದ್ದುದು.

ಜಯಮ್ಮನ ಶಿಷ್ಯೆಯರು ಭಾಮಾ, ಚಿನ್ನ ಇವರಿಂದ ಕಾರ್ಯಕ್ರಮ ಆರಂಭವಾಯಿತು. ಐದು ನಿಮಿಷ, ಹತ್ತು ನಿಮಿಷಕ್ಕಿಂತ ಹೆಚ್ಚಿನ ಅವಕಾಶ ಯಾರಿಗೂ ಇರಲಿಲ್ಲ. ಕೋಲಾರದ ನಂಜಾಸಾನಿ, ತಿರುಮಕೂಡಲ ನರಸಿ, ಮೈಸೂರಿನ ಪಾಪಾ, ಹೊಸೂರು ಸುಬ್ಬಿ, ಮುಡುಕತೊರೆ ಮ್ಹಾಲಕ್ಷ್ಮಿಯವರ ‘ ನಾಟ್ಯಸೇವೆ ’ ಸಾಗಿತು. ‘ ಕಲ್ಕತ್ತೆಯ ಕತ್ತಲೆ ಕೋಣೆ ’ ಯಲ್ಲಿ ಕುಳಿತಂತಾಗಿತ್ತು ಜೀವಾನಂದಂಗೆ. ಮುಖದಿಂದ ಒಂದೇಸಮನಾಗಿ ಬೆವರಿಳಿ

ಯುತ್ತಿತ್ತು. ಪಕ್ಕದಲ್ಲಿ ಕುಳಿತಿದ್ದ ಆನಂದರಾಯರ ಕಡೆ ತಿರುಗಿ

" ಕೀರ್ತಿಯವರ ಪ್ರೋಗ್ರ್ಯಾಂ ಇಲ್ಲವೋ " ಎಂದು ಕೇಳಿದರು.

" ಇದೆ. ಅವರದೇ ಕೊನೆಯ ಐಟಂ ( Item ) "

ಎಂದು ಹೇಳಿದರು. ಮಾಲಕ್ಷ್ಮಿ ಎದ್ದು ಹೋದ ಮೇಲೆ ಕೆಲವು ನಿಮಿಷಗಳು ವೇದಿಕೆಯ ಮೇಲೆ ಯಾರೂ ಬರಲಿಲ್ಲ. ಕೀರ್ತಿ ಸಿದ್ಧನಾಗುತ್ತಿರ ಬಹುದು ಎಂದು ಜೀವಾನಂದಂ ಸಮಾಧಾನ ಮಾಡಿಕೊಂಡರು. ಆದರೆ ವೇದಿಕೆಯ ಮೇಲೆ ಬಂದ ಜಯಮ್ಮನನ್ನು ನೋಡಿ ಜೀವಾನಂದಂ ಮುಖ ಸಿಂಡರಿಸಿದರು. ತಂಬೂರಿ ಮೀಟುವುದಕ್ಕೆ ರಾಮಸ್ವಾಮಪ್ಪ ಕುಳಿತ. ಪಿಳ್ಳಣ್ಣ ಕೈಗೆ ಮೃದಂಗವೆತ್ತಿಕೊಂಡ. ಜಯಮ್ಮನೂ ಕೈಗೊಂದು ತಂಬೂರಿ ತೆಗೆದು ಕೊಂಡು ಶ್ರುತಿ ಮಾಡಿಕೊಂಡಳು. ಆಕೆ ವರ್ಣ ಹಾಡುವಾಗ ಜೀವಾನಂದಂ ಯಾವ ಉತ್ಸಾಹವನ್ನೂ ತೋರಿಸಲಿಲ್ಲ. ಖಮಾಚ ರಾಗದಲ್ಲಿ ಒಂದು ಜಾವಡಿ ಹಾಡಿ, ಕ್ಷೇತ್ರಯ್ಯನ ಪದ ಹಾಡಲಾರಂಭಿಸಿದಳು. ಜೀವಾನಂದಂ ಮುಗ್ಧರಾಗಿ ಕುಳಿತುಬಿಟ್ಟರು. ಪದ ಮುಗಿದೊಡನೆಯೇ ಜಯಮ್ಮ ತಂಬೂರಿ ಕೆಳಗಿಡಲು ಜೀವಾನಂದಂ

" ದಯವಿಟ್ಟು ಒಂದು ಅಷ್ಟಪದಿ ಹಾಡಬೇಕು "

ಎಂದು ಕೇಳಿದರು. ಜಯಮ್ಮನ ಉತ್ಸಾಹವೂ ಇಮ್ಮಡಿಸಿತ್ತು. ಅಷ್ಟ ಪದಿ ಹಾಡಿ ' ಕೃಷ್ಣಕರ್ಣಾಮೃತ' ದಿಂದ ರಾಗಮಾಲಿಕೆಯಲ್ಲಿ ಒಂದು ಶ್ಲೋಕ ಹಾಡಿ ತಂಬೂರಿ ಕೆಳಗಿಳಿಸಿದಳು.

ಕೀರ್ತಿ ಪ್ರವೇಶಿಸಿ ನಾಟ್ಯವಾರಂಭಿಸಿದುದೂ ಜೀವಾನಂದಂ ಅವರ ಲಕ್ಷಕ್ಕೇ ಬಾರಲಿಲ್ಲ. ಜಯಮ್ಮನ ಹಾಡಿಕೆಯ ಗುಂಗು ಇಳಿದಿರಲಿಲ್ಲ.

ಕೀರ್ತಿ ಸ್ವರಜತಿ, ತಿಲ್ಲಾನ, ಅಷ್ಟಪದಿ ಅಭಿನಯಿಸಿ ' ಕೃಷ್ಣಾ ನೀ ಬೇಗನೆ ಬಾರೋ ' ದೇವರ ನಾಮ ಅಭಿನಯಿಸಿ ತೋರಿಸಿದ. ಅವನ ಅಂಗ ಶುದ್ಧಿ, ದೇಹಸೌಷ್ಠವ, ಭಾವ ವಿನ್ಯಾಸಗಳಿಗೆ ಸಭೆ ತಲೆದೂಗಿತು.

ಮಂಗಳಾರತಿಯಾದ ಮೇಲೆ ಎಲ್ಲರಿಗೂ ತಾಂಬೂಲ, ಬೂಂದಿಪ್ರಸಾದ ವಿನಿಯೋಗವಾಯಿತು.

ಅತಿಥಿಗಳು ಹೋದ ಮೇಲೆ ಆನಂದರಾಯರು ರಾಮಸ್ವಾಮಪ್ಪ,

ಜಯಮ್ಮನನ್ನು ಪ್ರಶಂಸಿಸಿ, ಅವರಿಗೆ ಜೀವಾನಂದಂ ಅವರ ಪರಿಚಯ ಮಾಡಿ ಕೊಟ್ಟರು.

"ಬೆಂಗಳೂರಿನಲ್ಲಿಯೇ ನೀವಿದ್ದೂ ನಿಮ್ಮ ಪರಿಚಯವಾಗದಿರುವುದು ನನ್ನ ದೌರ್ಭಾಗ್ಯ. ನಿಮ್ಮಷ್ಟು ಶುದ್ಧವಾಗಿ ಅಭಿನಯ ಹಿಡಿಯುವವರನ್ನು ನಾನು ನೋಡಿಯೇ ಇಲ್ಲ. ಕೀರ್ತಿಯವರಿಗೆ ಶಿಷ್ಯವಿತ್ತು ನೀವು ದೇಶಕ್ಕೇ ಮಹೋಪಕಾರ ಮಾಡುವಿರಿ" ಎಂದರು.

ಆನಂದರಾಯರು ನಸುನಗುತ್ತಾ

"ಹಿತ್ತಲಗಿಡ ಮದ್ದಲ್ಲ ಸ್ವಾಮಿ" ಎಂದರು.

ರಾಮಸ್ವಾಮಪ್ಪ ಎಲ್ಲರಿಗೂ ಪ್ರಸಾದ ತಂದುಕೊಟ್ಟ. ಎಲ್ಲರೂ ಅವನ ಅಪ್ಪಣೆ ಪಡೆದು ಹೊರಟರು.

ಕೀರ್ತಿ ತನ್ನ ಕಾರಿನಲ್ಲಿ ಬಂದಿದ್ದ. ಜೀವಾನಂದಂ ಅವರಿಗೂ ಕಾರಿತ್ತು. ಜೀವಾನಂದಂ ಕಾರಿನಲ್ಲಿ ಫ್ರಾನ್ಸಿಸ್, ವೆಸ್ಲಿಯನ್ನು ಕಳಿಸಿಕೊಟ್ಟು ಕೀರ್ತಿ ತನ್ನ ಕಾರಿನಲ್ಲಿ ಜೀವಾನಂದಂ ಅವರನ್ನು ಮನೆಗೆ ಕರೆದು ತಂದು ಬಿಟ್ಟ.

"ಪುನಃ ನಿಮ್ಮನ್ನು ಕಾಣುತ್ತೇನೆ ಕೀರ್ತಿಯವರೇ. ನಿಮ್ಮಲ್ಲಿ ತುಂಬ ಮಾತನಾಡಬೇಕಾಗಿದೆ" ಎಂದರು ಜೀವಾನಂದಂ.

"ನಿಮಗೆ ಯಾವಾಗಲೂ ಸ್ವಾಗತ. ನನ್ನ ಅಭಿನಯ ಮನಸ್ಸಿಗೆ ಬಂದಿತೋ ?"

"ಹೆಚ್ಚು ಮಾತನಾಡಲು ನನಗೆ ಉಸಿರುಕಟ್ಟಿ ಹೋಗಿದೆ. ಇಷ್ಟೇ ಹೇಳಬಯಸುತ್ತೇನೆ – ನೀವು ಮೂರು ನಾಲ್ಕು ವರ್ಷ ಇದೇ ರೀತಿ ಅಭ್ಯಾಸ ಮಾಡಿದರೆ ಖಂಡಿತವಾಗಿ ಉದಯಶಂಕರ್ ಅವರನ್ನು ಮೀರಿಸಬಲ್ಲಿರಿ."

ಕೀರ್ತಿಗೆ ಸ್ವರ್ಗ ಒಂದೇ ಗೇಣು ದೂರದಲ್ಲಿ ಉಳಿಯಿತು.

ಕೃಷ್ಣಚಂದ್ರರು, ಕರುಣ ವಿಶ್ರಾಂತಿಗೆ ತೆರಳಿದ್ದರು. ಜೆಸ್ಸಿ ಮಾತ್ರ ಕೀರ್ತಿಯನ್ನು ಕಾಯುತ್ತ ಕುಳಿತಿದ್ದಳು. ಅವನು ಬಂದ ಕೂಡಲೆ ಊಟಕ್ಕಿಟ್ಟು

"ಹೇಗಾಯಿತು ಪ್ರದರ್ಶನ ಸನ್"

ಎಂದು ಕೇಳಿದಳು. ಕೀರ್ತಿ ಸಾದ್ಯಂತವಾಗಿ ಅಂದಿನ ಕಾರ್ಯಕ್ರಮ

ವಿವರಿಸಿ, ಜೀವಾನಂದಂ ಆಡಿದ ಮಾತನ್ನು ತಿಳಿಸಿದ. ಜೆಸ್ಸಿ ಮಾತನಾಡಲಿಲ್ಲ. ಅವಳ ಕಣ್ಣುಗಳು ತುಂಬಿ ಬಂದು ಕೋಡಿ ಹರಿದವು.

" ಜೆಸ್ಸಿ – ಅಳುತ್ತಿರುವೆಯಾ ? " ಎಂದು ಕೇಳಿದ.

" ಇಲ್ಲ ಸನ್ – ತುಂಬ ಸಂತೋಷವಾಗಿದೆ. " ಎಂದಳು.

ಮಾರನೆಯ ದಿನ ಜೀವಾನಂದಂ ಕೀರ್ತಿಯನ್ನು ಕಾಣಲು ಬಂದರು. ಕೀರ್ತಿ ಮನೆಯವರಿಗೆಲ್ಲಾ ಜೀವಾನಂದಂ ಪರಿಚಯ ಮಾಡಿಕೊಟ್ಟ.

ಕೆಲವೇ ದಿನಗಳಲ್ಲಿ ಜೀವಾನಂದಂ ಕೀರ್ತಿಯ ಮನೆಯವರಾದರು.

ಡಿಸೆಂಬರ್ ತಿಂಗಳು ಓಡುತ್ತ ಬಂದಿತು. ಒಂದು ದಿನ ಜೀವಾನಂದಂ ಅಚ್ಚಾದ ಪ್ರಕಟನೆಯೊಂದನ್ನು ಕೀರ್ತಿಯ ಕೈಯಲ್ಲಿತ್ತರು. ಕೀರ್ತಿ ಅದನ್ನು ಓದಿಕೊಂಡು

" ಮೇನಕಾ, ಶ್ರೀಮತಿ, ನಟರಾಜ ವಶಿ, ಉದಯಶಂಕರ, ರುಕ್ಮಿಣಿ ದೇವಿ ಎಲ್ಲರೂ ಭಾಗ ವಹಿಸುತ್ತಾರೆ. "

" ಅಷ್ಟೇ ಅಲ್ಲ. ಮಣಿಪೂರಿ, ಕಥಾಕಳಿ, ಕಥಕ ಸಂಪ್ರದಾಯಗಳಲ್ಲಿ ಹೆಸರಾದವರೂ ಭಾಗ ವಹಿಸುತ್ತಾರೆ. "

" ಈ ನಾಟ್ಯಕಲೋತ್ಸವ ಪ್ರತಿವರ್ಷವೂ ಮಾಡುತ್ತಾರೆಯೇ ? "

" ಹಾಗೇನಿಲ್ಲ. ಆಗಾಗ್ಗೆ ಮಾಡುತ್ತಿರುತ್ತಾರೆ. ಈಗ್ಗೆ ಎರಡು ವರ್ಷಗಳ ಕೆಳಗೆ ಮುಂಬಯಿಯಲ್ಲಿ ಉತ್ಸವವಾಯಿತು. ಈ ವರ್ಷ ಮದರಾಸಿನಲ್ಲಿ ಉತ್ಸವ. "

" ನಾನು ಉತ್ಸವ ನೋಡಬೇಕಲ್ಲ. "

" ನೀವು ನೋಡಬೇಕೆಂದೇ ಪ್ರಕಟನೆ ಕೈಗಿತ್ತೆ. "

" ನೀವು ಬರುವಿರಷ್ಟೆ. "

" ನಾನು ಕಾರ್ಯಸಮಿತಿಯಲ್ಲಿದ್ದೇನೆ. "

" ನಾನೂ ಬರುತ್ತೇನೆ. "

" ಒಳ್ಳೆಯದು. ನಿಮ್ಮ ಸೀಟ್ ರಿಸರ್ವ್ ಮಾಡಿಸುತ್ತೇನೆ. ಉತ್ಸವಕ್ಕೆ ಪಂದನಲ್ಲೂರ ಮೀನಾಕ್ಷಿಸುಂದರಂ ಪಿಳ್ಳೆ ಬರುತ್ತಾರೆ. ನಾಲ್ಕು ದಿವಸವಾದರೂ ನೀವು ಅವರಲ್ಲಿ ಕಲಿಯುವುದು ಒಳ್ಳೆಯದು. "

" ರಾಮಸ್ವಾಮಪ್ಪನವರಲ್ಲಿ ನಾನು ಕಲಿತಿರುವುದೇ ಮುಗಿದಿಲ್ಲ. "

"ಪಿಳ್ಳೆಯವರಿಗೆ ತುಂಬ ಹೆಸರಿದೆ. ಅವರಲ್ಲಿ ಕಲಿತರೆ ನಿಮಗೆ ತುಂಬ ಲಾಭವಿದೆ."

"ಅವರಲ್ಲಿ ನಾನು ಕಲಿಯಬೇಕಾದರೆ ಅವರ ಊರಿಗೇ ಹೋಗಬೇಕು. ಡ್ಯಾಡಿ ಒಪ್ಪುತ್ತಾರೆಯೋ ಇಲ್ಲವೋ ?"

"ನಿಮ್ಮ ತಂದೆಯವರನ್ನು ಒಪ್ಪಿಸುವ ಭಾರ ನನಗಿರಲಿ."

ಎಂದು ಜೀವಾನಂದಂ ಆಶ್ವಾಸನವಿತ್ತರು.

ಮದರಾಸಿನಲ್ಲಿ ನಡೆದ 'ನಾಟ್ಯಕಲಾ ಮಹೋತ್ಸವ'ವನ್ನು ನೋಡಿ ಕೀರ್ತಿ ಆಶ್ಚರ್ಯಚಕಿತನಾದ. ಮೇನಕಾ ಅವರ ವಾದ್ಯಮೇಳ ವೈಖರಿ, ಶ್ರೀಮತಿಯವರ ಲಾಲಿತ್ಯ, ರುಕ್ಮಿಣಿದೇವಿಯವರ ಪರಿಶುದ್ಧ ಕಲೆ ಅವನ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡಿತು. ಜೀವಾನಂದಂ ಎಲ್ಲ ಕಲಾವಿದರ ಪರಿಚಯವನ್ನು ಕೀರ್ತಿಗೆ ಮಾಡಿಕೊಟ್ಟರು. ಮೀನಾಕ್ಷಿಸುಂದರಂ ಪಿಳ್ಳೆಯವರ ಪರಿಚಯವೂ ಆಯಿತು. ಕೀರ್ತಿಯನ್ನು ಶಿಷ್ಯನನ್ನಾಗಿ ಪರಿಗ್ರಹಿಸುವುದಕ್ಕೆ ಪಿಳ್ಳೆಯವರು ಒಪ್ಪಿಕೊಂಡರು.

ಮಹೋತ್ಸವ ಮುಗಿಸಿಕೊಂಡು ಹಿಂದಿರುಗಿದ ಕೆಲವು ದಿನಗಳ ತರುವಾಯ ಕೃಷ್ಣಚಂದ್ರರು ಒಂದು ದಿನ ಮಗನನ್ನು ಬರಮಾಡಿಕೊಂಡು

"ನಿನ್ನೆ ಸಂಜೆ ಜೀವಾನಂದಂ ಬಂದಿದ್ದರು ಸನ್. ನೀನು ಪಂದನಲ್ಲೂರಿಗೆ ಹೋಗಿ ಮೀನಾಕ್ಷಿಸುಂದರಂ ಪಿಳ್ಳೆಯವರ ಹತ್ತಿರ ಅಭ್ಯಾಸ ಮಾಡಬೇಕೆಂದಿರುವ ವಿಷಯ ತಿಳಿಸಿದರು."

"ಹೌದು. ಮದರಾಸಿನ ನಾಟ್ಯಕಲಾಮಹೋತ್ಸವದಲ್ಲಿ ಅವರ ಶಿಷ್ಯ ಶಿಷ್ಯೆಯರ ನಾಟ್ಯ ನೋಡಿದ ಮೇಲೆ ಅವರಲ್ಲಿ ಕಲಿಯಲು ಮನಸ್ಸಾಗಿದೆ."

"ರಾಮಸ್ವಾಮಪ್ಪನವರನ್ನು ಏನು ಮಾಡುತ್ತೀ ?"

"ಪಂದನಲ್ಲೂರಿಗೆ ಹೋಗಿ ಬಂದು, ಅವಶ್ಯಕ ಕಂಡುಬಂದರೆ ರಾಮಸ್ವಾಮಪ್ಪನವರಲ್ಲಿ ಅಭ್ಯಾಸ ಮುಂದುವರಿಸುತ್ತೇನೆ."

"ನೀನು ಇನ್ನೂ ಸ್ವಲ್ಪದಿನ ರಾಮಸ್ವಾಮಪ್ಪನವರಲ್ಲಿಯೇ ಕಲಿತಿದ್ದರೆ ಚೆನ್ನಾಗಿತ್ತು ಸನ್."

"ರಾಮಸ್ವಾಮಪ್ಪನವರದು ಹಳೆಯ ಸಂಪ್ರದಾಯ ಡ್ಯಾಡಿ. ಈಗಿನ ಜನಕ್ಕೆ ಅದು ಹಿಡಿಯುವುದಿಲ್ಲ."

" ಭರತನಾಟ್ಯವೇ ಹಳೆಯದು ಸನ್ – ಸಾವಿರಾರು ವರ್ಷಗಳ ಕೆಳಗಿನದು. "

" ನಾನು ಹೇಳಿದ್ದು ಹಾಗಲ್ಲ ಡ್ಯಾಡಿ – ಪಿಳ್ಳೆಯವರು ತುಂಬ ಪ್ರಸಿದ್ಧರು – ಅವರ ಸಂಪ್ರದಾಯ ಬಹಳ ಮುಂದಿಗೆ ಪ್ರಿಯವಾಗಿದೆ. "

" ಹಾಗೆ ಹೇಳು. ನೀನು ಹೆಸರುವಾಸಿಯಾವ ಗುರುಗಳ ಶಿಷ್ಯನೆನಿಸಿಕೊಳ್ಳಬೇಕು. "

" ತಪ್ಪು ತಿಳಿದುಕೊಳ್ಳಬೇಡಿ ಡ್ಯಾಡಿ – ರಾಮಸ್ವಾಮಪ್ಪನವರ ಬಗ್ಗೆ ನನಗೆ ತುಂಬ ಗೌರವವಿದೆ. "

" ನಿನ್ನ ಯಾವ ಆಸೆಗೂ ನಾನು ಅಡ್ಡಿಯಾಗುವುದಿಲ್ಲ ಸನ್. ಆದರೆ ಒಂದು ಮಾತು ಮರೆಯಬೇಡ. ರಾಮಸ್ವಾಮಪ್ಪನವರು ನಿನಗೆ ದಾರಿ ತೋರಿಸಿಕೊಟ್ಟರು. ನಿನ್ನ ವಿದ್ಯೆಗೆ ಅವಶ್ಯಕವಾದ ಬುನಾದಿ ಹಾಕಿಕೊಟ್ಟರು. ನೀನು ಯಾರಲ್ಲಿ ಕಲಿಯಲಿ, ಎಷ್ಟು ಪ್ರಸಿದ್ಧಿಗೆ ಬರಲಿ, ರಾಮಸ್ವಾಮಪ್ಪನವರನ್ನು ಮರೆಯಬಾರದು. ಅವರ ಮನಸ್ಸು ನೊಂದರೆ ನಿನಗೆ ಶ್ರೇಯಸ್ಸಾಗುವುದಿಲ್ಲ. ಗುರುಶಾಪದಷ್ಟು ಭಯಂಕರವಾದುದು ಮತ್ತೆ ಯಾವದೂ ಇಲ್ಲ. "

ಎಂದರು. ತಂದೆ ಇಷ್ಟು ಕಠಿಣವಾಗಿ ನುಡಿಯಬಲ್ಲರೆಂಬುದನ್ನು ಕೀರ್ತಿ ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ.

ಆದರೂ ಅವನು ಮನಸ್ಸು ಬದಲಾಯಿಸಲಿಲ್ಲ.

ಜನವರಿ ತಿಂಗಳ ಕೊನೆಗೆ ಪಂದನಲ್ಲೂರಿಗೆ ಪ್ರಯಾಣ ಮಾಡಿದ.

೮

ಕೀರ್ತಿ ಪ್ರಯಾಣ ಮಾಡಿದ ಒಂದು ವಾರದಲ್ಲಿ ಜೆಸ್ಸಿ ಹಾಸಿಗೆ ಹಿಡಿದು ಮಲಗಿಬಿಟ್ಟಳು. ಅವನ ಮನಸ್ಸಿಗೆ ಆತಂಕವಾಗಬಾರದೆಂದು ಕೃಷ್ಣಚಂದ್ರರು ಜೆಸ್ಸಿಯ ಪರಿಸ್ಥಿತಿಯನ್ನು ಅವನಿಗೆ ತಿಳಿಸಲಿಲ್ಲ.

ಎರಡು ತಿಂಗಳು ಹಾಗೂ ಹೀಗೂ ಜೆಸ್ಸಿ ಕಾಲ ದೂಡಿದಳು.

ಎಪ್ರಿಲ್ ತಿಂಗಳಲ್ಲಿ ಜೆಸ್ಸಿಯ ಪರಿಸ್ಥಿತಿ ಚಿಂತಾಜನಕವಾಯಿತು. ರಾತ್ರಿಯೆಲ್ಲಾ 'ಕೀರ್ತಿ– ನಾಟ್ಯ– ವಿಶ್ವಖ್ಯಾತಿ– ಉದಯಶಂಕರನಿಗಿಂತ ಮೇಲು– ' ಎಂದು ಬಡಬಡಿಸುತ್ತಿದ್ದಳು. ಒಂದು ದಿನ ಮಧ್ಯಾಹ್ನ – ಡಾಕ್ಟರ್ ಎದುರಿಗೇ ಜೆಸ್ಸಿ ರಕ್ತ ಕಾರಿಕೊಂಡಳು. ಮೈಯಲ್ಲಿ ೧೦೫ ಡಿಗ್ರಿ ಜ್ವರ – ಬಾಯಲ್ಲಿ ಅಸ್ಪಷ್ಟ ಮಾತುಗಳು – ರಕ್ತ ಕಾರಿಕೊಂಡ ಹತ್ತೇ ನಿಮಿಷಗಳಲ್ಲಿ ಜೆಸ್ಸಿಯ ಸಮಸ್ತ ಕಷ್ಟವೂ ಪರಿಹಾರವಾಗಿತ್ತು.

ಕೀರ್ತಿ ಬರುವ ವೇಳೆಗೆ ಜೆಸ್ಸಿಯ ಅವಶೇಷದ ಸಂಸ್ಕಾರವಾಗಿ ಹೋಗಿತ್ತು.

"ಇದು ಗುರು ಶಾಪ" ಎಂದು ಕೃಷ್ಣಚಂದ್ರರು ತಮ್ಮಷ್ಟಕ್ಕೆ ತಾವೇ ಹೇಳಿಕೊಂಡರು.

ಜೆಸ್ಸಿಯ ಸಮಸ್ತ ಜವಾಬ್ದಾರಿಯನ್ನೂ ಕರುಣ ನಿರ್ವಹಿಸಬೇಕಾಯಿತು.

ಮೊದಲೇ ಅನಾಸಕ್ತಿಯೋಗಾರೂಢರಾಗಿದ್ದ ಕೃಷ್ಣಚಂದ್ರರು ಮತ್ತಷ್ಟು ಅನಾಸಕ್ತರಾಗಿದ್ದರು. ಸಾಮಾನ್ಯವಾಗಿ ಅವರು ರೂಮು ಬಿಟ್ಟೇ ಬರುತ್ತಿರಲಿಲ್ಲ. ಬೆಳಿಗ್ಗೆ ಮತ್ತು ಸಂಜೆ ಸ್ವಲ್ಪ ಹೊತ್ತು ತೋಟದಲ್ಲಿ ತಿರುಗಾಡುತ್ತಿದ್ದರು. ಉಳಿದ ವೇಳೆಯನ್ನೆಲ್ಲಾ ವ್ಯಾಸಂಗ, ಚಿಂತನೆಯಲ್ಲಿ ಕಳೆಯುತ್ತಿದ್ದರು.

ಕೀರ್ತಿಯ ಸಂಸ್ಕೃತ ವ್ಯಾಸಂಗ ಮುಂದುವರಿಯಲಿಲ್ಲ. ಪಂಡಿತರು ಕೃಷ್ಣಚಂದ್ರರೊಂದಿಗೆ ಸ್ವಲ್ಪ ಹೊತ್ತಿದ್ದು, ಅವರಿಗೆ ಯಾವದಾದರೂ ಗ್ರಂಥ ಓದಿ ಹೇಳಿ ಮನೆಗೆ ಹೋಗುತ್ತಿದ್ದರು.

ಕೃಷ್ಣಚಂದ್ರರ ಬಳಿಗೆ ಕೀರ್ತಿ, ಕರುಣ ನಿರ್ದಿಷ್ಟ ವೇಳೆಯಲ್ಲಿಯೇ ಹೋಗುತ್ತಿದ್ದರು. ನಾಲ್ಕಾರು ನಿಮಿಷಗಳಲ್ಲಿ 'ಸಂದರ್ಶನ ಪ್ರಕರಣ' ಮುಗಿದು ಹೋಗುತ್ತಿತ್ತು. ಕೃಷ್ಣಚಂದ್ರರ ಬೆನ್ನು ಬಿಡದೆ, ಸದಾ ಅವರ ಕಾವಲು ಕಾಯುತ್ತಿದ್ದವನು ಡಿಕ್ಕಿಯೊಬ್ಬನೇ.

ಒಂದು ದಿನ ಬೆಳಿಗ್ಗೆ ಕೃಷ್ಣಚಂದ್ರರು ತೋಟದಲ್ಲಿ ತಿರುಗಾಡುತ್ತಿದ್ದಾಗ ಕೀರ್ತಿಯ ರೂಮಿನಿಂದ ಹೊಲೆಬಯ್ಗಳ ಅಪಶಬ್ದಗಳು ಕೇಳಿಬಂದವು. ಅವುಗಳನ್ನು ಕೇಳಲಾರದೆ ಆ ಸ್ಥಳ ಬಿಟ್ಟು ಅವರು ದೂರ ಹೋದರು. ಸ್ವಲ್ಪ

ಹೊತ್ತಿನ ಮೇಲೆ ರೂಮಿಗೆ ಬಂದ ಡಿಕ್ಕಿಯಿಂದ ಕೀರ್ತಿಯ ಕೋಪದ ಕಾರ್‍ಯವನ್ನರಿತು ಖಿನ್ನರಾದರು.

ಸಂಜೆ, ಹೊರಗೆ ಹೋಗುವ ಮುನ್ನ ತಮ್ಮನ್ನು ಕಂಡುಹೋಗಬೇಕೆಂದು ಕೃಷ್ಣಚಂದ್ರರು ಮಗನಿಗೆ ಹೇಳಿಕಳಿಸಿದರು. ಕೀರ್ತಿ ಬಂದು ಕುಳಿತ. ಕೃಷ್ಣಚಂದ್ರರು ಸ್ವಲ್ಪ ಹೊತ್ತು ಅವನ ನಾಟ್ಯಶಿಕ್ಷಣದ ಮೇಲೆ ಮಾತನಾಡುತ್ತಿದ್ದು ಒಮ್ಮೆಲೇ

" ಬೆಳಿಗ್ಗೆ ನಿನ್ನ ರೂಮಿನಿಂದ ಬರುತ್ತಿದ್ದ ಮಾತುಗಳು ನನ್ನ ಕಿವಿಯ ಮೇಲೆ ಬಿದ್ದವು ಸನ್. "

ಕೀರ್ತಿ ಮೌನವಾಗಿದ್ದ.

" ನಿನಗೆ ಬಹಳ ಕೋಪ ಬಂದಿತೆಂದು ಕಾಣುತ್ತದೆ. "

ಕೀರ್ತಿಗೆ ಮೌನದ ಬೆಲೆ ಗೊತ್ತಿತ್ತು.

" ಡಿಕ್ಕಿ ಏನಾದರೂ ತಪ್ಪು ಮಾಡಿದನೇ ? "

ಕೀರ್ತಿ ಬಾಯಿ ಬಿಡಲೇ ಬೇಕಾಯಿತು. ಆದರೆ ಏನು ಹೇಳುವುದು ಸ್ವಲ್ಪ ಯೋಚಿಸಿ

" ಡಿಕ್ಕಿ ತುಂಬ ಅವಿಧೇಯನಾಗುತ್ತಿದ್ದಾನೆ ಡ್ಯಾಡಿ. "

" ಏನು ಮಾಡಿದ ? "

" ನನ್ನ ಷೂಸುಗಳಿಗೆ ಬಣ್ಣ ಹಾಕು ಎಂದು ನಿನ್ನೆಯೇ ಹೇಳಿದ್ದೆ. ಗ್ಯಾಬರ್‌ಡೀನ್ ಸೂಟ ಐರನ್ ಮಾಡಿಡು ಎಂದು ಹೇಳಿದ್ದೆ. "

" ಅವನು ಮಾಡಿಟ್ಟಿರಲಿಲ್ಲ ! "

" ನಾನು ಏನು ಹೇಳಿದರೂ ಹೀಗೇ ಮಾಡುತ್ತಾನೆ ಡ್ಯಾಡಿ. "

" ನಿನ್ನೆಯೆಲ್ಲಾ ಅವನಿಗೆ ನನ್ನ ಕೆಲಸವೇ ಆಯಿತು ಸನ್. "

" ತಪ್ಪು ಮಾಡುವುದಲ್ಲದೆ ಪ್ರತಿಭಟಿಸಿ ಮಾತನಾಡುತ್ತಾನೆ. "

" ಡಿಕ್ಕಿ ನಮ್ಮ ಆಳು ನಿಜ. ಅವನಿಗೆ ನಾವು ಸಂಬಳ ಕೊಡುತ್ತೇವೆ. ಅನ್ನ ಹಾಕುತ್ತೇವೆ. ಆದರೆ ಅವನೂ ಮನುಷ್ಯನಲ್ಲವೇ ಸನ್. ವಿಶ್ವಾಸದಲ್ಲಿ ಆಗುವ ಕೆಲಸ ದುರ್ಭಾಷೆಯಿಂದಾಗುವುದಿಲ್ಲ. ಇಷ್ಟು ಅಲ್ಪ ವಿಷಯಕ್ಕೆ ನೀನು ಎಚ್ಚರತಪ್ಪಬಾರದಾಗಿತ್ತು. ಎಷ್ಟೇ ಕೋಪ ಬಂದರೂ ಬಾಯಿ ಹಗುರ ಮಾಡಬಾರದು. "

" ತಪ್ಪಾಯಿತು ಡ್ಯಾಡಿ."

ಎಂದವನೇ ಕೀರ್ತಿ ಎದ್ದುಬಿಟ್ಟ. ಡ್ಯಾಡಿಯ ಮೇಲೆ, ಡಿಕ್ಕಿಯ ಮೇಲೆ – ಪ್ರಪಂಚದ ಮೇಲೇ ಅವನಿಗೆ ಭಯಂಕರ ಕೋಪ ಬಂದಿತ್ತು. ಆದರೆ ಅಡಗಿಸಿಕೊಳ್ಳದೆ ವಿಧಿಯಿರಲಿಲ್ಲ.

ಜೀವಾನಂದಂ, ಕೀರ್ತಿಯ ಮನೆಯಲ್ಲಿ ಹಳಬರಾದಂತೆ ಕೀರ್ತಿ ಕರುಣ ಇಬ್ಬರೂ ಜೀವಾನಂದಂ ಮನೆಯಲ್ಲಿ ಹಳಬರಾದರು. ಜೀವಾನಂದಂ ಗೆಳೆಯ ಗೆಳತಿಯರು ಕೀರ್ತಿ, ಕರುಣ ಇವರ ಗೆಳೆಯ ಗೆಳತಿಯರಾದರು. ದಿನದಿನಕ್ಕೆ ಅವರ ಬಳಗ ಬೆಳೆಯಲಾರಂಭಿಸಿತು.

ಕೀರ್ತಿಯ ' ನಾಟ್ಯಾಭ್ಯಾಸ ' ಮನೆಯಲ್ಲಿಯೇ ಸಾಗಿತ್ತು. ಜೀವಾನಂದಂ ನೆರವಿನಿಂದ ಮದರಾಸಿನ ಕುಂಜುಮಣಿಯನ್ನು ಕರೆಸಿಕೊಂಡು ಅಭ್ಯಾಸ ಸಾಗಿಸಿದ್ದ.

ತನ್ನ ಶಿಕ್ಷಣ ಅರ್ಧದಲ್ಲಿಯೇ ಬಿಟ್ಟು ಕೀರ್ತಿ ಪಂದನಲ್ಲೂರಿಗೆ ಹೋದುದಕ್ಕೆ ರಾಮಸ್ವಾಮಪ್ಪನಿಗೆ ಕೋಪ ಬಂದಿತ್ತು. ಅವನು ಪಂದನಲ್ಲೂರಿನಿಂದ ಹಿಂದಿರುಗಿದ ಮೇಲೆ ಅವನಿಗೂ ರಾಮಸ್ವಾಮಪ್ಪನಿಗೂ ಹೇಗಾದರೂ ರಾಜಿ ಮಾಡಿಸಬೇಕೆಂದು ಆನಂದರಾಯರು ಪ್ರಯತ್ನಿಸಿದರು. ಪ್ರಯಾಸದಿಂದ ರಾಮಸ್ವಾಮಪ್ಪನನ್ನು ಒಪ್ಪಿಸಿದರು. ಆದರೆ ಕೀರ್ತಿಯನ್ನು ಒಪ್ಪಿಸಲು ಸಾಧ್ಯವಾಗಲಿಲ್ಲ. ರಾಮಸ್ವಾಮಪ್ಪನ ಶಿಕ್ಷಣದಲ್ಲಿ ' ಫ್ಯಾಷನ್ ' ಇಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟ. ಅವನ ಶಿಕ್ಷಣ ಅರ್ಧಾಂತಕವಾಗದಂತೆ ಜೀವಾನಂದಂ ಕುಂಜುಮಣಿಯನ್ನು ಕರೆಸಿಕೊಟ್ಟರು.

ಪಂದನಲ್ಲೂರಿಗೆ ಮತ್ತೆ ಹೋಗಿ ಶಿಕ್ಷಣ ಮುಂದುವರಿಸಬೇಕೆಂಬ ಆಕಾಂಕ್ಷೆ ಕೀರ್ತಿಯನ್ನು ಬಿಟ್ಟಿರಲಿಲ್ಲ. ಜೀವಾನಂದಂ ಅದಕ್ಕೆ ಉತ್ತೇಜನವನ್ನೂ ಕೊಟ್ಟಿದ್ದರು.

ಆದರೆ ವಿಧಿ ಅಡ್ಡ ಬಂದಿತ್ತು. ಕೃಷ್ಣಚಂದ್ರರು ಹಾಸಿಗೆ ಹಿಡಿದು ಮಲಗಿ ಬಿಟ್ಟರು. ಜೆಸ್ಸಿ ಕಣ್ಣು ಮುಚ್ಚಿದಾಗಲೇ ತಮ್ಮ ಕಥೆಯೂ ಮುಗಿಯಿತೆಂದು ಕೃಷ್ಣಚಂದ್ರರಿಗೆ ಚೆನ್ನಾಗಿ ಮನವರಿಕೆಯಾಗಿದ್ದರೂ ಮಕ್ಕಳ ಸಲುವಾಗಿ ಜೀವ ಧರಿಸಲು ಶಪಥ ತೊಟ್ಟಿದ್ದರು. ಆದರೆ ಜೆಸ್ಸಿಯ ನಿಧನ ಕೃಷ್ಣ

ಚಂದ್ರರ ಗಮನಕ್ಕೆ ಬಾರದಷ್ಟು ಅವರ ಮೇಲೆ ವಿಗಡ ಪರಿಣಾಮವನ್ನುಂಟು ಮಾಡಿತ್ತು.

ಅಮರತ್ವ ಯಾರಿಗೆ ಬೇಡ? ಸಾವಿನ ಭೀತಿಯಿಲ್ಲದೆ ಅನಂತಕಾಲ ಜೀವಿಸಿರಬೇಕೆಂದು ಯಾರು ಬಯಸುವುದಿಲ್ಲ? ಅನಂತ ಜೀವನದಿಂದ ಸುಖವಿದೆಯೇ? ಸುಖಕ್ಕಾಗಿ ಮನುಷ್ಯ ಬದುಕಲು ಬಯಸುತ್ತಾನೆಯೇ? ಅರ್ಧ– ಮುಕ್ಕಾಲು ಶತಮಾನ ಬಾಳಿ, ಬದುಕಿ, ಜೀವನದ ಜೇವುಂಡು. ಅವರ ಕಪಿಗೆ ಬೇಸತ್ತಿರುವವನೂ ಸಾಯಲು ಹಿಂಜರಿಯುತ್ತಾನೆ. ಬದುಕಲು ಬಯಸುತ್ತಾನೆ. ಪ್ರಕೃತಿ ಮನುಷ್ಯನ ಮೇಲೆ ಒಡ್ಡಿರುವ ಎಲ್ಲ ಮಾಯಾ ಜಾಲಗಳಿಗಿಂತ ಪ್ರಬಲವಾದುದು ಈ ಬದುಕಿನ ಮೋಹ.

ಕೃಷ್ಣಚಂದ್ರರಿಗೂ ಬದುಕಿನ ಮೋಹ ಬಿಟ್ಟಿರಲಿಲ್ಲ. ಆದರದು ತಮಗಾಗಿಯಲ್ಲ – ತಮ್ಮ ಮಕ್ಕಳಿಗಾಗಿ ಎಂದು ತಮ್ಮನ್ನು ತಾವು ನಂಬಿಸಿದ್ದರು.

ಮನುಷ್ಯನ ಬಯಕೆಯ ವೃಕ್ಷದಲ್ಲಿ ಮೂಡುವ ಮೊಗ್ಗೆ, ಹೀಚುಗಳೆಲ್ಲಾ ಹಣ್ಣಾಗುವುದಾದರೆ........!

ಘಟಾನುಘಟಿಗಳಾದ ಡಾಕ್ಟರುಗಳು ಕೃಷ್ಣಚಂದ್ರರನ್ನು ಉಳಿಸಲು ನಿಂತರು. ತಾವು ವಿಯನ್ನಾ, ಮ್ಯೂನಿಕ್ ಲಂಡನ್‌ಗಳಲ್ಲಿ ಕಲಿತಿದ್ದ ವೈದ್ಯ ಜ್ಞಾನವನ್ನೆಲ್ಲಾ ಉಪಯೋಗಿಸಲಾರಂಭಿಸಿದರು. ಆದರೆ ಧರ್ಮಾವತಾರನ ವಿಶ್ವವಿದ್ಯಾನಿಲಯಕ್ಕೆ ನಚಿಕೇತನಂತೆ ಹೋಗಿ ಬಂದವರು ಯಾರೂ ಇರಲಿಲ್ಲ.

ಕೃಷ್ಣಚಂದ್ರರೂ ಗತಿಸಿದವರ ಅಸಂಖ್ಯಾತ 'ಕ್ಯೂ' ನಲ್ಲಿ ನಿಲ್ಲಬೇಕಾಯಿತು.

ಕೀರ್ತಿಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ಜೆಸ್ಸಿಯ ನಿಧನದ ನೋವು ಹಳತಾಗುವುದಕ್ಕಿಲ್ಲ – ಗಾಯದ ಮೇಲೆ ಬರೆ – ಹುಣ್ಣಿನ ಮೇಲೆ ಬೊಕ್ಕೆ.

ಕೀರ್ತಿ ಹೊಟ್ಟೆಯ ಪಾಡಿಗಾಗಿ ಯೋಚಿಸಬೇಕಾಗಿರಲಿಲ್ಲ – ರಾಜಭೋಗ ಅನುಭವಿಸಿದರೂ ಸವೆಯದಷ್ಟು ಹಣವನ್ನು ತಂದೆ ಗಳಿಸಿಟ್ಟಿದ್ದರು.

ಮನೆಯ ವಿಷಯ ಯೋಚಿಸಬೇಕಾಗಿರಲಿಲ್ಲ. ಜೆಸ್ಸಿಯ ನಿಧನದ ಮೇಲೆ ಕರುಣ ಮನೆಯ ಸಮಸ್ತ ಜವಾಬ್ದಾರಿ ವಹಿಸಿಕೊಂಡು ದಕ್ಷತೆಯಿಂದ ನಿರ್ವಹಿಸುತ್ತಿದ್ದಳು.

ತಂದೆಯ ಸಂಗ ಹೋಯಿತೆಂದು ದುಃಖಿಸಬೇಕೇ ? – ತಂದೆ, ಮಗ ಒಬ್ಬರನ್ನೊಬ್ಬರು ಕಾಣುತ್ತಿದ್ದುದು ದಿನಕ್ಕೊಮ್ಮೆ– ಹತ್ತೇ ನಿಮಿಷ ಕಾಲ.

ಆದರೂ ಕೀರ್ತಿಯ ಹೃದಯದಲ್ಲಿ ಅವರ್ಣನೀಯ ಶೂನ್ಯತೆ ವ್ಯಾಪಿಸಿತು. ಎಲ್ಲಿಯೋ ಮೂಲೆಯಲ್ಲಿ ಕುಳಿತು ಒಂದು ಜೀವ ಸದಾ ಕೀರ್ತಿ ಕರುಣ ಇವರ ಶ್ರೇಯಸ್ಸನ್ನು ಹಾರೈಸುತ್ತಿತ್ತು. ಆ ಶ್ರೇಯಃಪ್ರಾರ್ಥನೆಯು ಸುವರ್ಣ ಕಿರಣ ಕೀರ್ತಿ, ಕರುಣ ಇವರಿಗೆ ಗೋಚರವಾಗದಂತೆ ಒಂದು ವಿಲಕ್ಷಣ ಪರಿಣಾಮುವನ್ನೆಸಗುತ್ತಿತ್ತು. ಅದರಿಂದ ಏನೋ ಧೈರ್ಯ, ಏನೋ ಶಕ್ತಿ, ಏನೋ ತೃಪ್ತಿ ಲಭಿಸುತ್ತಿತ್ತು. ಬಾಳು ಭದ್ರವಾದ ಬುನಾದಿಯ ಮೇಲೆ ನಿಂತಿದೆ ಎಂದೆನಿಸುತ್ತಿತ್ತು.

ಆ ತೃಪ್ತಿಯಿಂದ ಕೀರ್ತಿಯ ಹೃದಯ ವಂಚಿತವಾಗಿತ್ತು.

ಬಾಳು ಮುಂದಕ್ಕೆ ಸಾಗಿ ಹೋಗಲೇ ಬೇಕು. ನಿಯತಿಯ ಮಹಾ ಚಕ್ರವಿಭ್ರಮಣದಲ್ಲಿ ಬಾಳು – ಸಾವು ಎರಡು ಘಟ್ಟಗಳು. ಒಂದನ್ನನುಸರಿಸಿ ಒಂದು ಬರಲೇ ಬೇಕು.

## ೬

ಕೀರ್ತಿಯ ಮನಸ್ಸು ನಿರ್ವಿಣ್ಣತೆಗೆ ತುತ್ತಾಗದಂತೆ ಜೀವಾನಂದಂ, ಆನಂದರಾಯರು ನೆರವಾದರು. ಕೀರ್ತಿಯ ಶ್ರದ್ಧೆ, ಕರ್ತವ್ಯನಿಷ್ಠೆ ಕಂಡು ಆನಂದರಾಯರಿಗೆ ಪರಮ ಸಂತೋಷವಾಗಿತ್ತು. ದಿನಕ್ಕೆ ಆರೇಳು ಗಂಟೆಗಳ ಸತತ ಅಭ್ಯಾಸ ಕುಂಜುಮಣಿಯ ಜತೆಯಲ್ಲಿ – ತರುವಾಯ ಅದೇ ಧ್ಯಾನ, ಚಿಂತೆ! ಅವಕಾಶ ಸಿಕ್ಕಿದಾಗಲೆಲ್ಲಾ ಬಂದು ಕುಳಿತು ಕೀರ್ತಿಯ ಅಭ್ಯಾಸವನ್ನು ನೋಡುತ್ತಿದ್ದರು. ದಿನದಿನಕ್ಕೆ ಅವನ ಮೈಕಟ್ಟಿನಲ್ಲಾಗುತ್ತಿದ್ದ ಮಾರ್ಪಾಟು, ಚಲನವಲನಗಳಲ್ಲಿ ತೋರುತ್ತಿದ್ದ ನಯ, ಗಾಂಭೀರ್ಯ ಕಂಡು ಆನಂದರಾಯರಿಗೆ ಕೀರ್ತಿಯ ಕಲಾಪ್ರತಿಭೆಯ ಬಗ್ಗೆ ಅಪಾರ ನಂಬಿಕೆ ಹುಟ್ಟಿತ್ತು.

ಒಂದು ದಿನ ಕೀರ್ತಿ ತನ್ನ ಅಭ್ಯಾಸ ಮುಗಿಸಿಕೊಂಡು, ಆನಂದರಾಯ

ರನ್ನು ತನ್ನ ಕೋಣೆಗೆ ಕರೆದೊಯ್ದು.

"ನಿಮ್ಮಲ್ಲಿ ಒಂದು ಆಪ್ತಾಲೋಚನೆ ಮಾಡಲು ಇಲ್ಲಿಗೆ ಕರೆತಂದೆ ರಾಯರೇ."

"ಹೇಳಿ – ಏನು ವಿಷಯ."

"ನನ್ನ ಅಭ್ಯಾಸ ಪ್ರತಿನಿತ್ಯ ನೋಡುತ್ತಿರುವಿರಿ – ನಿಮ್ಮ ಅಭಿಪ್ರಾಯ ವೇನು?"

"ನಿಮ್ಮ ಸಾಧನಶ್ರದ್ಧೆ ನಿಮ್ಮನ್ನು ಉತ್ತಮ ಕಲಾವಿದರನ್ನಾಗಿ ಮಾಡು ವುದರಲ್ಲಿ ಯಾವ ಸಂದೇಹವೂ ಇಲ್ಲ ಕೀರ್ತಿಯವರೇ."

"ಮುಂದಿನ ಮಾತಿರಲಿ – ಈಗಿನದನ್ನು ಹೇಳಿ."

"ಏನು ಹೇಳಲಿ?"

"ನನ್ನ ನಾಟ್ಯ ಹೇಗಿದೆ."

"ಚೆನ್ನಾಗಿದೆ."

"ಪ್ರದರ್ಶನಕ್ಕೆ ತಡೆಯಬಹುದೇ?"

"ನನ್ನ ಸ್ಪಷ್ಟ ಅಭಿಪ್ರಾಯ ಕೇಳುತ್ತಿರುವಿರೋ – ಅಥವಾ ದಾಕ್ಷಿಣ್ಯದ ಅಭಿಪ್ರಾಯ ಕೇಳುತ್ತಿರುವಿರೋ?"

"ನೀವು ನನ್ನ ಹಿತೈಷಿಗಳೆಂದು ತಿಳಿದುಕೊಂಡಿದ್ದೇನೆ."

"ಹಾಗಾದರೆ ನಾನು ಸತ್ಯವನ್ನೇ ಹೇಳಬೇಕು. ಅಪ್ರಿಯವಾದರೂ ಸತ್ಯವನ್ನು ಹೇಳಬೇಕಾದುದು ಹಿತೈಷಿಯ ಧರ್ಮ."

"ಹೌದು. ಸತ್ಯವನ್ನೇ ಹೇಳಿ."

"ವಯಸ್ಸಾಗಿ ಬಿಡುವುದಲ್ಲ ಎಂದು ನೀವು ಹೆದರಬೇಕಾದದ್ದಿಲ್ಲ. ಇನ್ನೂ ಕೆಲವು ವರ್ಷ ತಡೆಯಬಹುದು. ಪ್ರದರ್ಶನ – ಜನಸ್ತುತಿ ಇವು ಮಾದಕ ಪದಾರ್ಥಗಳು. ಈ ಬಗೆಯ ಪ್ರಲೋಭನೆಗಳು ಪ್ರತಿಯೊಬ್ಬ ಕಲಾವಿದ ನನ್ನೂ ಕಾಡಿಸುತ್ತವೆ. ಉದಯಶಂಕರ್, ಗೋಪೀನಾಥ್, ಮೇನಕಾ ಇವ ರನ್ನು ನೋಡಿ – ಎಷ್ಟು ವರ್ಷಗಳು ತಮ್ಮ ದೇಹವನ್ನು ಈ ಕಲೆಗಾಗಿ ತೇಯ್ದಿ ದ್ದಾರೆ. ಪ್ರದರ್ಶನ ಕೊಡುವುದಕ್ಕೆ ಆತುರಪಡಬೇಡಿ. ನಾಟ್ಯಕಲೆ ಈಗೀಗ ನಿಮ್ಮ ಹಿಡಿತಕ್ಕೆ ಸಿಕ್ಕುತ್ತದೆ – ಅದನ್ನೇ ಇನ್ನೂ ಕೆಲವು ವರ್ಷ ಸಾಧಿಸಿ. — ಅಲ್ಲದೆ, ಪ್ರದರ್ಶನ ಕೊಡಬೇಕೆಂದರೆ ನಾಟ್ಯಮೇಳ ಬೇಕು, ವಾದ್ಯಮೇಳ

ಬೇಕು, ಪರಿಕರಗಳು ಬೇಕು— ಅವುಗಳನ್ನೆಲ್ಲಾ ಎಲ್ಲಿ ಹೊಂದಿಸಿಕೊಳ್ಳುವಿರಿ?"

"ಅವೆಲ್ಲಾ ತಮಗಿರಲಿ ಎಂದು ಜೀವಾನಂದಂ ಹೇಳಿದ್ದಾರೆ."

"ಈ ಪ್ರದರ್ಶನದ ಅಭಿಪ್ರಾಯ ನಿಮ್ಮ ತಲೆಯಲ್ಲಿ ಹಾಕಿದವರು ಜೀವಾನಂದಂ ಎಂದು ಕಾಣುತ್ತದೆ."

"ಅದರಲ್ಲಿ ತಪ್ಪೇನು?"

"ತಪ್ಪೇನೂ ಇಲ್ಲ. ನೀವೇನು ನಿರ್ಧರಿಸಿರುವಿರಿ?"

"ಯೋಚನೆ ಮಾಡುತ್ತಿದ್ದೇನೆ. ಯಾವ ನಿರ್ಧಾರಕ್ಕೂ ಬಂದಿಲ್ಲ."

"ನಾನು ಹೇಳಬೇಕಾದುದನ್ನು ಹೇಳಿದ್ದೇನೆ. ಇದರ ಮೇಲೆ ನಿಮ್ಮ ಚಿತ್ತ."

ಎಂದು ಆನಂದರಾಯರು ಹೇಳಿದರು.

ಕೀರ್ತಿಗೆ ರಾಯರ ಮಾತು ಕತೆ ಅಷ್ಟು ಪ್ರಿಯವಾಗಲಿಲ್ಲ. ಆದರವನು ತನ್ನ ಅಸಮಾಧಾನ ತೋರಿಸಿಕೊಳ್ಳಲಿಲ್ಲ.

ಮಾರನೆಯ ದಿನ ರಾಯರು ವಾಡಿಕೆಯಂತೆ ಕೀರ್ತಿಯ ಮನೆಗೆ ಬಂದರು. ಕೀರ್ತಿ ಕಾಣಲಿಲ್ಲ. ಕರುಣೆಯನ್ನು ಕಂಡು 'ಕೀರ್ತಿಯವರೆಲ್ಲಿ?' ಎಂದು ಕೇಳಿದರು. ಕರುಣೆ ಆಶ್ಚರ್ಯಚಕಿತಳಾಗಿ

"ಕೀರ್ತಿ ನಿಮಗೆ ಹೇಳಲಿಲ್ಲವೇ?" ಎಂದು ಕೇಳಿದಳು.

"ಯಾವ ವಿಷಯ?"

"ಇವತ್ತು ಊರಿಗೆ ಹೊರಡುವ ವಿಷಯ."

"ಯಾವ ಊರಿಗೆ?"

"ಓಹೋ! ನಿಮಗೊಂದೂ ಗೊತ್ತಿಲ್ಲ. ನಿನ್ನೆ ನಿಮ್ಮನ್ನು ರೂಮಿಗೆ ಕರೆದೊಯ್ದು ಬಹಳ ಹೊತ್ತು ಮಾತನಾಡುತ್ತಿದ್ದ."

"ಪ್ರದರ್ಶನದ ವಿಷಯ ಹೇಳಿದರು— ಸದ್ಯಕ್ಕೆ ಬೇಡವೆಂದೆ."

"ಅದನ್ನು ನಿಶ್ಚಯ ಮಾಡಿಕೊಂಡು ಬರುವುದಕ್ಕೆ ಇವತ್ತು ಬೆಳಿಗ್ಗೆ ಜೀವಾನಂದಂ ಜತೆ ಮದರಾಸಿಗೆ ಹೋದ."

"ಕಾರಿನಲ್ಲಿ ಹೋದರೇ?"

"ಹೌದು."

" ಸಂತೋಷ. "

" ನಿಮ್ಮ ಮುಖದಲ್ಲಿ ಸಂತೋಷ ಕಾಣುತ್ತಿಲ್ಲ ರಾಯರೇ. "

" ದೋರೆಗಾಯಿ ಹಣ್ಣಾಗಲಿ ಎಂದು ನಾನು ಕಾಯುತ್ತಿದ್ದೆ. ಜೀವಾನಂದಂ ದೋರೆಗಾಯಿಯೇ ರುಚಿ ಎಂದು ಭಾವಿಸಿರುವ ಹಾಗೆ ಕಾಣುತ್ತಾರೆ. "

" ಜೀವಾನಂದಂ ಕಲೆಯ ಬೆಲೆಯನ್ನರಿತವರು ರಾಯರೇ. "

" ಹೌದಮ್ಮ ಹೌದು – ಕಲೆಯ ಬೆಲೆಯನ್ನರಿತವರು. "

ಎಂದು ನುಡಿದು ರಾಯರು ಹೊರಟು ಬಿಟ್ಟರು.

ಕೀರ್ತಿಯ ಮರುಳು, ಕರುಣೆಯ ಮುಗ್ಧತೆ ಕಂಡು ಆನಂದರಾಯರಿಗೆ ಬೇಸರವಾಗಿತ್ತು. ಇವರ ಜೀವಾನಂದಂ ಎಬ್ಬಿಸುತ್ತಿದ್ದ ಬಿರುಗಾಳಿ ಕಂಡು ರಾಯರಿಗೆ ವಿಷಾದವಾಗಿತ್ತು. ಕೀರ್ತಿಗೆ ಜೀವಾನಂದಂ ಪರಿಚಯ ಮಾಡಿ ಕೊಟ್ಟುದು ನನ್ನ ತಪ್ಪು ' ಎಂದು ಮರುಗಿದರು.

ಮದರಾಸಿನ ಕೆಲಸ ಮುಗಿಸಿಕೊಂಡು ಒಂದು ವಾರದ ತರುವಾಯ ಕೀರ್ತಿ, ಜೀವಾನಂದಂ ಊರಿಗೆ ಹಿಂದಿರುಗಿದರು. ಕೀರ್ತಿ ತಾನಾಗಿಯೇ ರಾಯರಿಗೆ ಹೇಳಿಕಳಿಸುವ ಗೋಜಿಗೆ ಹೋಗಲಿಲ್ಲ; ರಾಯರು ಅವನನ್ನು ನೋಡಲು ಹೋಗಲಿಲ್ಲ.

ಎರಡು ವಾರ ಕಳೆದಿರಬಹುದು. ಒಂದು ದಿನ ಆನಂದರಾಯರನ್ನು ಕಾಣುವುದಕ್ಕೆಂದು ಜೀವಾನಂದಂ ಅವರ ಕಲಾಶಾಲೆಯ ಬಳಿಗೆ ಬಂದರು. ಮನೆಗೆ ಬಂದವರಿಗೆ ಅನಾದರ ತೋರಿಸುವುದು ಅಸಭ್ಯತನವೆಂದು ಭಾವಿಸಿದ್ದ ರಾಯರು ಜೀವಾನಂದಂ ಅವರನ್ನು ಒಳಗೆ ಕರೆದೊಯ್ದು ಕುಳ್ಳಿರಿಸಿ

" ಏನು ಇಷ್ಟು ದೂರ ದಯೆ ಮಾಡಿಸಿದಿರಲ್ಲಾ ? " ಎಂದು ಕೇಳಿದರು.

" ನಿಮ್ಮನ್ನು ನೋಡುವುದಕ್ಕೇ ಬಂದೆ ಆನಂದರಾಯರೇ. ಎರಡು ವಾರವಾದರೂ ನೀವು ಕೀರ್ತಿಯವರ ಮನೆಯ ಬಳಿ ಸುಳಿಯಬೇಡವೇ ? "

" ಅವರಿಗೆ ನನ್ನಿಂದೇಕೆ ತೊಂದರೆ. "

" ತೊಂದರೆ ಎಲ್ಲಿಂದ ಬಂತು. ನಾವು ಮದರಾಸಿಗೆ ಹೋಗಿದ್ದಾಗ ನೀವು ಬಂದಿದ್ದಿರೆಂದು ಕರುಣಾ ಹೇಳಿದಳು."

" ಹೌದು ಬಂದಿದ್ದೆ. ಹೋದ ಕೆಲಸವೇನಾಯಿತು ? "

" ಎಲ್ಲಾ ಸಾಂಗವಾಗಿ ಆಯಿತು – ಪ್ರದರ್ಶನಕ್ಕೆ ಬೇಕಾದ ವ್ಯವಸ್ಥೆ

ಯನ್ನೆಲ್ಲಾ ಮಾಡಿಕೊಂಡು ಬಂದದ್ದಾಯಿತು."

"ಪ್ರದರ್ಶನ ಮದರಾಸಿನಲ್ಲೋ ಬೆಂಗಳೂರಿನಲ್ಲೋ."

"ಇಲ್ಲೇ – ಬಿ. ಆರ್. ವಿ. ಥಿಯೇಟರಿನಲ್ಲಿ."

"ನಿಮ್ಮನ್ನು ಕಂಡು ಒಂದೆರಡು ಸ್ಪಷ್ಟವಾದ ಮಾತುಗಳನ್ನಾಡಬೇಕೆಂದು ನನ್ನ ಮನಸ್ಸಿನಲ್ಲಿತ್ತು – ನೀವು ಬಂದದ್ದು ಒಳ್ಳೆಯದೇ ಆಯಿತು."

"ಹೇಳಿ."

"ಪ್ರದರ್ಶನ ಕೊಡುವಷ್ಟು ಕೀರ್ತಿ ದಕ್ಷರಾಗಿದ್ದಾರೆಂದು ನಿಮ್ಮ ಅಭಿಪ್ರಾಯವೇ ?"

"ಪ್ರದರ್ಶನದಲ್ಲಿ ಕೀರ್ತಿಯವರದೇ ಸರ್ವಮಾನ್ಯವಿರುವುದಿಲ್ಲ. ಅಲರಿಪು, ಸ್ವರಜತಿ, ತಿಲಾನ, ಪದ ಅವರು ಮಾಡುತ್ತಾರೆ; ಉಳಿದ ಭಾಗ ಇತರರಿಗೆ ಹಂಚಲ್ಪಡುತ್ತದೆ."

"ಇಷ್ಟು ಅವಸರದಲ್ಲಿ ಕೀರ್ತಿಯವರು ಪ್ರದರ್ಶನ ಕೊಡಬೇಕಾದ ಅಗತ್ಯವೇನಿತ್ತು ?"

"ರಾಯರೇ, ನೀವು ಕೇವಲ ಆದರ್ಶಲೋಕದಲ್ಲಿ ವಿಹರಿಸುತ್ತಿದ್ದೀರಿ. ಇದು ನೈಸರ್ಗಿಕ ಪ್ರಪಂಚ. ಈ ಪ್ರಪಂಚದ ಜೀವಾಳವೇ ಪ್ರಚಾರ. (Publicity) ಪ್ರಚಾರದ ವ್ಯಾಪಕ ಶಕ್ತಿಯನ್ನರಿಯದೆ ನಮ್ಮ ದೇಶದ ಎಷ್ಟೋ ಮಂದಿ ಕಲಾವಿದರು ಹೇಳಹೆಸರಿಲ್ಲವಾಗಿದ್ದಾರೆ."

"ಪ್ರಚಾರ ಕಲಾ ಪ್ರಾವೀಣ್ಯವನ್ನು ದೊರಕಿಸಲಾರದು."

"ದೊರಕಿಸುತ್ತದೆಂದು ನಾನು ಹೇಳಿದೆನೇ ? ಕಲಾವಿದನಿಗೆ ಇದರಿಂದ ಆತ್ಮನಂಬಿಕೆ ಹುಟ್ಟುತ್ತದೆ."

"ಆತ್ಮನಂಬಿಕೆಗಿಂತಲೂ ಹೆಚ್ಚಾಗಿ ಅಹಂಕಾರ – ಅಲ್ಪತೃಪ್ತಿ ಹುಟ್ಟುವುದಿಲ್ಲವೇ ? ಸಾಧನೆಯಿಲ್ಲದೆ, ಶ್ರಮವಿಲ್ಲದೆ, ತ್ಯಾಗವಿಲ್ಲದೆ ಕಲೆ ಸಿದ್ಧಿಸುವುದೇ ?"

"ನೀವು ಕೃತಯುಗದ ಮಾತು ಹೇಳುತ್ತಿರುವಿರಿ. ಕಲಾವಿದನ ಪ್ರತಿಭೆ. ಎಲೆಯ ಮರೆಯ ಕಾಯಿಯಂತೆ ಇದ್ದು ಕೊಳೆಯಬೇಕೇಕೆ? ಅವನೂ ಇತರರಂತೆ ಏಕೆ ಸುಖವಾಗಿರಬಾರದು."

"ಸುಖದಿಂದ ಕಲೆ ಕೈಗೂಡುವುದಿಲ್ಲ ಜೀವಾನಂದಂ ಅವರೇ – ಕಲೆಗೂ ಕಣ್ಣೀರಿಗೂ ಗಂಟು."

" ನೀವು ಆಧುನಿಕ ಪ್ರಪಂಚದಿಂದ ಬಹಳ ದೂರ ಉಳಿದಿದ್ದೀರಿ. "

" ಹೋಗಲಿ – ನೀವು ಬಂದ ಕೆಲಸವೇನು ಹೇಳಿ. "

" ಮುಂದಿನ ತಿಂಗಳು ಮೊದಲನೆಯ ವಾರದಲ್ಲಿ ಕೀರ್ತಿಯವರ ಪ್ರದರ್ಶನ ಬಿ. ಆರ್. ವಿ. ಥಿಯೇಟರಿನಲ್ಲಿ ಏರ್ಪಡಿಸಲಾಗಿದೆ. ಅದಕ್ಕೆ ಈಗಿನಿಂದ ಪ್ರಚಾರವಾಗಬೇಕು. ಇಂಗ್ಲಿಷ್ ಪತ್ರಿಕೆಗಳ ವಿಷಯ ನಾನು ನೋಡಿ ಕೊಳ್ಳುತ್ತೇನೆ; ಕನ್ನಡ ಪತ್ರಿಕೆಗಳಲ್ಲಿ ಪ್ರಸಾರ ಕಾರ್ಯ ನೀವು ಕೈಗೊಳ್ಳಬೇಕು. ಅದಕ್ಕೆ ಬೇಕಾದ ಲೇಖನಗಳನ್ನು ನಾನು ಇಂಗ್ಲಿಷಿನಲ್ಲಿ ಬರೆದುಕೊಡುತ್ತೇನೆ. ಅನುವಾದ ಮಾಡಿ ಪ್ರಕಟಿಸುವ ಹೊಣೆ ನೀವು ಹೊರಬೇಕಾಗುತ್ತದೆ. "

ರಾಯರ ಮನಸ್ಸು ಯೋಚನೆಗೀಡಾಯಿತು. ತಾವೀಗ ದೂರ ಸರಿದರೆ ಕೀರ್ತಿ ಸಂಪೂರ್ಣವಾಗಿ ಜೀವಾನಂದಂ ಕೈಗೆ ಸಿಕ್ಕುತ್ತಾನೆ – ಜೀವಾನಂದಂ ಅವನನ್ನು ಎಲ್ಲಿಗೆ ಎಳೆದೊಯ್ಯುವನೋ ಬಲ್ಲವರು ಯಾರು – ಒಪ್ಪಿಕೊಂಡರೆ ಜೀವಾನಂದಂ ಹೂಡಿರುವ ಕಪಟ ನಾಟಕದಲ್ಲಿ ಭಾಗ ವಹಿಸಬೇಕಾಗುತ್ತದೆ. ' ಏನು ಮಾಡುವುದು ' ಎಂದು ರಾಯರು ಚಿಂತಿಸಿದರು.

' ಕೀರ್ತಿಗಾಗಿ – ಗತಿಸಿದ ಅವನ ತಂದೆಯ ದಿವ್ಯಸ್ಮೃತಿಗಾಗಿ - ಕೀರ್ತಿಯಲ್ಲಿ ಹುದುಗಿದ್ದ ಕಲಾಪ್ರತಿಭೆಗಾಗಿ ' ತಾತ್ಕಾಲಿಕವಾಗಿ ಸೋಲನ್ನು ಒಪ್ಪಿಕೊಳ್ಳುವುದೇ ನ್ಯಾಯವೆಂದು ಆನಂದರಾಯರು ನಿರ್ಧರಿಸಿ

" ಆಗಲಿ ಜೀವಾನಂದಂ ಅವರೇ, ನನ್ನ ಕೈಯಲ್ಲಾದುದನ್ನು ಮಾಡಲು ಸಿದ್ಧನಿದ್ದೇನೆ " ಎಂದರು.

" ನಾಳೆ ಕೀರ್ತಿಯವರ ಮನೆಗೆ ಬಂದರೆ ಪ್ರಚಾರ ಸಾಹಿತ್ಯ, ಫೋಟೊಗಳು, ಬ್ಲಾಕುಗಳನ್ನು ಕೊಡುತ್ತೇನೆ. "

' ಆಗಬಹುದು ' ಎಂದು ರಾಯರು ಒಪ್ಪಿಕೊಂಡರು. ಆದರೆ ಅವರ ಒಪ್ಪಿಗೆಯಲ್ಲಿ ಖೈದಿ ಶಿಕ್ಷೆಯನ್ನೊಪ್ಪಿಕೊಳ್ಳುವ ಧ್ವನಿ ಅಡಕವಾಗಿತ್ತು.

## ೧೦

ಜೀವಾನಂದಂ ಅವರ ಪ್ರಭಾವದಿಂದ ಕೀರ್ತಿಯ ಹೆಸರು ಬೀದಿ ಬೀದಿಗಳಲ್ಲಿ, ಸಂದು ಸಂದಿಗಳಲ್ಲಿ ಪ್ರಸಾರವಾಯಿತು. ಪ್ರತಿಯೊಂದು ಸಿನಿಮಾ ಮಂದಿರದಲ್ಲಿಯೂ ಕೀರ್ತಿಯ ಭಾವಚಿತ್ರವನ್ನೊಳಗೊಂಡ ಸ್ಲೇಡು; ಪ್ರಧಾನ ಕೂಟಗಳಲ್ಲಿ ಕೀರ್ತಿಯ ಸಿಲುವಾಕೃತಿಯ ಚಿತ್ರ; ಪತ್ರಿಕೆಗಳಲ್ಲಿ ದೊಡ್ಡ ದೊಡ್ಡ ಜಾಹೀರಾತುಗಳು, ಚಿತ್ರಗಳು, ಲೇಖನಗಳು, ಪ್ರಚಾರದ ಪರಿಣಾಮವಾಗಿ ಕೀರ್ತಿ – 'ಭಾರತದ ನಿಜಿನ್ಸ್ಕಿ'– 'ಭಾರತದ ನಾಟ್ಯ ರಾಯಭಾರಿ'– 'ಅಭಿನವ ನೃತ್ಯ ಸರಸ್ವತಿ' ಯಾಗಿದ್ದ.

ಶನಿವಾರ, ಭಾನುವಾರ ಎರಡು ದಿನಗಳೂ ಬಿ. ಆರ್. ವಿ. ಥಿಯೇಟರಿನಲ್ಲಿ ಕೀರ್ತಿಯ ಪ್ರದರ್ಶನ. ಪ್ರದರ್ಶನದ ತೇದಿಗಳಿಗಿಂತ ಎಷ್ಟೋ ಮೊದಲೇ ಟಿಕೆಟ್ಟುಗಳು ಖರ್ಚಾಗಿದ್ದವು. ಅರ್ಧ ಮುಕ್ಕಾಲು ಟಿಕೆಟ್ಟುಗಳನ್ನು ಕೊಂಡಿದ್ದವರು ಮಿಲ್ಟ್ರಿಯವರು.

ಇಂಗ್ಲಿಷ್ ಪತ್ರಿಕೆಗಳಲ್ಲಿ ಜೀವಾನಂದಂ, ಕನ್ನಡ ಪತ್ರಿಕೆಗಳಲ್ಲಿ ಆನಂದರಾಯರು ಪ್ರಸಾರ ಕೆಲಸ ನಿರ್ವಹಿಸಿದ್ದರು.

ನಾಟ್ಯ ಪ್ರದರ್ಶನದ ದಿನಗಳಲ್ಲಿ ಮಾರಾಟಕ್ಕೆಂದು, ಕೀರ್ತಿಯ, ಅವನ ಸಂಗಡಿಗರ ಅನೇಕ ಚಿತ್ರಗಳನ್ನೊಳಗೊಂಡ ಸೊಗಸಾದ ಕಿರುಹೊತ್ತಗೆಯನ್ನು ಜೀವಾನಂದಂ ಮದರಾಸಿನಲ್ಲಿಯೇ ಅಚ್ಚು ಹಾಕಿಸಿ ತಂದಿದ್ದರು. ಆ ಹೊತ್ತಗೆಯಲ್ಲಿ ಜೀವಾನಂದಂ ಕೀರ್ತಿಯ ಪರಿಚಯ ಮಾಡಿಕೊಡುತ್ತಾ 'ಸುಪ್ರಸಿದ್ಧ ನಾಟ್ಯಾಚಾರ್ಯ ಮೀನಾಕ್ಷಿಸುಂದರಂ ಪಿಳ್ಳೆಯವರ ಪರಮ ಶಿಷ್ಯರಾದ ಕೀರ್ತಿಯವರು' ಎಂದು ಸಂಬೋಧಿಸಿದ್ದರು. ಆ ಪಂಕ್ತಿ ನೋಡಿ ಆನಂದರಾಯರ ಮನಸ್ಸಿಗೆ ಅಸಹನೀಯ ವೇದನೆಯಾಯಿತು.

ಪ್ರದರ್ಶನಗಳಿಗೆ ಊರಿನ ಹಲವು ಗಣ್ಯ ಮಹನೀಯರಿಗೂ, ಪತ್ರಿಕಾಕರ್ತರಿಗೂ, ಸರ್ಕಾರಿ ಅಧಿಕಾರಿಗಳಿಗೂ ಆಹ್ವಾನಗಳು ಹೋಗಿದ್ದವು.

ಆದರೆ ಕೀರ್ತಿಗಾಗಲಿ, ಜೀವಾನಂದಂ ಅವರಿಗಾಗಲಿ ರಾಮಸ್ವಾಮಪ್ಪ, ಜಯಮ್ಮನ ನೆನಪು ಬರಲಿಲ್ಲ.

ಪ್ರದರ್ಶನಗಳಲ್ಲಿ ಕೀರ್ತಿಯ ಅಲರಿಪ, ಸ್ವರಜತಿ, ತಿಲಾನ, ಪದಗಳಲ್ಲದೆ

‘ ಯೋಧ ’ ನೃತ್ಯವೂ ಕೂಡಿಸಲಾಗಿತ್ತು. ಅವುಗಳ ಮಧ್ಯೆ ಮದರಾಸಿನ ಭಾಗ್ಯಲಕ್ಷ್ಮಿಯ ‘ ಸಾರಿಗಾಕೊಂಗು ’, ಸೊಹಾನಿ ಸೋದರಿಯರ ಮಣಿಪೂರಿ ನೃತ್ಯ, ವಿದ್ವಾನ್ ಗೋಪಾಲ್ ಅವರ ತನಿವೇಣು ವಾದನವೂ ಜೋಡಿಸ ಲಾಗಿತ್ತು.

ಎರಡು ದಿನಗಳೂ ಪ್ರದರ್ಶನ ಯಶಸ್ವಿಯಾಗಿಯೇ ನಡೆಯಿತು. ತಮ್ಮ ನಿರೀಕ್ಷೆಗೂ ಮಿಕ್ಕು ಪ್ರದರ್ಶನಗಳು ಚೆನ್ನಾದುವಕ್ಕೆ ಜೀವಾನಂದಂ ಸಂತೋಷ ಪಟ್ಟಿದ್ದರು.

ಕೀರ್ತಿಗಂತೂ ಸ್ವರ್ಗ ಒಂದೇ ಗೇಣು ದೂರದಲ್ಲಿ ಉಳಿಯಿತು. ಮಾರ ನೆಯ ದಿನದ ಪತ್ರಿಕೆಗಳಲ್ಲಿ ಬಂದ ಸ್ತುತಿ ಕಂಡ ಮೇಲಂತೂ ಕೀರ್ತಿ ತ್ರಿವಿಕ್ರ ಮಾವತಾರ ತಾಳಿ ಬಿಟ್ಟ. ಪತ್ರಿಕೆಗಳು ಅವನನ್ನು ಉದಯಶಂಕರನಿಗೆ ಹೋಲಿಸುತ್ತ ‘ ಉದಯಶಂಕರರ ನೃತ್ಯದಲ್ಲಿ ಲಯವಿನ್ಯಾಸವಿಲ್ಲ. ತಲೆಯಿಂದ ಕಟಿಯ ವರೆಗೂ ಉದಯಶಂಕರ್ ಅಭಿನಯಿಸಬಲ್ಲರು. ದೇಹದ ಸಮಸ್ತ ಅಂಗಗಳನ್ನೂ ನೃತ್ಯಕ್ಕೆ ಅಳವಡಿಸಿಕೊಳ್ಳುವ ಶಕ್ತಿಯುಳ್ಳವರೆಂದರೆ ಕೀರ್ತಿ. ಇಂಥ ಪ್ರತಿಭಾಶಾಲಿ ಕಲಾವಿದ ಭಾರತದಲ್ಲಿ ಇನ್ನಿದುವರೆಗೆ ಹುಟ್ಟಿರಲಿಲ್ಲ. ಕೀರ್ತಿಯವರು ವಿದೇಶಗಳಲ್ಲಿ ಪ್ರವಾಸ ಮಾಡಿ ಭಾರತ ನಾಟ್ಯಕಲೆಯ ವೈಭವ ವನ್ನು ಸಾರಬೇಕೆಂದು ನಾವು ಸೂಚಿಸಲಿಚ್ಛಿಸುತ್ತೇವೆ ’ ಎಂದು ಬರೆದಿದ್ದವು. ಅವರ ಮಾತು ಅಕ್ಷರಶಃ ಸತ್ಯವೆಂದು ಕೀರ್ತಿ ನಂಬಿಕೊಂಡ.

ಕೀರ್ತಿಯ ನೃತ್ಯ ನೋಡಿ ಅಸಂತುಷ್ಟಿಗೊಂಡಿದ್ದವರು ಆನಂದರಾಯ ರೊಬ್ಬರೇ. ಲೋಕವೇ ಕೀರ್ತಿಯನ್ನು ಹೊಗಳುತ್ತಿದ್ದಾಗ ತಾವು ಅಪಶ್ರುತಿ ಯನ್ನೆತ್ತುವುದರಲ್ಲಿ ಅರ್ಥವಿಲ್ಲವೆಂದುಕೊಂಡು ಅವರೂ ಬಾಯಿ ಬಿಗಿದು ಕೊಂಡರು.

ಕೀರ್ತಿ – ಜೀವಾನಂದಂ ಶಾಶ್ವತ ಸಂಸ್ಥೆ ಸ್ಥಾಪಿಸುವುದರಲ್ಲಿ ಉತ್ಸುಕ ರಾದರು. ಭರತನಾಟ್ಯ ಕಲಿಸುತ್ತಿದ್ದ ಕುಂಜುಮಣಿಯ ಜತೆಗೆ ಕಥಾಕಳಿ ಕಲಿಸಲು ಮಲಬಾರಿನ ರಾಮನ್ ನಂಬೂದ್ರಿಯವರೂ ಬಂದು ಸೇರಿ ಕೊಂಡರು. ಮಣಿಪೂರಿ ಕಲಿಸುವುದಕ್ಕೆ ಬಂಗಾಳದಿಂದ ಸುಧೇಂದು ಸಿನ್ಹ ರನ್ನೂ ಕರೆಸಲಾಯಿತು. ಕೀರ್ತಿಯ ಮನೆ ನೃತ್ಯಕಲಾಶಾಲೆಯಾಯಿತು.

ಸಂಗೀತಗಾರರು, ವಾದ್ಯಗಾರರು, ನರ್ತಕರು, ಅಭಿಮಾನಿಗಳು ಸದಾ ತುಂಬಿ ರುತ್ತಿದ್ದರು.

ಕೀರ್ತಿಯ ಕಲಾನೈಪುಣ್ಯಕ್ಕೆ ಹೆಚ್ಚು ಬೆರಗಾಗಿದ್ದವರು ಮಿಲ್ಟ್ರಿಯ ಅಧಿ ಕಾರಿಗಳು. ಮಿಲ್ಟ್ರಿಯ ಬ್ರಿಗೇಡಿಯರ್‌ಗಳೂ, ಕ್ಯಾಪ್ಟನ್‌ಗಳೂ ಕೀರ್ತಿಯ ಮನೆಯಲ್ಲಿ ವಿರಾಜಿಸತೊಡಗಿದರು. ಸಂಜೆಯಾಗುವುದೇ ತಡ – ನಾಲ್ಕಾರು ಜೀಪಕಾರುಗಳು ಕೀರ್ತಿಯ ಮನೆಯ ಕಾಂಪೌಂಡಿಗೆ ಬಂದು ನಿಲ್ಲುತ್ತಿದ್ದವು. ಕ್ಯಾಪ್ಟನ್ ಸೋಹನ್‌ಸಿಂಗ್, ಕ್ಯಾಪ್ಟನ್ ನಿಸ್ಸಾರ್, ಕ್ಯಾಪ್ಟನ್ ವಿಜಯ ಕೆಲವೇ ದಿನಗಳಲ್ಲಿ ಕೀರ್ತಿಯ 'ಗಳಸ್ಯ ಕಂಠಸ್ಯ' ಆದರು.

ಕೀರ್ತಿಯ ಜೀವನದಲ್ಲಿ ವಿಶೇಷ ಮಾರ್ಪಾಟು ತಲೆದೋರಿತು. ಪ್ರದರ್ಶ ನಗಳು ದೊರಕಿಸಿಕೊಟ್ಟ ಖ್ಯಾತಿ, ಅಹಂಕಾರ ರೂಪ ತಳೆದಿತ್ತು. ಹಗುರವಾದ ಕೀರ್ತಿಯ ಬಾಯಲ್ಲಿ ಧಾರಾಳವಾಗಿ ಹೊಲಸು ಶಬ್ದಗಳು ಬರುತ್ತಿದ್ದವು. ತನಗೆ ಬೇಡಾದವರನ್ನು ಅವನು ಬಾಸ್ಟರ್ಡ್ ( Bastard ), ಬಿಚ್ (Bitch) ಎಂದು ಸಂಬೋಧಿಸುವ ಪರಿಪಾಠ ಬೆಳಿಸಿಕೊಂಡ. ಸಂಜೆಗೆ ಬರುತ್ತಿದ್ದ ಮಿಲ್ಟ್ರಿ ಕಲಾಭಿಮಾನಿಗಳು ತಮ್ಮ ಆರಾಧ್ಯ ದೇವತೆಗೆ ಅರ್ಪಿಸಲು ತೀರ್ಥ ಕುಂಡಗಳನ್ನು ಹಿಡಿದೇ ಬರುತ್ತಿದ್ದರು. ಆರಾಧ್ಯ ದೇವತೆ ಭಕ್ತ ಕೋಟಿಗೆ ಅಸಮಾಧಾನವಾಗದಂತೆ ತೀರ್ಥ ಸ್ವೀಕಾರ ಮಾಡಲಾರಂಭಿಸಿತು.

ಜೀವಾನಂದಂ ಕೀರ್ತಿಯನ್ನೂ ಅವನ ಪರಿವಾರವನ್ನೂ ಕರೆದುಕೊಂಡು ಅಖಿಲ ಭಾರತ ಪ್ರವಾಸ ಮಾಡುವ ಹಂಚಿಕೆ ಹೂಡಿದರು. ಕೀರ್ತಿಯ ಸಹ ನಟಿಯಾಗಿ ಮದರಾಸಿನ ಭಾಗ್ಯಲಕ್ಷ್ಮಿಯನ್ನೇ ಗೊತ್ತು ಮಾಡಲಾಯಿತು. 'ರಾಸಕ್ರೀಡೆ' ನೃತ್ಯದಲ್ಲಿ ಸೊಹಾನಿ ಸೋದರಿಯರು ಸಹನಟಿಯರಾಗಿರತಕ್ಕ ದ್ದೆಂದು ನಿರ್ಣಯ ಮಾಡಲಾಯಿತು.

ಪೂರ್ವ ವ್ಯವಸ್ಥೆಯೆಲ್ಲಾ ಆದ ಮೇಲೆ ಕೀರ್ತಿ, ಕೀರ್ತಿಯ ಮಂಡಳಿ ಜೀವಾನಂದಂ ಜತೆಯಲ್ಲಿ ಪ್ರವಾಸ ಹೊರಟರು. ಹೈದರಾಬಾದ್, ಮುಂಬಯಿ, ನಾಗಪುರ, ದೆಹಲಿ, ಕಾಶಿ, ಕಲ್ಕತ್ತಾ ನಗರಗಳಲ್ಲಿ ಪ್ರದರ್ಶನಗಳನ್ನಿತ್ತು ಸಾಕಷ್ಟು ಪ್ರಶಸ್ತಿಯನ್ನು ಗಳಿಸಿಕೊಂಡರು. ಆವರೆ ಮದರಾಸು ಅವರ ಮೇಲೆ ಸಿಡಿದೆದ್ದು ನಿಂತಿತು. ಮದ್ರಾಸಿನ ಇಂಗ್ಲಿಷ್, ತಮಿಳು ಪತ್ರಿಕೆಗಳು ಪ್ರದರ್ಶನಗಳನ್ನು ಕಟುವಾಗಿ ಟೀಕಿಸಿದವು. ಕೀರ್ತಿಯವರ 'ಓರಿಯೆಂಟಲ್

ಡ್ಯಾನ್ಸಿಸ್' 'ಭಾರತೀಯ ನೃತ್ಯ ಸಂಪ್ರದಾಯಗಳ ಅಣಕ' ವೆಂದು ಕರೆದರು. ಉದಯಶಂಕರ್, ಮೇನಕಾ, ರುಕ್ಮಿಣಿಯವರು ಹಾಕಿ ಕೊಟ್ಟಿರುವ ಉತ್ತಮ ಮೇಲ್ಪಂಕ್ತಿಯನ್ನು ಕೀರ್ತಿ ಅಳಿಸಲು ಹೊರಟಿದ್ದಾರೆಂದು 'ಆನಂದ ವಿಗಡನ್' ಸಾರಿತು. 'ಕಲ್ಕಿ' ಯ ವಿಮರ್ಶಕರು 'ಕೀರ್ತಿಯವರ ಪ್ರದರ್ಶನ ಭಾರತಕ್ಕೆ, ಭಾರತದ ಲಲಿತ ಕಲೆಗಳಿಗೆ ಶುದ್ಧ ಅಪಕೀರ್ತಿ' ಎಂದು ಟೀಕಿಸಿತು. 'ಕಲೈಮಗಳ್' ಪತ್ರಿಕೆ ಕೀರ್ತಿಯ ಪ್ರದರ್ಶನದ ಒಂದೊಂದು ಭಾಗವನ್ನೂ ಎತ್ತಿಕೊಂಡು ಶಾಸ್ತ್ರೀಯವಾಗಿ ವಿಮರ್ಶಿಸಿ, ಕೀರ್ತಿಯ ಉದ್ಧಟತನವನ್ನು ಖಂಡಿಸಿತು.

ಮದರಾಸು ಅವಿಶ್ವಾಸ ತೋರಿಸಿದರೂ ಒಟ್ಟಿನಲ್ಲಿ ಪ್ರವಾಸ ಯಶಸ್ವಿಯಾಗಿಯೇ ಕೊನೆಗಂಡಿತು. ಸಾಮಾನ್ಯ ಜನ ಕೀರ್ತಿಯನ್ನು ಭಾರತದ 'ಅಮರ ಕಲಾವಿದರ' ಗುಂಪಿಗೆ ಸೇರಿಸಿತ್ತು. ಸಂಪಾದನೆಯೂ ಚೆನ್ನಾಗಿ ಆಗಿತ್ತು.

ಕೀರ್ತಿಯ ತಲೆ ಗೌರಿಶಂಕರದೊಂದಿಗೆ ಸ್ಪರ್ಧೆಗೆ ನಿಂತಿತು. ಅವನಿಗೆ ಪುಟ ಹಾಕಲು ಮಿಲ್ಟ್ರಿ ಗೆಳೆಯರು ಮತ್ತು ಅವನ ಮಿತ್ರವೃಂದ.

ಒಂದು ದಿನ ಜೀವಾನಂದಂ ಕೀರ್ತಿಯೊಬ್ಬನನ್ನೇ ಮಹಡಿಯ ಮೇಲೆ ಕರೆದೊಯ್ದು ಅವನ ಕೈಗೆ ಅಚ್ಚಾದ ಒಂದು ಹೊತ್ತಗೆಯನ್ನಿತ್ತರು. ಕೀರ್ತಿ ಓದಿಕೊಂಡ ಮೇಲೆ

"ಏನು ಹೇಳುವಿರಿ?" ಎಂದರು.

"ವಿಯನ್ನಾ ಎಲ್ಲಿ, ನಾವೆಲ್ಲಿ ಜೀವಾನಂದಂ ಅವರೇ!"

"ಒಂದು ಜೀವಮಾನದಲ್ಲಿ ಇಂಥ ಅವಕಾಶ ಒಂದೋ ಎರಡೋ ಸಿಕ್ಕುತ್ತದೆ ಕೀರ್ತಿ – ಕಳೆದುಕೊಳ್ಳಬಾರದು."

"ಮಂಡಳಿಯೊಂದಿಗೆ ನಾನು ವಿಯನ್ನಾಗೆ ಹೋಗಿ ಬರುವುದೆಂದರೆ ಖರ್ಚು ಎಷ್ಟಾಗುತ್ತದೆ ಜೀವಾನಂದಂ."

"ಒಂದು ಲಕ್ಷ ರೂಪಾಯಿ ಆಗುತ್ತದೆಂದು ಇಟ್ಟುಕೊಳ್ಳೋಣ."

"ಅಷ್ಟು ಹಣ ನಾನೆಲ್ಲಿಂದ ತರಲಿ."

"ಮೊನ್ನೆ ಪ್ರವಾಸದಿಂದ ಸ್ವಲ್ಪ ಹಣ ಬಂತಲ್ಲ;"

" ಅದು ಇಲ್ಲಿಯ ವರೆಗೆ ಉಳಿದಿರುತ್ತದೆಯೇ ? "

" ಲಕ್ಷ ರೂಪಾಯಿ ನೀವು ಕೈಯಿಂದ ಖರ್ಚು ಮಾಡಬೇಕಾಗಿಲ್ಲ ಕೀರ್ತಿಯವರೇ. ಒಮ್ಮೆ ಇಂಟರ್‌ನ್ಯಾಷನಲ್ ಡಾನ್ಸ್ ಫೆಸ್ಟಿವಲ್‌ನಲ್ಲಿ (International Dance Festival) ಭಾಗ ವಹಿಸಿದರೆ ಸಾಕು. ಲಂಡನ್, ಪ್ಯಾರಿಸ್, ಬರ್ಲಿನ್, ನ್ಯೂಯಾರ್ಕ್, ಮಾಸ್ಕೋಗಳಿಂದ ಆಹ್ವಾನಗಳು ಬಂದೇ ಬರುತ್ತವೆ. ಹಾಕಿರುವ ಹಣ ಹಿಂದಕ್ಕೆ ಬರುವುದಲ್ಲದೆ ವಿಶೇಷ ಲಾಭವೂ ಬರುತ್ತದೆ. "

" ಅದು ಸರಿ. ಈಗ ಲಕ್ಷ ರೂಪಾಯಿ ಹೊಂದಿಸುವುದು ಹೇಗೆ ? "

" ಫೆಸ್ಟಿವಲ್‌ಗೆ ಹೋಗುವ ವಿಷಯ ನೀವು ನಿರ್ಧರಿಸಿ – ಹಣದ ವ್ಯವಸ್ಥೆ ನಾನು ಮಾಡುತ್ತೇನೆ. "

" ಸಾಲ ಕೊಡಿಸುವಿರಾ ? "

" ನನ್ನ ಸ್ನೇಹಿತ್ ಕೈಯಲ್ಲಿ ಕೊಡಿಸುತ್ತೇನೆ. "

" ಆಗಲಿ – ಯೋಚನೆ ಮಾಡಿ ತಿಳಿಸುತ್ತೇನೆ. "

ಎಂದು ಕೀರ್ತಿ ಉತ್ತರ ಹೇಳಿದ. ' ಹೋಗಲೇ ಬೇಡವೇ ' ಎಂದು ಕೀರ್ತಿಯ ಮನಸ್ಸು ನಾಲ್ಕಾರು ದಿವಸ ಉಯ್ಯಾಲಾಡಿತು. ವಿಲಾಯತಿಯೆಲ್ಲಾ ಪ್ರವಾಸ ಮಾಡಿ ಬಂದಿರುವವನು ಉದಯಶಂಕರ್ ಒಬ್ಬನೇ – ವಿಲಾಯತಿಯಲ್ಲಿ ನಾನು ಪ್ರದರ್ಶನ ಮಾಡಿದ ಹೊರತೂ ನನ್ನ ಕಲೆಗೆ ಬೆಲೆ ಬರುವುದಿಲ್ಲ. ಒಮ್ಮೆ ವಿಯನ್ನಾ ಉತ್ಸವದಲ್ಲಿ ಹೆಸರು ಬಂದಿತೆಂದರೆ ವಿಶ್ವಖ್ಯಾತಿ ಕೈಗೂಡಿದಂತೆ – ಅದರ ಜತೆಯಲ್ಲಿ ಹಣ – ಕೀರ್ತಿ !

ಕೀರ್ತಿಯೇನು ಹೇಳಬಹುದೆಂಬುದನ್ನು ಮೊದಲೇ ನಿರೀಕ್ಷಿಸಿದ್ದ ಜೀವಾನಂದಂ ಪ್ರವಾಸ ಸಿದ್ಧತೆ ಮಾಡತೊಡಗಿದ್ದರು. ವಿಸಾ ( Visa ) ಗಳಿಗೆ ಬರೆದುದೂ ಆಗಿತ್ತು – ವಿಯನ್ನಾ ಫೆಸ್ಟಿವಲ್ ಕಮಿಟಿಯವರಿಗೆ ಪತ್ರ ಹಾಕಿದುದೂ ಆಗಿತ್ತು. ಜತೆಯಲ್ಲಿ ಯಾರು ಯಾರನ್ನು ಕರೆದುಕೊಂಡು ಹೋಗಬೇಕೆನ್ನುವುದನ್ನೂ ಜೀವಾನಂದಂ ಲೆಕ್ಕ ಹಾಕಿದ್ದರು.

ಕೀರ್ತಿ ಒಪ್ಪಿಗೆ ಕೊಡುವುದಕ್ಕೆ ತಡವಾಗಲಿಲ್ಲ. ಜೀವಾನಂದಂ ಇಂಗ್ಲಿಷ್ ಸ್ನೇಹಿತ, ಕೀರ್ತಿಯ ಸಮಸ್ತ ಆಸ್ತಿಯ ಆಧಾರದ ಮೇಲೆ ಒಂದು ಲಕ್ಷ ರೂಪಾಯಿ ಸಾಲ ಕೊಡಲು ಒಪ್ಪಿಕೊಂಡ.

ಪ್ರವಾಸಕ್ಕೆ ಬೇಕಾದ ಬಟ್ಟೆಬರೆಗಳು, ನೃತ್ಯಪರಿಕರಗಳನ್ನು ಹೊಂದಿಸಿಕೊಳ್ಳಲಾಯಿತು. ಕೀರ್ತಿ, ಜೀವಾನಂದಂ, ಭಾಗ್ಯಲಕ್ಷ್ಮಿ, ಸೊಹಾನಿಸೋದರಿಯರು, ಕುಂಜಮಣಿ, ರಾಮನ್, ನಂಬೂದ್ರಿ, ಸುಧೇಂದು ಸಿನ್ಹ, ಕರುಣಾ, ಡಿಕ್ಷಿ, ರಘುವೀರ, ಗೋಪಾಲ್, ಚಕ್ರಪಾಣಿ, ರಾಮನಾಥನ್, ಜಲಜಾಕ್ಷಿ ಹೊರಡತಕ್ಕದೆಂದು ನಿಶ್ಚಯಿಸಲಾಯಿತು.

ಹದಿನೈದು ದಿನ ಒಂದೇ ಸಮನಾಗಿ ಕೀರ್ತಿಗೂ ಅವನ ಮಂಡಳಿಗೂ ಸತ್ಕಾರಕೂಟಗಳಾದವು. ಪ್ರಯಾಣದ ದಿನ ರೈಲಿನ ಬಳಿ ಪತ್ರಿಕಾ ಪ್ರತಿನಿಧಿಗಳು ಕೀರ್ತಿಯನ್ನು ಸಂದರ್ಶಿಸುವಂತೆ ಜೀವಾನಂದಂ ವ್ಯವಸ್ಥೆ ಮಾಡಿದರು.

ಕೀರ್ತಿಯನ್ನೂ ಅವನ ಮಂಡಳಿಯನ್ನೂ ಬೀಳ್ಕೊಡಲು ಊರಿಗೆಊರೇ ರೈಲ್ವೆ ನಿಲ್ದಾಣದಲ್ಲಿ ನೆರೆಯಿತು. ಹತ್ತಾರು ಪತ್ರಿಕಾಪ್ರತಿನಿಧಿಗಳು 'ಕ್ಯಾಮೆರಾ' ಸಮೇತ ಹಾಜರಾಗಿದ್ದರು. ಕೀರ್ತಿಯ ಕೊರಳಿಗೆ ಮಾಲೆಗಳಮೇಲೆ ಮಾಲೆಗಳು ಬಿದ್ದವು.

ಪತ್ರಿಕಾ ಪ್ರತಿನಿಧಿಗಳು ಕೀರ್ತಿಯನ್ನು ಸುತ್ತುಗಟ್ಟಿ ಪ್ರಶ್ನೆ ಕೇಳಿದರು.

" ವಿಯನ್ನಾದಲ್ಲಿ ಎಷ್ಟು ಪ್ರದರ್ಶನಗಳನ್ನು ಕೊಡುವಿರಿ. "

" ನಾಟ್ಯೋತ್ಸವದಲ್ಲಿ ಪ್ರದರ್ಶನ ಕೊಡುತ್ತೇನೆ. ಅನಂತರ ಊರಿನಲ್ಲಿ ಪ್ರದರ್ಶನ ಕೊಡುತ್ತೇನೆ. "

" ಅಲ್ಲಿಂದ ಮುಂದೆ ಎಲ್ಲಿಗೆ ಹೋಗುವಿರಿ ? "

" ಇಡಿಯ ಪಾಶ್ಚಾತ್ಯ ಪ್ರಪಂಚವನ್ನೇ ಸುತ್ತಾಡಿಕೊಂಡು ಬರುತ್ತೇನೆ. "

" ನಿಮ್ಮ ಪ್ರವಾಸದ ಉದ್ದೇಶವೇನು ? "

" ಭಾರತೀಯ ನಾಟ್ಯಕಲೆಯ ವೈಶಿಷ್ಟ್ಯ, ವೈಭವವೆಂತಹುದೆಂಬುದನ್ನು ವಿಶ್ವಕ್ಕೆ ತೋರಿಸುವುದೇ ನನ್ನ ಉದ್ದೇಶ. ನನ್ನ ನಾಡಿನ ಮಹಾಕಾವ್ಯಗಳ ದೇವರುಗಳ ಸಹಜ ಕಲ್ಪನೆಯನ್ನು ಪಾಶ್ಚಾತ್ಯರ ಮನಸ್ಸಿನ ಮೇಲೆ ಮೂಡಿ ಅವರು ಭಾರತವನ್ನು ಗೌರವಿಸುವಂತೆ ಮಾಡಬೇಕೆನ್ನುವುದೇ ನನ್ನ ಉದ್ದೇಶ. "

ಪತ್ರಿಕಾ ಪ್ರತಿನಿಧಿಗಳು ಕೀರ್ತಿಯ ಮತ್ತು ಅವನ ಮಂಡಳಿಯ ಚಿತ್ರಗಳನ್ನು ತೆಗೆದುಕೊಂಡರು.

ಎಲ್ಲರೂ ಕೀರ್ತಿಗೆ ಜಯ ಕೋರಿ ಘೋಷ ಮಾಡಿದರು.

ಮಾರನೆಯ ದಿನ ಪತ್ರಿಕೆಗಳಲ್ಲೆಲ್ಲಾ 'ಭಾರತದ ಸಾಂಸ್ಕೃತಿಕ ರಾಯಭಾರಿ ಕೀರ್ತಿಯವರ ಜೈತ್ರಯಾತ್ರೆ' ಯನ್ನು ಕುರಿತು ಸಚಿತ್ರ ಲೇಖನಗಳು ಪ್ರಕಟವಾದವು.

## ೧೧

ಪ್ರವಾಸ ಕಾಲದಲ್ಲಿ ಕಲಾವಿದೆಯರ ಯೋಗಕ್ಷೇಮವನ್ನು ಕರುಣಾ ನೋಡಿಕೊಳ್ಳುವುದೆಂದೂ, ಕಲಾವಿದರ ಯೋಗಕ್ಷೇಮವನ್ನು ಜೀವಾನಂದಂ ನೋಡಿಕೊಳ್ಳುವುದೆಂದೂ ನಿಶ್ಚಯಿಸಲಾಗಿತ್ತು. ಹಣ ಕಾಸಿನ ಸಮಸ್ತ ವ್ಯವಹಾರ ಸಂಪೂರ್ಣವಾಗಿ ಜೀವಾನಂದಂ ಅವರಿಗೇ ವಹಿಸಲಾಗಿತ್ತು.

ವಿಯನ್ನಾ ತಲಪುವ ವರೆಗೆ ಯಾರಿಗೂ ಪ್ರಯಾಸವಾಗಲಿಲ್ಲ. ಜೀವಾನಂದಂ, ಕರುಣಾ ಇಬ್ಬರೂ ಮಂಡಳಿಯನ್ನು ಸರ್ವವಿಧದಲ್ಲಿಯೂ ಸಂತೋಷಪಡಿಸಲೆತ್ನಿಸುತ್ತಿದ್ದರು. ಹಡಗಿನಲ್ಲಿ ಪ್ರಯಾಣ ಮಾಡುತ್ತಿದ್ದ ಕೆಲವು ಗಣ್ಯ ಮಹನೀಯರ ಪರಿಚಯವೂ ಆಗಿತ್ತು.

ಉತ್ಸಾಹ, ಸಂತೋಷ ಮಂಡಳಿಯ ಎಲ್ಲ ಕಲಾವಿದರಲ್ಲಿಯೂ ತುಂಬಿ ತುಳುಕುತ್ತಿತ್ತು. ತಮ್ಮ ತಮ್ಮ ಕರ್ತವ್ಯ ಭಾಗವನ್ನು ಯಶಸ್ವಿಯಾಗಿ ನಿರ್ವಹಿಸಿ ಕೀರ್ತಿ ಗಳಿಸಬೇಕೆಂಬ ಆಕಾಂಕ್ಷೆ ಎಲ್ಲರನ್ನೂ ಕಾರ್ಯತತ್ಪರರನ್ನಾಗಿ ಮಾಡಿತ್ತು.

ಕೀರ್ತಿಯ ಜನ್ಮನಕ್ಷತ್ರ ಮಹಾದೆಸೆಯಲ್ಲಿ ನಡೆಯುತ್ತಿದ್ದಿತೆಂದು ಕಾಣುತ್ತದೆ. ವಿಯನ್ನಾದ 'ಅಂತರ–ರಾಷ್ಟ್ರೀಯ ನಾಟ್ಯ ಮಹೋತ್ಸವಕ್ಕೆ' ಭಾರತದ ಪ್ರತಿನಿಧಿಗಳಾಗಿ ಬರಲೊಪ್ಪಿಕೊಂಡಿದ್ದ ಉದಯಶಂಕರ್ ಮತ್ತು ಅವರ ಮಂಡಳಿ ಕೊನೆಯ ಗಳಿಗೆಯಲ್ಲಿ 'ಬರಲು ಸಾಧ್ಯವಿಲ್ಲ' ವೆಂದು ಕೇಬಲ್ ಗ್ರ್ಯಾಮ್ (Cablegram) ಕಳಿಸಿದ್ದರು. ಫ್ರಾನ್ಸ್, ರೋಮ್, ಇಂಗ್ಲೆಂಡ್, ಅಮೇರಿಕಾ, ರಷ್ಯಾ, ಚೀಣ, ಜಪಾನ್, ಸಿಲಾನ್, ಬರ್ಮ,

ಆಸ್ಟ್ರೇಲಿಯಾ ದೇಶಗಳಿಂದ ಪ್ರತಿನಿಧಿಗಳು ಬಂದಿದ್ದರು. ಭಾರತದ ಪ್ರಾತಿನಿಧ್ಯವಿಲ್ಲದಂತಾಯಿತಲ್ಲಾ ಎಂದು ಉತ್ಸವದ ವ್ಯವಸ್ಥಾಪಕರು ಯೋಚಿಸುತ್ತಿರುವಲ್ಲಿ ಕೀರ್ತಿ ತನ್ನ ಮಂಡಳಿಯ ಸಮೇತನಾಗಿ ವಿಯನ್ನಾ ತಲುಪಿದ. ಉದಯಶಂಕರರಿಗಾಗಿ ನಿಯೋಜಿತವಾಗಿದ್ದ ಸನ್ಮಾನ, ಅನುಕೂಲ, ಆದರ, ಪ್ರಚಾರವೆಲ್ಲಾ ಕೀರ್ತಿಯ ಪಾಲಾಯಿತು.

ಉತ್ಸವದ ಮುಖ್ಯ ಕಾರ್ಯಭಾಗದಲ್ಲಿ ಕೀರ್ತಿಯ ಮಂಡಳಿಗೆ ಎರಡು ಗಂಟೆಗಳು ಕೊಡಲಾಗಿತ್ತು. ಜೀವಾನಂದಂ 'ಭಾರತೀಯ ನಾಟ್ಯಕಲೆ'ಯ ಪರಿಚಯ ಮಾಡಿಕೊಟ್ಟುದಲ್ಲದೆ ಪ್ರತಿಯೊಂದು ನಾಟ್ಯವನ್ನು ವಿವರಿಸಿ ಹೇಳಿದರು. ಭಾರತದ ನೃತ್ಯಕಲೆಯ ವೈವಿಧ್ಯ, ರಸಸಿದ್ಧಿಯನ್ನು ಕಂಡು ಪ್ರತಿನಿಧಿಗಳು ಆನಂದಪರವಶರಾದರು. ನಾಟ್ಯಮಹೋತ್ಸವದ ಕೊನೆಯ ದಿನ ವಿವಿಧ ದೇಶಗಳ 'ಜಾನಪದ ನಾಟ್ಯ'ಗಳಿಗೆ ಮೀಸಲಿಡಲಾಗಿತ್ತು.

ಕೀರ್ತಿಯ ಮಂಡಳಿ ಜಾನಪದ ನಾಟ್ಯಗಳ ಒಂದು ಸಂಪೂರ್ಣ ಕಾರ್ಯಕ್ರಮ ಕೊಡಲು ಸಮರ್ಥವಾಗಿತ್ತು. ಆದರೆ ಕೀರ್ತಿಗೆ ದೊಡ್ಡ ಸಮಸ್ಯೆ ತಲೆದೋರಿತು. ಸೋಹಾನಿ ಸೋದರಿಯರ '**ಮಾರವಾಡಿ ನೃತ್ಯ**', – ರಘುವೀರನ '**ಹಾವಾಡಿಗ**', – ಸುಧೇಂದು ಸಿನ್ಹನ '**ಸುಗ್ಗಿಯ ಕುಣಿತ**', – ರಾಮನ್ ನಂಬೂದ್ರಿಯ '**ಬೇಟೆಗಾರ**', – ಭಾಗ್ಯಲಕ್ಷ್ಮಿಯ '**ನೀರಿಗೆ ಹೋದ ನಾರಿ**' ಪ್ರದರ್ಶಿಸಬೇಕೆಂದು ನಿಶ್ಚಯಿಸಲಾಯಿತು. ಅಂದು ಕೀರ್ತಿ ಮಾಡುವುದೇನು? ಕೀರ್ತಿಗೆ ಜಾನಪದ ನೃತ್ಯಗಳ ಪರಿಚಯವಿರಲಿಲ್ಲ. ತನ್ನ ಅಸಹಾಯಕತೆಯನ್ನು ನೆನೆದು ಕೀರ್ತಿ

"ಕೊನೆಯ ದಿನದ ಉತ್ಸವದಲ್ಲಿ ನಾವು ಭಾಗ ವಹಿಸುವುದಿಲ್ಲವೆಂದು ವ್ಯವಸ್ಥಾಪಕರಿಗೆ ತಿಳಿಸಿ ಬಿಡಿ ಜೀವಾನಂದಂ"

ಎಂದು ಹೇಳಿದ. ಕೀರ್ತಿಯ ಸುಗ್ರೀವಾಜ್ಞೆ ಜೀವಾನಂದಂ ಅವರಿಗೆ ಸಖೇದಾಶ್ಚರ್ಯವನ್ನುಂಟು ಮಾಡಿತು.

"ಇಂಥ ಅವಕಾಶ ಸಿಕ್ಕುವುದೇ ದುರ್ಲಭ. ಇದನ್ನು ನಾವು ಕಳೆದುಕೊಳ್ಳುವುದು ಜಾಣತನವಲ್ಲ. 'ವಿಯನ್ನಾ ಕಾನ್ಸರ್ಟ್ ಸೊಸೈಟಿ' (Vienna Concert Society) ಯವರು ನಾಲ್ಕು ಪ್ರದರ್ಶನಗಳಿಗೆ ತನ್ನೊಂದಿಗೆ ಮಾತುಕತೆ ನಡೆಸುತ್ತಿದ್ದಾರೆ. ನಮ್ಮ ಎರಡನೆಯ ಪ್ರದರ್ಶನದಿಂದ ವ್ಯವ

ಹಾರಕ್ಕೆ ತುಂಬ ಅನುಕೂಲವಾಗುತ್ತದೆ."

"ಕೈಯಿಂದ ಹಣ ಖರ್ಚು ಮಾಡಿಕೊಂಡು ಇತರರಿಗೆ ಖ್ಯಾತಿ, ಹಣ ಕಟ್ಟಿಕೊಡುವುದಕ್ಕೆ ನನಗೆ ತೆವಲೇನು ?"

"ನಿಮ್ಮ ಕಾರ್ಯಕ್ರಮವಿಲ್ಲವೆಂದು ಯೋಚಿಸುತ್ತಿರುವಿರಾ ?"

"ಹೌದು – ಜಾನಪದ ನೃತ್ಯ ಸಮಾರಂಭದಲ್ಲಿ ನನಗೇನು ಕೆಲಸವಿದೆ ಹೇಳಿ."

"ನಮ್ಮ ಕಾರ್ಯಕ್ರಮಕ್ಕೆ ಇನ್ನೂ ಮೂರು ದಿನಗಳ ಅವಧಿಯಿದೆ. ಈ ಮೂರು ದಿನಗಳಲ್ಲಿ ನೀವು ಯಾರಾದರೂ ನೃತ್ಯ ಕೂಡಿಸಲು ಸಾಧ್ಯವಿಲ್ಲವೇ ?"

"ಸಾಹಿತ್ಯವೆಲ್ಲಿಂದ ತರುವುದು ?"

ಈ ಬಿಕ್ಕಟ್ಟಿನಿಂದ ಪಾರಾಗುವ ಬಗೆಯನ್ನು ಯೋಚಿಸುತ್ತ ಜೀವಾನಂದಂ, ಚಕ್ರಪಾಣಿಯನ್ನು ಕರೆಯಿಸಿ

"ನಿಮಗೆ ಯಾವದಾದರೂ ಜಾನಪದ ಗೀತೆ ಬರುತ್ತದೇನ್ರೀ."

ಎಂದು ಕೇಳಿದರು. ಚಕ್ರಪಾಣಿ ತಲೆ ಕೆರೆಮಕೊಳ್ಳುತ್ತಾ

"ಯಾವುದೂ ಬರುವುದಿಲ್ಲವಲ್ಲ ಸಾರ್." ಎಂದ.

"ಜ್ಞಾಪಿಸಿಕೊಳ್ಳಿ. ಶಾಲೆಯಲ್ಲಿ ಕಲಿತ ಗೀತೆಗಳ ನೆನಪೂ ಇಲ್ಲವೇ ?"

ಚಕ್ರಪಾಣಿ ತನ್ನ ಗತಬಾಲ್ಯವನ್ನು ಸ್ಮರಿಸಿಕೊಂಡು

"ಗೋವಿನ ಕಥೆ ಒಂದು ಬರುತ್ತದೆ ಸಾರ್. ಅದೂ ಅರ್ಧಮರ್ಧ."

"ಹೇಳಿ ನೋಡೋಣ."

ಚಕ್ರಪಾಣಿ ತನಗೆ ನೆನಪಿದ್ದಷ್ಟು 'ಗೋವಿನ ಕಥೆ' ಯನ್ನು ನಿರೂಪಿಸಿದ. ಜೀವಾನಂದಂ ಉತ್ಸಾಹಭರಿತರಾಗಿ

"ಇದಕ್ಕಿಂತ ಇನ್ನು ಸಾಹಿತ್ಯ ಬೇಕೇ ? ಗೋವಿನ ಕಥೆಯ ಆಧಾರದ ಮೇಲೆ ನೃತ್ಯ ಅಳವಡಿಸಬಹುದು. ಜಲಜಾಕ್ಷಿ ಹಿನ್ನೆಲೆಯ ಸಂಗೀತ ಒದಗಿಸುತ್ತಾಳೆ. ನೀವು 'ಭರತನಾಟ್ಯ' ದಲ್ಲಿ ಹಸುವಿನ ಪಾತ್ರ ಅಳವಡಿಸಬಹುದು; ನಂಬೂದ್ರಿ 'ಕಥಾಕಳಿ' ಯಲ್ಲಿ ಹುಲಿರಾಯನ ಪಾತ್ರ ಅಳವಡಿಸಬಹುದು. ನಮ್ಮೆಲ್ಲ ಕಾರ್ಯಕ್ರಮಕ್ಕಿಂತ ಇದು ಚೆನ್ನಾಗುವುದಲ್ಲದೆ ವಿದೇಶೀಯರ ಮೇಲೆ ವಿಲಕ್ಷಣ ಪರಿಣಾಮವನ್ನುಂಟು ಮಾಡುತ್ತದೆ" ಎಂದರು.

ಮೋಡ ಮುಸುಕಿದ್ದ ಕೀರ್ತಿಯ ಮನಸ್ಸಿನ ಮೇಲೆ ಆಶಾಕಿರಣ ಸುಳಿದಂತಾಯಿತು.

ಮೂರು ದಿವಸಗಳು ಸತತವಾಗಿ 'ಗೋವಿನ ಕಥೆ' ಯ ರಿಹರ್ಸಲ್ ನಡೆಯಿತು. ಹಗಲಿರುಳು ಅದಕ್ಕಾಗಿ ಶ್ರಮಪಟ್ಟು ಕೀರ್ತಿ ನೃತ್ಯ ಅಳವಡಿಸಿದ. 'ಜಾನಪದ ನೃತ್ಯೋತ್ಸವ' ದ ದಿನ 'ಗೋವಿನ ಕಥೆ' ಯನ್ನು ಕೊನೆಯಲ್ಲಿ ಪ್ರದರ್ಶಿಸುವುದೆಂದು ನಿಶ್ಚಯಿಸಲಾಯಿತು.

ಕಾರ್ಯಕ್ರಮದ ವಿವರಣೆ ಮೊದಲೇ ಅಚ್ಚಾಯಿತು. 'ಗೋವಿನ ಕಥೆ' ಯ ವಸ್ತು ಎಲ್ಲರಲ್ಲಿಯೂ ವಿಶೇಷ ಕುತೂಹಲವನ್ನು ಕೆರಳಿಸಿತ್ತು.

ಪ್ರದರ್ಶನದ ದಿನ ಕೀರ್ತಿ ಅಧೀರನಾಗಿದ್ದ. ಹೊಸ ವಸ್ತು, ಹೊಸ ತಂತ್ರ, ಅಪಕ್ವ ಪ್ರದರ್ಶನ – ಎಲ್ಲಿ ಆಭಾಸವಾಗುವುದೋ ಎನ್ನುವ ಭಯವೊಂದು ಕಡೆ; ಸೊಹಾನಿ ಸೋದರಿಯರು, ಸಿನ್ಹ, ಭಾಗ್ಯಲಕ್ಷ್ಮಿ, ನಂಬೂದ್ರಿ, ರಘುವೀರ ಎಲ್ಲರೂ ನುರಿತ ಕಲಾವಿದರು. ಅವರ ಕಾರ್ಯಕ್ರಮಕ್ಕೆ ಯಶಸ್ಸು ದೊರೆತು ತನ್ನದು ಕೀಳಾದರೆ ಏನು ಗತಿ ಎನ್ನುವ ಭಯ ಮತ್ತೊಂದು ಕಡೆ. ಪ್ರೇಕ್ಷಕರಿಗಿಂತಲೂ ಹೆಚ್ಚಿನ ಆಸಕ್ತಿಯಿಂದ ಕೀರ್ತಿ ತನ್ನ ಮುಂಡಳಿಯವರ ನಾಟ್ಯಗಳನ್ನು ನೋಡುತ್ತ ಕುಳಿತ.

ಕಾರ್ಯಕ್ರಮ ಸಿನ್ಹನ '**ಸುಗ್ಗಿಯ ಕುಣಿತ**' ದಿಂದ ಆರಂಭವಾಯಿತು. ಅವನ ಮೃದಂಗವಾದನ, ಅದಕ್ಕೆ ಸರಿ ಜೋಡಣೆಯಾದ ತಾಳವಿನ್ಯಾಸ ಪ್ರೇಕ್ಷಕರ ಚಿತ್ತವನ್ನಾಕರ್ಷಿಸಿತು. ಪ್ರೇಕ್ಷಕರು ಕರತಾಡನದ ಮೂಲಕ ತನ್ನ ಮೆಚ್ಚುಗೆ ವ್ಯಕ್ತ ಮಾಡಿದರು. ರಘುವೀರ ಕಥಕ ಸಂಪ್ರದಾಯದಲ್ಲಿ '**ಹಾವಾಡಿಗ**' ನಾಟ್ಯ ಪ್ರದರ್ಶಿಸಿದ. ಅವನ ಚಿತ್ರವಿಚಿತ್ರ ವೇಷಭೂಷಣ, ಹಾವಭಾವ ಪ್ರೇಕ್ಷಕರ ಮನಸ್ಸಿಗೆ ಹರ್ಷವನ್ನುಂಟು ಮಾಡಿತು. ಭಾಗ್ಯಲಕ್ಷ್ಮಿ ತನ್ನ '**ನೀರಿಗೆ ಹೋದ ನಾರಿ**' ನೃತ್ಯದಿಂದ ಪ್ರೇಕ್ಷಕರ ಹೃದಯವನ್ನಪಹರಿಸಿ ಬಿಟ್ಟಳು. ನೀರಿಗೆ ಹೋಗಲು ನಾರಿ ಮಾಡಿಕೊಳ್ಳುವ ಸಿದ್ಧತೆ – ದಾರಿಯಲ್ಲಿ ಸಿಕ್ಕಿದ ಗೆಳತಿಯರನ್ನು ಜತೆಯಲ್ಲಿ ಬನ್ನಿರೆಂದು ಕರೆಯುವುದು, ಅವರು ಬಗೆಬಗೆಯ ಕಾರಣಗಳನ್ನು ಹೇಳಿ ತಪ್ಪಿಸಿಕೊಳ್ಳುವುದು. – ಭಾವಿಯ ಬಳಿ ಸಿಕ್ಕಿದ ಗೆಳತಿಯರೊಂದಿಗೆ ಹರಟುವುದು - ನೀರಿನ ಕೊಡ ಜಗ್ಗಿ ಅದನ್ನು ಮಾಟವಾಗಿ ತಲೆಯ ಮೇಲೆ ಇಟ್ಟುಕೊಳ್ಳುವುದು ಮೊದಲಾದ

ಎಲ್ಲ ಅಂಶಗಳನ್ನು ಮಾರ್ಮಿಕವಾಗಿ, ಕಲಾಪೂರ್ಣವಾಗಿ ಚಿತ್ರಿಸಿ ಭಾರತೀಯ ಜೀವನದ ಒಂದು ಸುಂದರ ಚಿತ್ರ ಪ್ರೇಕ್ಷಕರ ಕಣ್ಣಿಗೆ ಕಟ್ಟುವಂತೆ ಮಾಡಿದಳು. ನಂಬೂದ್ರಿಯ '**ಬೇಟೆಗಾರ**' ಪ್ರೇಕ್ಷಕರನ್ನು ವಿಸ್ಮಯಗೊಳಿಸಿತು. ನಂಬೂದ್ರಿಯ ನೃತ್ಯದಲ್ಲಿ ಬೇಟೆಗಾರನ ವಿವಿಧ ಚಲನವಲನಗಳು ಚಿತ್ರಿತವಾದುದಲ್ಲದೆ ಬೇಟೆಯ ( ಹುಲಿಯ ) ಚಲನವಲನಗಳೂ ಚಿತ್ರಿತವಾದವು. ಮೃಗದ ಮನೋಧರ್ಮ, ಸಹಜ ಗುಣವನ್ನು ಕಲಾವಿದ ನಂಬೂದ್ರಿ ಅನ್ಯಾದೃಶವಾಗಿ ಚಿತ್ರಿಸಿದ. '**ಮಾರವಾಡಿ ನೃತ್ಯ**' ದಲ್ಲಿ ಸೊಹಾನಿ ಸೋದರಿಯರು ಕಥಕ ಸಂಪ್ರದಾಯದ ಚಾಕಚಕ್ಯ, ವೇಗವನ್ನು ಹೃದಯಂಗಮವಾಗಿ ನಿರೂಪಿಸಿದರು.

ಪ್ರೇಕ್ಷಕರು ಆನಂದಪರವಶರಾಗಿದ್ದರು. ಇಡಿಯ ನಾಟ್ಯೋತ್ಸವದ ಕೀರ್ತಿಯನ್ನು ಭಾರತೀಯ ಕಲಾವಿದರು ಕಬಳಿಸಿದ್ದರು. ಕೀರ್ತಿಯ ಮನಸ್ಸು ಅಲ್ಲೋಲ ಕಲ್ಲೋಲವಾಯಿತು. 'ಇವುಗಳ ಮುಂದೆ ನನ್ನ ನಾಟ್ಯ ಸೋಲಾದರೇನು ಗತಿ?' ಎನ್ನುವ ಚಿಂತೆ ಅವನನ್ನು ಕಾಡಲಾರಂಭಿಸಿತು. ಜೀವಾನಂದಂ ಅವರೆದುರಿಗಾಗಲಿ, ಇತರರ ಎದುರಿಗಾಗಲಿ ಹೇಳಿಕೊಳ್ಳಲು ಸಂಕೋಚ – ಶ್ರೀಮದ್ಗಾಂಭೀರ್ಯ. ಕೀರ್ತಿಯ ಒಳತೋಟಿಯನ್ನರಿತ ಜೀವಾನಂದಂ ಅವನ ಬಳಿಗೆ ಬಂದ.

"ನಿಮ್ಮ ನಾಟ್ಯ ಇವೆಲ್ಲವುಗಳನ್ನು ಮೀರಿಸುತ್ತದೆ ಕೀರ್ತಿಗಳೇ – ಯೋಚನೆ ಮಾಡಬೇಡಿ" ಎಂದು ಧೈರ್ಯ ಹೇಳಿದರು.

'**ಗೋವಿನ ಕಥೆ**' ಹುಲಿರಾಯನ ಪ್ರವೇಶದಿಂದ ಆರಂಭವಾಯಿತು. ಆಹಾರಕ್ಕಾಗಿ ಹುಲಿರಾಯ ಪಡುವ ಪ್ರಯಾಸ – ಹಸಿವಿನ ಬಾಧೆ ತಾಳಲಾರದೆ ಹುಲಿರಾಯ ಪಡುವ ಪಾಡು – ಅದರಲ್ಲಿ ಮೂಡುವ ನಿರ್ವಿಣ್ಣತೆಯನ್ನು ನಂಬೂದ್ರಿ ಕಥಾಕಳಿ ಸಂಪ್ರದಾಯದಲ್ಲಿ ಪ್ರದರ್ಶಿಸಿದರು.

ತರುವಾಯವೇ ಗೋವಿನ ಪ್ರವೇಶ. ಆ ಸೌಮ್ಯಜೀವಿ ಹುಲ್ಲುಮೇಯುತ್ತಿರುತ್ತದೆ. ಹಸಿದು ಕಾದಿರುವ ಹುಲಿರಾಯ ಕಬಳಿಸುತ್ತದೆ. ಹುಲಿರಾಯನಿಗೂ ಹಸುವಿಗೂ ಸಂಭಾಷಣೆ ಆರಂಭವಾಗುತ್ತದೆ. ಹುಲಿರಾಯನ ಕಾಠಿಣ್ಯ – ಹಸುವಿನ ಮಾರ್ದವತೆ; ದೈನ್ಯ. ಮನೆಗೆ ಹೋಗಿ ಹಸಿದು ಕಾದಿರುವ ಕರುವಿಗೆ ಹಾಲು ಕೊಟ್ಟು ಹಿಂದಿರುಗುತ್ತೇನೆಂದು ಹಸು ಆಶ್ವಾಸನವೀಯುತ್ತದೆ. ಹುಲಿರಾಯ ಆಶ್ವಾಸನ ಒಪ್ಪಿಕೊಳ್ಳುವುದಿಲ್ಲ. 'ನಿನ್ನ ಮಾತನ್ನು

ಹೇಗೆ ನಂಬಲಿ – ನನಗೆ ಸುಳ್ಳು ಹೇಳಿ ನೀನು ಓಡಿ ಹೋದರೇನು ಮಾಡು ವುದು' ಎಂದು ಕೇಳುತ್ತದೆ. ಹಸು ಸೂರ್ಯ ಚಂದ್ರರ ಮೇಲೆ ಆಣೆಮಾಡಿ ಮನೆಗೆ ಹೋಗಿ ಬರಲು ಹುಲಿರಾಯನ ಅಪ್ಪಣೆ ಪಡೆಯುತ್ತದೆ.

ಎರಡನೆಯ ದೃಶ್ಯದಲ್ಲಿ ಹುಲಿರಾಯ ತಾಳ್ಮೆಗೆಟ್ಟಿರುತ್ತದೆ. 'ನಾನೆಂಥ ಮೂಢ – ಕೈಗೆ ಸಿಕ್ಕಿದ ಆಹಾರವನ್ನು ಕಳೆದುಕೊಂಡೆ – ಹಸು ನನಗೆ ಮೋಸ ಮಾಡಿದರೇನು ಮಾಡಲಿ' ಎಂದು ಚಿಂತಿಸುತ್ತಿರುತ್ತದೆ. ಹಸು ಧಾವಿಸಿ ಬಂದು ಹುಲಿರಾಯನ ಮುಂದೆ ನಿಲ್ಲಲು ಹುಲಿರಾಯನಿಗೆ ಪರಮಾಶ್ಚರ್ಯ ವಾಗುತ್ತದೆ.

'ಏಕೆ ತಡವಾಯಿತು?' ಎಂದು ಸಿಟ್ಟಿನಿಂದ ಕೇಳುತ್ತದೆ.

'ನೀನು ಗಂಡು – ನಿನಗೆ ಹೆಣ್ಣಿನ ಹೃದಯ ಹೇಗೆ ಗೊತ್ತಾಗಬೇಕು. ನನ್ನ ಮಗುವಿಗೆ ಹಾಲಿತ್ತು, ಅದನ್ನು ಒಪ್ಪಿಸಿ ನಾನು ಬರಬೇಡವೇ? ಇಂದಿಗೆ ನನ್ನ ಹಾಲಿನ ಋಣ ತೀರಿತು. ಇಂದಿನಿಂದ ನನ್ನ ಕಂದ ತಬ್ಬಲಿ.'

'ಭಗವಂತನೇ ಗತಿ.'

'ನಿನ್ನ ಕಂದನ ಸಲುವಾಗಿ ನನ್ನಿಂದ ಪಾರಾಗಬೇಕೆಂಬ ಯೋಚನೆ ಬರಲಿಲ್ಲವೇ? ನೀನು ಇಲ್ಲಿಗೆ ಬಾರದೆ ತಪ್ಪಿಸಿಕೊಂಡಿದ್ದರೆ ನಿನ್ನ ಜೀವ ಉಳಿ ಯುತ್ತಿತ್ತು.'

'ಸತ್ಯಭ್ರಷ್ಟಳಾದ ನನ್ನ ಮೊಲೆವಾಲು ನನ್ನ ಕಂದನಿಗೆ ವಿಷವಾಗು ತ್ತದೆ. ಯಾವ ಸತ್ಯ ನನ್ನ ಬಲಿದಾನವನ್ನು ಬಯಸುತ್ತಿದೆಯೋ ಅದೇ ಸತ್ಯ ನನ್ನ ಕಂದನನ್ನು ಕಾಪಾಡುತ್ತದೆ – ನಿನ್ನನ್ನು ಕಾಯಿಸಿ ಬಳಲಿಸಿದೆ, ಹುಲಿ ರಾಯ, ನನ್ನ ಅಪರಾಧ ಕ್ಷಮಿಸಿ ನಿನ್ನ ಕ್ಷುತ್ಪಿಪಾಸೆಯನ್ನು ತೀರಿಸಿಕೋ'

ಎಂದು ಹೇಳುತ್ತದೆ.

ಕ್ಷಣಮಾತ್ರದಲ್ಲಿ ಹುಲಿರಾಯನ ಮನಸ್ಸು ಕರಗುತ್ತದೆ. ಹಸುವನ್ನಪ್ಪಿ ಮುದ್ದಿಟ್ಟು

"ಹೋಗು – ನಿನ್ನ ಕಂದನನ್ನು ನೋಡಿಕೊಂಡು ಸುಖವಾಗಿರು. ಹಾಳು ಹೊಟ್ಟೆಗಾಗಿ ನಿನ್ನಂಥ ಸತ್ಪುರುಷಳನ್ನು ಕೊಲ್ಲುವ ಪಾಪವೇಕೆ ಮಾಡಲಿ. ಭಗವಂತ ಎಲ್ಲಿಯಾದರೂ ನನಗೆ ಅನ್ನ ಒದಗಿಸುತ್ತಾನೆ."

ಎಂದು ಹೇಳುತ್ತದೆ. ಹಸು, ಹುಲಿ ಎರಡೂ ಅಪ್ಪಿಕೊಂಡು ಸಂತೋಷದಿಂದ ಕುಣಿಯುತ್ತವೆ.

ಕೀರ್ತಿ, ನಂಬೂದ್ರಿ ನಾಟ್ಯವನ್ನು ಮುಗಿಸುವ ವೇಳೆಗೆ ಇಡಿಯ ಪ್ರೇಕ್ಷಕ ವರ್ಗ ಎದ್ದು ನಿಂತು ಸತತ ಕರತಾಡನ ಮಾಡಿ ತಮ್ಮ ಹರ್ಷ, ಮೆಚ್ಚುಗೆ ವ್ಯಕ್ತಪಡಿಸಿದರು. ಕೀರ್ತಿ ಹಲವು ಸಾರಿ ತೆರೆಯ ಮುಂದೆ ಬಂದು ಪ್ರೇಕ್ಷಕ ರನ್ನು ವಂದಿಸಬೇಕಾಯಿತು.

ಮಂಡಳಿಯ ಇತರ ಕಲಾವಿದರನ್ನು ಒತ್ತರಿಸಿ ಕೀರ್ತಿ ಮೆಚ್ಚುಗೆಯನ್ನು ಸ್ವೀಕರಿಸಿದ ರೀತಿ ಎಲ್ಲ ಕಲಾವಿದರಿಗೂ ಅಸಮಾಧಾನವನ್ನುಂಟು ಮಾಡಿತು. ಕೀರ್ತಿಯ ಮನಸ್ಸಂತೋಷಪಡಿಸುವುದಕ್ಕೆ ಜೀವಾನಂದಂ ಎಲ್ಲ ಪ್ರಕಟನೆಗ ಳಲ್ಲಿಯೂ ಕೀರ್ತಿಯ ಹೆಸರೇ ಪ್ರಧಾನವಾಗಿ ಕಾಣುವಂತೆ ಮಾಡುತ್ತಿದ್ದರು.

ಅಸಹನೆಯ ಕಿಡಿ ಒಳಗೇ ಕವರಲಾರಂಭಿಸಿತು.

ವಿಯನ್ನಾದಲ್ಲಿ ದೊರೆತ ಅಭೂತಪೂರ್ವ ಸ್ವಾಗತ ಕೀರ್ತಿಯ ಸಮ ತೋಲನೆಯನ್ನು ಸಂಪೂರ್ಣವಾಗಿ ನಾಶಮಾಡಿತು. ದಿನಕ್ಕೆ ನೂರು ಸಲ ವಾದರೂ ಅವನ ಬಾಯಿಂದ 'I am an inspired artist (ನಾನು ಪ್ರತಿಭಾ ಶಾಲಿಯಾದ ಕಲಾವಿದ)' ಎಂಬ ಆತ್ಮಸ್ತುತಿಯ ಪಲ್ಲವಿ ಹೊರಬೀಳುತ್ತಿತ್ತು.

ಕೀರ್ತಿಯ ಅಭಿಮಾನಿಗಳ, ಭಕ್ತರ ತಂಡವೂ ಹೆಚ್ಚುತ್ತ ಬಂದಿತು. ಕೌಂಟುಗಳೂ, ಬ್ಯಾರನ್‌ಗಳೂ, ಡಚ್ಚೆಸ್ಸುಗಳೂ ಕೀರ್ತಿಯ ಸ್ನೇಹಕ್ಕಾಗಿ ಹಾತೊರೆಯಲಾರಂಭಿಸಿದರು. ಬೆಳಿಗ್ಗೆಯಿಂದ ಸಂಜೆಯವರೆಗೂ ಪತ್ರಿಕಾ ಪ್ರತಿನಿಧಿಗಳು ಕೀರ್ತಿಯ ಹಿಂದೆ ಬಿದ್ದು ಅವನ ಪ್ರತಿಯೊಂದು ಮಾತು, ಪ್ರತಿ ಯೊಂದು ಚಲನವಲನವನ್ನೂ ವರದಿ ಮಾಡುತ್ತಿದ್ದರು. ಕೀರ್ತಿಯ ಫೋಟೊ ಇಲ್ಲದೆ ಯಾವ ಪತ್ರಿಕೆಯೂ ಪ್ರಕಟವಾಗುತ್ತಿರಲಿಲ್ಲ.

ಪ್ರಚಾರದ ತಿರುಗಣೆ ಮಡುವಿಗೆ ಕೀರ್ತಿ ಸಿಕ್ಕುಬಿದ್ದಂತಾಗಿತ್ತು.

ವಿಲಾಯತಿಯಲ್ಲಿ ಕೀರ್ತಿಗೂ, ಅವನ ಮಂಡಳಿಗೂ ದೊರೆತ ಸ್ವಾಗತ ಸುದ್ದಿ ಭಾರತೀಯ ಪತ್ರಿಕೆಗಳಲ್ಲಿಯೂ ಪ್ರಕಟವಾಗುತ್ತಿತ್ತು. ವಿಲಾಯತಿಯ ಪತ್ರಿಕಾ ಪ್ರತಿನಿಧಿಗಳು ಭಾರತಕ್ಕೆ ಕಳುಹಿಸುತ್ತಿದ್ದ ಸುದ್ದಿಗಳಲ್ಲದೆ, ಜೀವಾ ನಂದಂ ವಿಶೇಷ ಲೇಖನಗಳನ್ನು ತಾವೂ ಬರೆದು, ಇತರರಿಂದಲೂ ಬರಿಸಿ ಕಳುಹಿಸುತ್ತಿದ್ದರು. ಆನಂದರಾಯರಿಗೆ ಲೇಖನ, ಸುದ್ದಿಗಳ ಕಟ್ಟು ಪ್ರತಿ

ದಿನವೂ 'ಏರ್‌ಮೇಲ್' ( Air Mail ) ನಲ್ಲಿ ಬರುತ್ತಿತ್ತು. ರಾಯರು ಭಕ್ತಿ ಪುರಸ್ಸರವಾಗಿ ಅವುಗಳನ್ನು ಕನ್ನಡಕ್ಕೆ ಅನುವಾದಿಸಿ, ಕನ್ನಡ ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು. ಕೀರ್ತಿಯ ಸುದ್ದಿ ಒಂದಲ್ಲ ಒಂದು ಸ್ವರೂಪದಲ್ಲಿ ಪ್ರತಿ ನಿತ್ಯ ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿತ್ತು.

ವಿಯನ್ನಾದಲ್ಲಿ ಸಿಕ್ಕಿದ ಕಂಟ್ರಾಕ್ಟ ಪ್ರದರ್ಶನಗಳನ್ನು ಮುಗಿಸಿಕೊಂಡು ಮಂಡಳಿ ಮುಂದೆ ಪ್ರಯಾಣ ಬೆಳಸಿತು. ಪ್ಯಾರಿಸ್, ರೋಮ್, ಬರ್ಲಿನ್ ನಗರಗಳಲ್ಲಿ ಪ್ರದರ್ಶನಗಳನ್ನು ಮುಗಿಸಿಕೊಂಡು ಮಂಡಳಿ ಲಂಡನ್ನಿಗೆ ಬಂದಿತು.

ಈ ವೇಳೆಗಾಗಲೇ ನಾಲ್ಕು ತಿಂಗಳು ಕಳೆದಿದ್ದವು. ಕೀರ್ತಿಯ ನಡತೆ, ಸ್ವಾರ್ಥ, ಪ್ರಚಾರ ಲಾಲಸೆ ಮಂಡಳಿಯ ಕೆಲವು ಕಲಾವಿದರಿಗೆ ತಲೆಬೇಸರ ವನ್ನುಂಟು ಮಾಡಿದ್ದವು. ತಾನು ಊರಿಗೆ ಹೋಗಬೇಕೆಂದು ಭಾಗ್ಯಲಕ್ಷ್ಮಿ ಹಟ ಹಿಡಿದಳು. 'ಲಂಡನ್ ಸೀಸನ್ ನಮಗೆ ಅತಿ ಮುಖ್ಯವಾದುದು. ಇದು ಮುಗಿದ ಮೇಲೆ ಹೋಗಬಹುದು' ಎಂದು ಜೀವಾನಂದಂ ಅವಳನ್ನು ಸಮಾಧಾನಪಡಿಸಲೆತ್ನಿಸಿದರು. ಭಾಗ್ಯಲಕ್ಷ್ಮಿ ಹಟ ಬಿಡಲಿಲ್ಲ. ಕೀರ್ತಿಯೇ ಬಂದು ಅವಳಲ್ಲಿ ಪ್ರಾರ್ಥಿಸಿಕೊಂಡ.

"ಮಿಕ್ಕವರು ಹೋದರೆ ಹೇಗಾದರೂ ಸುಧಾರಿಸಿಕೊಳ್ಳಬಹುದು. ನೀನು ಮಂಡಳಿಯ ಪ್ರಧಾನ ಕಲಾವಿದೆ. ನನ್ನ ನೃತ್ಯಗಳಿಗೆಲ್ಲಾ ನಿನ್ನ ನೆರವು ಬೇಕು. ನೀನು ಹೊರಟು ಹೋದರೆ ಲಂಡನ್ನಿನಲ್ಲಿ ಬೇರೆಯವರು ಯಾರು ಸಿಕ್ಕಬೇಕು. ಲಕ್ಷಾಂತರ ರೂಪಾಯಿ ಖರ್ಚುಮಾಡಿ ನಿಮ್ಮನ್ನೆಲ್ಲಾ ಇಲ್ಲಿಯ ವರೆಗೆ ಕರತಂದು ಅಂತರ-ರಾಷ್ಟ್ರೀಯ ಖ್ಯಾತಿ ದೊರಕಿಸಿಕೊಟ್ಟುದಕ್ಕೆ ನನಗೆ ಅನ್ಯಾಯ ಮಾಡಬೇಡಿ. ಲಂಡನ್ ಸೀಸನ್ ಮುಗಿದ ಮೇಲೆ ನೀನು ಅವ ಶ್ಯಕವಾಗಿ ಹೋಗಬಹುದು."

"ಇಡೀ ಅಂತರ-ರಾಷ್ಟ್ರೀಯ ಖ್ಯಾತಿಯನ್ನು ನಾನು ಬಯಸಲಿಲ್ಲ. ಆ ಖ್ಯಾತಿ ನಮಗೆ ಯಾರಿಗೂ ಬರದಂತೆ ನೀವೂ ಜೀವಾನಂದಂ ಅವರೂ ನಮ್ಮನ್ನು ಹಿಂದಕ್ಕೆ ತಳ್ಳಿದಿರಿ. ಲಕ್ಷಾಂತರ ರೂಪಾಯಿ ಖರ್ಚು ಮಾಡಿದಿರಿ ದಿಟ – ಯಾರಿಗಾಗಿ ಮಾಡಿದಿರಿ ? ಅದರಿಂದ ನಿಮಗೆ ಲಕ್ಷಾಂತರ ರೂಪಾಯಿ ವರಮಾನವೂ ಬಂದಿದೆ. ನಮ್ಮ ಸಂಬಳ ಬಿಟ್ಟು ಒಂದು ಕಿಲುಬು ಕಾಸು

ನೀವು ಹೆಚ್ಚಾಗಿ ಕೊಟ್ಟಿಲ್ಲ. ಹೋದಹೋದ ಕಡೆ ನೀವೂ, ಜೀವಾನಂದಂ 'ಗ್ರ್ಯಾಂಡ್ ಹೊಟೇಲ್' ನಲ್ಲಿ ಇಳಿದುಕೊಂಡಿರಿ – ನಮ್ಮನ್ನು ಅಡಗುಲಜ್ಜೀ ಮನೆಗೆ ಕಳಿಸಿದಿರಿ. ನಿಮ್ಮ ಖ್ಯಾತಿಯೂ ಬೇಡ – ಹಣವೂ ಬೇಡ. ನಿಮ್ಮ ಸಹವಾಸವೂ ಬೇಡ. ಸದ್ಯ ನನ್ನನ್ನು ಊರಿಗೆ ಕಳುಹಿಸಿಕೊಟ್ಟು ಬಿಡಿ."

ಭಾಗ್ಯಲಕ್ಷ್ಮಿಯನ್ನು ಒಪ್ಪಿಸಿ ಅವಳನ್ನು ಉಳಿಸಿಕೊಳ್ಳಲು ಕೀರ್ತಿ ಬಹಳ ಪ್ರಯತ್ನ ಮಾಡಿದ. ಅವಳ ಹಟದ ಮುಂದೆ ಕೀರ್ತಿಯ ಪ್ರಯತ್ನ ಸಫಲ ವಾಗಲಿಲ್ಲ. ಕೊನೆಗೊಂದು ದಿನ ರೇಗಿ ಕೀರ್ತಿ 'ಆ ರಂಡೆಯನ್ನು ಕಳುಹಿಸಿ ಬಿಡಿ ಜೀವಾನಂದಂ' ಎಂದು ತುಚ್ಛವಾಗಿ ಮಾತನಾಡಿದ. ಅವನ ಮಾತನ್ನು ಕೇಳಿಸಿಕೊಂಡ ಭಾಗ್ಯಲಕ್ಷ್ಮಿ ಗೋಳೋ ಎಂದು ಅಳಲುಪಕ್ರಮಿಸಿದಳು. ಪಕ್ಕ ದಲ್ಲಿಯೇ ಇದ್ದ ಕೊಳಲು ವಿದ್ವಾನ್ ಗೋಪಾಲ್ ಕೆರಳಿ ಕೀರ್ತಿಯ ಮೇಲೆ ಕೈಮಾಡಲು ಹೋದ. ಡಿಕ್ಕಿ ಕೀರ್ತಿಯ ನೆರವಿಗೆ ಬರಬೇಕಾಯಿತು. ಮಂಡಳಿಯ ಕಲಾವಿದರೆಲ್ಲರೆದುರಿಗೂ ಗೋಪಾಲನಿಗೂ ಡಿಕ್ಕಿಗೂ ಕೈ ಕೈ ಕೂಡಿತು.

ಮಂಡಳಿಯಲ್ಲಿ ಒಡಕು ಹುಟ್ಟಿಕೊಂಡಿತು. ಭಾಗ್ಯಲಕ್ಷ್ಮಿಗಾದ ಅಪ ಮಾನಕ್ಕೆ ಜಲಜಾಕ್ಷಿ ಮುನಿದಳು. ಅವರ ಪಕ್ಷಕ್ಕೆ ಗೋಪಾಲ್, ರಘುವೀರ, ರಾಮನ್, ನಂಬೂದ್ರಿ, ರಾಮನಾಥನ್ ಸೇರಿಕೊಂಡರು. ವಿರುದ್ಧ ಪಕ್ಷದ ನಾಯಕತ್ವವನ್ನು ರಘುವೀರನಿಗೆ ಒಪ್ಪಿಸಿದರು. ತಮ್ಮ ಸಂಬಳದ ಬಾಕಿ ತೀರಿಸಿ, ಕೂಡಲೆ ಮಾತೃಭೂಮಿಗೆ ಕಳಿಸಿಕೊಡಬೇಕೆಂದೂ, ಹಾಗೆ ಮಾಡದಿ ದ್ದಲ್ಲಿ ಮುಷ್ಕರ ಹೂಡಿ, ದೂರನ್ನು ಭಾರತದ ಹೈಕಮಿಷನರ್‌ವರೆಗೆ ಒಯ್ಯುವು ದಾಗಿಯೂ ರಘುವೀರ ಬೆದರಿಕೆ ಹಾಕಿದ.

ಲಂಡನ್ ಪ್ರದರ್ಶನಗಳ ಗತಿಯೇನು ಎಂದು ಕೀರ್ತಿಗೆ ಯೋಚನೆ ಹತ್ತಿಕೊಂಡಿತು. ಈ ಕುತ್ತಿನಿಂದ ಪಾರಾಗುವುದು ಹೇಗೆ – ಸುದ್ದಿ ಪತ್ರಿಕೆ ಗಳ ವರೆಗೆ ಮುಟ್ಟಿದರೇನು ಗತಿ ಎಂಬ ಚಿಂತೆ ಜೀವಾನಂದಂ ಅವರನ್ನು ಕಾಡ ಲಾರಂಭಿಸಿತು.

ಶಾಂತಿಸಂಧಾನ ಮಾಡುವುದಕ್ಕೆ ಕೀರ್ತಿ, ಜೀವಾನಂದಂ ಕುಂಜುಮಣಿ ಯವರ ಮರೆಹೊಕ್ಕರು.

" ನೀವು ಮಾಡಿರುವುದು ತಪ್ಪು. ಕೀರ್ತಿಯವರೇ – ಭಾಗ್ಯಳನ್ನು ತುಚ್ಛವಾಗಿ ನಿಂದಿಸಬಾರದಾಗಿತ್ತು. "

" ನನ್ನದು ತಪ್ಪಾಯಿತು ಗುರುಗಳೇ. ಭಾಗ್ಯಲಕ್ಷ್ಮಿಯ ಕ್ಷಮೆ ಬೇಡಲು ನಾನು ಸಿದ್ಧವಾಗಿದ್ದೇನೆ. "

" ನಾನೇನು ಮಾಡಬೇಕು. "

" ಲಂಡನ್ ಸೀಸನ್ ಮುಗಿಯುವ ವರೆಗೆ ಅವರು ಊರಿಗೆ ಹೋಗದಂತೆ ತಡೆಯುವ ಉಪಕಾರ ಮಾಡಿ. ಇಂದಿನಿಂದಲೇ ಅವರ ಸಂಬಳ ಇಮ್ಮಡಿಯಷ್ಟು ಕೊಡುತ್ತೇನೆ. ಅವರಿಗೂ ಸರಿಯಾದ ಪ್ರಚಾರ ದೊರೆಯುವಂತೆ ಮಾಡುತ್ತೇನೆ. "

" ಆಗಲಿ ಹೇಳಿ ನೋಡುತ್ತೇನೆ. ಅವರು ಒಪ್ಪದಿದ್ದರೆ ನನ್ನನ್ನು ಆಕ್ಷೇಪಿಸಬೇಡಿ " ಎಂದರು.

ಕುಂಜುಮಣಿಯವರ ಪ್ರಯತ್ನವೂ ಸಾರ್ಥಕವಾಗಲಿಲ್ಲ. ' ಈ ಜನ್ಮವಿರುವ ವರೆಗೂ ಕೀರ್ತಿಯ ಜತೆಯಲ್ಲಿ ನಾನು ಕುಣಿಯುವುದಿಲ್ಲ ' ಎಂದು ಭಾಗ್ಯಲಕ್ಷ್ಮಿ ಗೆಜ್ಜೆ ಮುಟ್ಟಿ ಪ್ರಮಾಣ ಮಾಡಿದಳು.

ಕೀರ್ತಿ, ಜೀವಾನಂದಂ ವಿರುದ್ಧ ಪಕ್ಷದ ಬೇಡಿಕೆಗಳನ್ನು ಮನ್ನಿಸಿ ಅವರ ಪ್ರಯಾಣಕ್ಕೆ ಬೇಕಾದ ವ್ಯವಸ್ಥೆ ಮಾಡಲೇಬೇಕಾಯಿತು.

ಲಂಡನ್ ಸೀಸನ್ ಆರಂಭಿಸುವ ದಿನವನ್ನು ನಿಶ್ಚಯಿಸಿ ' ಆಲ್ಡ್‌ವಿಚ್ ಥಿಯೇಟರನ್ನು ' ( Aldwytch Theatre ) ಜೀವಾನಂದರ ಒಂದು ವಾರ ಬಾಡಿಗೆಗೆ ತೆಗೆದುಕೊಂಡಿದ್ದರು, ರೋಮ್, ಪ್ಯಾರಿಸ್, ಬರ್ಲಿನ್ ನಗರಗಳಲ್ಲಿ ಸಿಕ್ಕಿದ ಸ್ವಾಗತ ಜೀವಾನಂದಂ ಅವರಿಗೆ ದುರಾಸೆಯನ್ನು ಹುಟ್ಟಿಸಿತ್ತು. ಲಂಡನ್ ಪ್ರದರ್ಶನಗಳನ್ನು ಕಂಟ್ರ್ಯಾಕ್ಟ ಕೊಟ್ಟು, ಕಂಟ್ರ್ಯಾಕ್ಟುದಾರನಿಗೆ ಹಣ ಮಾಡಿಕೊಡುವುದರ ಬದಲು, ನಾವೇ ಏಕೆ ಥಿಯೇಟರ್ ಬಾಡಿಗೆ ತೆಗೆದುಕೊಂಡು ಪ್ರದರ್ಶನಗಳನ್ನು ನಡೆಸಬಾರದು ಎಂದು ಆಲೋಚಿಸಿ ಆಲ್ಡ್‌ವಿಚ್ ಥಿಯೇಟರನ್ನು ದಿನಕ್ಕೆ ೨೦೦ ಪೌಂಡುಗಳ ಬಾಡಿಗೆಯಂತೆ ಒಂದು ವಾರ ತೆಗೆದುಕೊಂಡಿದ್ದರು. ಮಂಡಳಿಯ ಆಧಾರಸ್ತಂಭಗಳಂತಿದ್ದ ಆರು ಮಂದಿ ಊರಿಗೆ ಹೊರಟ ಮೇಲೆ ನಿಶ್ಚಿತದಿನ ಪ್ರದರ್ಶನ ಆರಂಭಿಸುವ ಮಾತು ಹಿಂದುಳಿಯಿತು. ಪ್ರವಾಸದಿಂದ ಕೀರ್ತಿಯವರಿಗೆ ಆಯಾಸವಾಗಿದೆ. ಪ್ರದರ್ಶನ

ವನ್ನು ಎರಡು ವಾರ ಮುಂದಕ್ಕೆ ನಿಶ್ಚಯಿಸಲಾಗಿದೆ' ಎಂದು ಪತ್ರಿಕೆಗಳಿಗೆ ಸುದ್ದಿ ಕೊಟ್ಟು ಥಿಯೆಟರ್ ಮ್ಯಾನೇಜರವರನ್ನು ಕಾಣಲು ಹೋದರು. ಭಾಡಿಗೆಗೆ ಮುಂಗಡವಾಗಿ ಸಂದಾಯವಾಗಿದ್ದ ಹಣವನ್ನು ಎರಡು ವಾರಗಳ ನಂತರ ಲೆಕ್ಕಕ್ಕೆ ತೆಗೆದುಕೊಳ್ಳಲು ಥಿಯೇಟರ್ ಮ್ಯಾನೇಜರು ನಿರಾಕರಿಸಿದರು. ಜೀವಾನಂದಂ ಬಾಯಿ ಮುಚ್ಚಿಕೊಂಡು ಹದಿನೆಂಟೂವರೆ ಸಾವಿರ ರೂಪಾಯಿ ಕಕ್ಕಬೇಕಾಯಿತು.

ಮಂಡಳಿಯಲ್ಲಿ ಉಳಿದಿದ್ದ ಕಲಾವಿದರಿಂದಲೇ ಪ್ರದರ್ಶನಗಳನ್ನು ಕೊಡಲು ಕೀರ್ತಿ, ಜೀವಾನಂದಂ ನಿಶ್ಚಯಿಸಿದರು. ರಾಮನಾಥನ್ ಹೊರಟು ಹೋಗಿದ್ದುದರಿಂದ ಸುಧೇಂದು ಸಿನ್ಹನೇ ಮೃದಂಗವನ್ನೂ ನುಡಿಸಬೇಕಾಯಿತು. ಸ್ತ್ರೀ ಪಾತ್ರಗಳೆಲ್ಲಾ ಸೊಹಾನಿ ಸೋದರಿಯರು ನಿರ್ವಹಿಸಬೇಕಾಯಿತು. ಜಲಜಾಕ್ಷಿಯ ತೆರುವಾದ ಸ್ಥಾನದಲ್ಲಿ ಕುಂಜುಮಣಿ 'ಪಿನ್ ಪಾಟ್' ಹಾಡುವುದಕ್ಕೆ ಕೂಡಬೇಕಾಯಿತು.

ಎರಡು ವಾರಗಳ ತರುವಾಯ ಮಂಡಳಿಯಲ್ಲಿ ಉಳಿದಿದ್ದವರ ಸಹಾಯದಿಂದಲೇ ಕೀರ್ತಿ ಪ್ರದರ್ಶನಗಳನ್ನು ಆಲ್ಡ್‌ವಿಚ್ ಥಿಯೇಟರಿನಲ್ಲಿಯೇ ಆರಂಭಿಸಿದ. ಲಂಡನ್ನಿನ ಜನಕ್ಕೆ ಪ್ರದರ್ಶನಗಳು ಹಿಡಿಯಲಿಲ್ಲ. ವಿಮರ್ಶಕರು ಕೀರ್ತಿಯ ವೈಯಕ್ತಿಕ ಪ್ರತಿಭೆಯನ್ನು ಮೆಚ್ಚಿಕೊಂಡು ಮಂಡಳಿಯನ್ನು ತೀಕ್ಷ್ಣವಾಗಿ ಖಂಡಿಸಿದ್ದರು. 'ಬ್ರಿಟಿಷ್ ವೀಕ್ಲಿ' ಪತ್ರಿಕೆಯಲ್ಲಿ ಕೀರ್ತಿಯ ಪ್ರದರ್ಶನಗಳನ್ನು ವಿಮರ್ಶಿಸುತ್ತಾ ಲಾಲಾ ಹರದಯಾಳ್ ಅವರು

"ಉದಯಶಂಕರ್ ಅವರ ತರುವಾಯ ಲಂಡನ್ನಿಗೆ ಒಂದು ಮಂಡಳಿಯೊಂದಿಗೆ ಬಂದು ಪ್ರದರ್ಶನಗಳನ್ನು ಕೊಡುತ್ತಿರುವ ಕೀರ್ತಿಯವರು ವೈಯಕ್ತಿಕವಾಗಿ ಕುಶಲಿಗಳಾದ ಕಲಾವಿದರೆನ್ನುವುದರಲ್ಲಿ ಸಂದೇಹವಿಲ್ಲ. ಇವರ ಪ್ರಚಾರಕರು ಇವರನ್ನು ಪವಲೋವಾ, ಉದಯಶಂಕರ್, ನಿಜನ್ಸ್ಕಿ ಮೊದಲಾದ ಕಲಾವಿದರಿಗೆ ಹೋಲಿಸಿದ್ದಾರೆ. ನಾಟ್ಯಕಲೆಯಲ್ಲಿ ಇದೇ ಅಡಿಯಿಡುತ್ತಿರುವ ಕೀರ್ತಿಯವರೆಲ್ಲಿ; ಪವಲೋವಾ ಮೊದಲಾದ ಸಿದ್ಧ ಕಲಾವಿದರೆಲ್ಲಿ! ಈ ಬಗೆಯ ಅಳತೆ ಮೀರಿದ, ಅರ್ಥವಿಲ್ಲದ ಹೋಲಿಕೆ ಸತ್ಯದ ವಿಪರ್ಯಾಸ.

ಭಾರತದ ಸಾಂಸ್ಕೃತಿಕ ರಾಯಭಾರಿಗಳೆಂದು ಹೇಳಿಕೊಂಡು ಇಲ್ಲಿಗೆ

ಬರುವವರು ತಮ್ಮ ಹೊಣೆಗಾರಿಕೆಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು. ಭಾರತದ ಕಲೆಗಳ ಬಗ್ಗೆ ಖಚಿತ ಜ್ಞಾನವುಳ್ಳ ಕೆಲವರಾದರೂ ಇಲ್ಲಿದ್ದಾರೆ. ಭಾರತದ ಸಾಂಸ್ಕೃತಿಕ ರಾಯಭಾರಿಗಳ ಮಟ್ಟ, ಯೋಗ್ಯತೆ, ಪ್ರತಿಭೆಯನ್ನಳೆಯಲು ಅವರು ಸಮರ್ಥರಾಗಿದ್ದಾರೆ. ಅವರ ಕಣ್ಣಿಗೆ ಮಣ್ಣೆರಚಲು ಸಾಧ್ಯವಿಲ್ಲ. ಅಂಥವರಿಗೆ ಕೀರ್ತಿಯವರ ಪ್ರದರ್ಶನಗಳು ತೃಪ್ತಿಯನ್ನಿತ್ತವೇ ?—ಭಾರತದ ಕಲಾವೈವಿಧ್ಯವನ್ನೂ ವೈಶಿಷ್ಟ್ಯವನ್ನೂ ಕೀರ್ತಿಯವರ ನಾಟ್ಯ ಪ್ರದರ್ಶನ ಪ್ರತಿಬಿಂಬಿಸಿತೇ ? ಖಂಡಿತವಾಗಿಯೂ ಇಲ್ಲ. ನಾವು ಆಲ್ಡ್‌ವಿಚ್ ಥಿಯೇಟರಿನಲ್ಲಿ ಈ ವಾರ ನೋಡಿದುದು ಭಾರತದ ಅಣಕ – ಭಾರತ ಸಂಸ್ಕೃತಿಯ ವಿಡಂಬನ. ಈ ಕೆಲಸವನ್ನು ಕೀರ್ತಿಯವರಿಗಿಂತಲೂ ಚೆನ್ನಾಗಿ ಜೆವರ್ಲಿ ನಿಕ್ಲಾಸ್, ಮಿಸ್ ಮೇಯೊ, ವಿಲಿಯಂ ಆರ್ಚರ್ ಮಾಡಿರುವಾಗ ಕೀರ್ತಿಯವರೇಕೆ ವೃಥಾ ಶ್ರಮ ತೆಗೆದುಕೊಂಡು ಲಂಡನ್ ವರೆಗೆ ಬರಬೇಕಾಗಿತ್ತು.

ಕೀರ್ತಿಯವರಲ್ಲಿ ವೈಯಕ್ತಿಕವಾಗಿ ಸ್ವಲ್ಪ ಪ್ರತಿಭೆಯಿದೆ. ದಿವ್ಯವಾದ ಆಕಾರವಿದೆ. ಅವರ ದೇಹದ ಮಾಂಸ ಖಂಡಗಳು ಲೀಲಾಜಾಲವಾಗಿ ಸಂಚರಿಸಬಲ್ಲವು. ನಾಟ್ಯಕ್ಕೇ ಅಳವಡಿಸಿದ ಮೈಕಟ್ಟು ಕೀರ್ತಿಯವರದು ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ಆದರೆ ಅವರಿಗೆ ದೊರೆತಿರುವ ಶಿಕ್ಷಣ ಸಾಲದು. ಭಾರತೀಯ ಕಲೆಗಳಬಗ್ಗೆ ಅವರ ಕಲ್ಪನೆ ತೀರ ಕ್ಷುಲ್ಲಕವಾದುದು. ಇನ್ನೂ ನಾಲ್ಕಾರು ವರ್ಷ ಕೀರ್ತಿಯವರು ಶ್ರಮಪಟ್ಟು ನಾಟ್ಯಕಲೆಯನ್ನು ಅಭ್ಯಸಿಸಿಕೊಂಡು ಇದಕ್ಕೂ ಒಳ್ಳೆಯ ಮಂಡಳಿಯೊಂದಿಗೆ ಲಂಡನ್ನಿಗೆ ಬರಬೇಕೆಂದು ನಾನು ಸೂಚಿಸದಿರಲಾರೆ."

ಲಾಲಾ ಹರದಯಾಳರ ಕಟು ವಿಮರ್ಶೆ ಕೀರ್ತಿಯ ಉತ್ಸಾಹವನ್ನು ಮೊಟಕು ಮಾಡಿತು. ಹರದಯಾಳರನ್ನು ಅವಾಚ್ಯ ಶಬ್ದಗಳಿಂದ ಬಯ್ದರೂ ಕೀರ್ತಿಯ ಉತ್ಸಾಹ ಜಾಗೃತವಾಗಲಿಲ್ಲ.

ಒಂದೇ ವಾರದಲ್ಲಿ ಲಂಡನ್ ಸೀಸನ್ ಮುಗಿದು ಹೋಯಿತು. ಮಂಡಳಿಯ ಎಲ್ಲ ಕಲಾವಿದರನ್ನೂ ಊರಿಗೆ ಕಳುಹಿಸಿಕೊಟ್ಟು ಕೀರ್ತಿ, ಜೀವಾನಂದಂ, ಕರುಣಾ, ಡಿಕ್ಕಿ ಲಂಡನ್ನಿನಲ್ಲಿಯೇ ಉಳಿದುಕೊಂಡರು.

ಎರಡು ತಿಂಗಳು ಲಂಡನ್ನಿನ ವಾಸ ಮಾಡಿ ಕೀರ್ತಿ ಮತ್ತು ಸಂಗಡಿಗರು ಊರಿಗೆ ಹಿಂದಿರುಗಿದರು.

ಲಂಡನ್ನಿನಲ್ಲಿ ನಡೆದ ಪ್ರಕರಣ ಬಯಲಿಗೆ ಬಾರದಂತೆ ಜೀವಾನಂದಂ ಸ್ವಾಗತ ಸಭೆಗಳನ್ನೂ, ಅಟ್ ಹೋಂಗಳನ್ನೂ, ಟೀಗಳನ್ನೂ ಏರ್ಪಡಿಸಿದರು.

ವಿಯನ್ನಾ ಉತ್ಸವದ ಸಲುವಾಗಿ ಮಾಡಿದ ಸಾಲ ಹಾಗೆಯೇ ಕುಳಿತಿತ್ತು. ಲೆಕ್ಕ ನೋಡಿದಾಗ ಕೈಯಲ್ಲಿ ಉಳಿದಿದ್ದುದು ಎಂಭತ್ತೇ ಸಾವಿರ ರೂಪಾಯಿ. ಪ್ರತಿಯೊಂದು ಬಾಬಿಗೂ ಸರಿಯಾದ ಉತ್ತರವಿತ್ತು ಜೀವಾನಂದಂ ಪಾರಾದರು. ಕೀರ್ತಿ ಸಾಲಕ್ಕೆ ಐವತ್ತು ಸಾವಿರ ರೂಪಾಯಿ ತೆತ್ತು ತಾತ್ಕಾಲಿಕ ಶಾಂತಿಯನ್ನು ಪಡೆದುಕೊಂಡ.

ಐರೋಪ್ಯ ಪ್ರವಾಸ ಮುಗಿಸಿಕೊಂಡು ಬಂದ ಈ ತರುಣದಲ್ಲಿಯೇ ಭಾರತದಲ್ಲಿ ಪ್ರದರ್ಶನಗಳನ್ನು ಕೊಟ್ಟರೆ ಒಳ್ಳೆಯ ಸಂಪಾದನೆಯಾಗುವುದೆಂದು ಜೀವಾನಂದಂ ಸಲಹೆಯಿತ್ತರು. ಕೀರ್ತಿ ಮತ್ತೆ ಮಂಡಳಿಯನ್ನು ಕೂಡಿಸಿ, ಪ್ರದರ್ಶನ ಸಿದ್ಧತೆ ಮಾಡಿಕೊಳ್ಳಲಾರಂಭಿಸಿದ.

## ೧೨

ಕೀರ್ತಿಯ ಬಳಗ ಅಳತೆಮೀರಿ ಬೆಳೆಯಿತು. ಮಿಲ್ರಿ ಸ್ನೇಹಿತರು, ಇತರ ಸ್ನೇಹಿತರು ಹೆಚ್ಚಾದರು. ಮುಂಬಯಿ, ಮದರಾಸು, ಲಾಹೋರ್, ಲಕ್ನೋಗಳಿಂದ ಶಿಷ್ಯ-ಶಿಷ್ಯೆಯರು ಬರಲಾರಂಭಿಸಿದರು. ಕೀರ್ತಿಯ ಮನೆಯೇ ಕಲಾಶಾಲೆಯ 'ವಿದ್ಯಾರ್ಥಿ ಭವನ'ವಾಯಿತು. ಕರುಣೆಯೇ ಅದರ ಸುಪರಿಂಟೆಂಡೆಂಟ್ ಆದಳು.

ರಾಮನ್ ನಂಬೂದ್ರಿಯವರ ಸ್ಥಳದಲ್ಲಿ ಕಥಾಕಳಿ ಕಲಿಸುವುದಕ್ಕೆ ಕೃಷ್ಣ ಕುಟ್ಟಿ ಬಂದರು. ಅವರೇ ಕರೆದುಕೊಂಡು ಬಂದ ಮೀನಾಂಬಾಳ 'ಪಿನ್ ಪಾಟ್' ಹಾಡುಗಾತಿಯಾದಳು. ಕೊಳಲು ವಿದ್ವಾನ್ ಗೋಪಾಲನ ಸ್ಥಳಕ್ಕೆ ಸೀನಯ್ಯ ಬಂದ; ರಾಮನಾಥನ ಸ್ಥಾನ ನಟರಾಜ ಪಿಳ್ಳೆಗೆ ಸಿಕ್ಕಿತು.

ಭಾಗ್ಯಲಕ್ಷ್ಮಿಯ ನಿಷ್ಕ್ರಮಣದಿಂದಾದ ದೊಡ್ಡ ಕೊರತೆ ತುಂಬಿರಲಿಲ್ಲ. ನಾಟ್ಯಕ್ಕೆ ಸರಿಯಾದ ಜತೆಗಾತಿ ಸಿಕ್ಕಲಿಲ್ಲವೆಂದು ಕೀರ್ತಿ ಪ್ರದರ್ಶನವನ್ನು ಮುಂದೂಡುತ್ತ ಬಂದ.

"ಪ್ರದರ್ಶನ ಬೇಗ ಕೊಡಬೇಕು ಕೀರ್ತಿಯವರೇ. ಸ್ಮಿತ್ ಹಣ ಕೇಳುತ್ತಿದ್ದಾನೆ."

"ಅವರ ಹಣ ಕೊಟ್ಟಿವಲ್ಲ."

"ಎಷ್ಟು ಕೊಟ್ಟಿರುವುದು – ಅರ್ಧ ಭಾಗ. ಇನ್ನೂ ಅರ್ಧ ಬಾಕಿ ಉಳಿದಿದೆ. ನಾವು ಅವರ ಹಣ ಬೇಗ ಕೊಟ್ಟರೆ ಬಡ್ಡಿಯಲ್ಲಿ ಸ್ವಲ್ಪ ವಿಣಯಿತಿ ಪಡೆಯಬಹುದು."

"ಜತೆಗಾತಿಯಿಲ್ಲದೆ ಪ್ರದರ್ಶನ ಹೇಗೆ ಕೊಡಲಿ ಜೀವಾನಂದಂ ಅವರೇ."

"ಸದ್ಯಕ್ಕೆ ಮದರಾಸಿನಿಂದ ಯಾರನ್ನಾದರೂ ಕರೆಸಿಕೊಂಡರಾಯಿತು."

"ಯಾರಿದ್ದಾರೆ?"

"ವನಜಾ ನಾಟ್ಯ ನೀವು ನೋಡಿದ್ದೀರಿ. ಅವಳನ್ನು ನಾನು ಕರೆಸಬಲ್ಲೆ."

ವನಜಾ ಜತೆಗಾತಿಯಾಗಿ ಬಂದರೆ ತನ್ನ ಪ್ರಭಾವ ಕುಂದುವುದೆನ್ನುವುದನ್ನು ಕೀರ್ತಿ ಚೆನ್ನಾಗಿ ಬಲ್ಲ.

"ಅವಳು ಬೇಡಿ. ನನ್ನಲ್ಲಿ ಪಾಠಕ್ಕೆ ಚಂದ್ರಮುಖಿ ಎಂಬ ಹುಡುಗಿ ಬರುತ್ತಿದೆ. ಅವಳಿಗೇ ಶಿಕ್ಷಣ ಕೊಡುತ್ತೇನೆ."

"ನಿಮಗೆ ಹೇಗೆ ಸೂಕ್ತವೋ ಹಾಗೆ ಮಾಡಿ– ಆದರೆ ಕಾಲ ವಿಳಂಬ ಮಾಡಬಾರದು."

ಎಂದು ಎಚ್ಚರಿಕೆಯಿತ್ತರು.

ಕೀರ್ತಿಗೆ ರಿಹರ್ಸಲ್‌ಗಳಿಗೆ ಕಾಲ ದೊರೆಯುವುದೇ ದುರ್ಲಭವಾಗುತ್ತ ಬಂದಿತು. ಮಿಲ್ಟ್ರಿ ಗೆಳೆಯರು ಅವನನ್ನು ಎಲ್ಲಿಗಾದರೂ ಹೊತ್ತುಕೊಂಡು

ಹೋಗುತ್ತಿದ್ದರು. ರಾತ್ರಿ ಮನೆಗೆ ಅವನನ್ನು ಯಾರಾದರೂ ಹೊತ್ತೇ ತಂದು ಹಾಕಬೇಕಾಗಿತ್ತು. ಕೀರ್ತಿಗೆ ಮಿಲ್ಟ್ರಿ ಗೆಳೆಯರ ಸಂಗ ಬಿಡಿಸುವುದು ಜೀವಾನಂದಂ ಅವರಿಗೂ ಸಾಧ್ಯವಾಗಲಿಲ್ಲ.

ಭಾಗ್ಯಲಕ್ಷ್ಮಿಯ ಸ್ಥಾನದಲ್ಲಿ ಚಂದ್ರಮುಖಿಯನ್ನು ನಿಯೋಜಿಸುವ ಕೆಲಸದಲ್ಲಿ ಕೀರ್ತಿ ಉದ್ಯುಕ್ತನಾದ. ಚಂದ್ರ ಕೆಲವೇ ದಿನಗಳಲ್ಲಿ ಕೀರ್ತಿಯ ಅಚ್ಚುಮೆಚ್ಚಿನ ಶಿಷ್ಯಳಾದಳು. ಕೀರ್ತಿ ನಿಲ್ಲು ಎಂದರೆ ನಿಲ್ಲುತ್ತಿದ್ದಳು, ಕೂಡು ಎಂದರೆ ಕೂಡುತ್ತಿದ್ದಳು. ಅವನು ಹೇಳಿಕೊಟ್ಟುದನ್ನು ಗಿಣಿಪಾಠ ಒಪ್ಪಿಸುತ್ತಿದ್ದಳು. ಎಲ್ಲಿಯೂ ಕೀರ್ತಿಯನ್ನತಿಕ್ರಮಿಸಿ ತನ್ನ ಬುದ್ಧಿ ಪ್ರದರ್ಶನ ಮಾಡುವ ಗೋಜಿಗೇ ಚಂದ್ರ ಹೋಗುತ್ತಿರಲಿಲ್ಲ– ಹೋಗುವುದು ಅವಳಿಗೆ ಸಾಧ್ಯವೂ ಇರಲಿಲ್ಲ.

ಎರಡು ತಿಂಗಳಲ್ಲಿ ಹಾಗೂ ಹೀಗೂ ಪ್ರದರ್ಶನ ಕುದುರಿತು. ಬಿ. ಆರ್. ವಿ, ಥಿಯೇಟರಿನಲ್ಲಿ ಒಂದು ಪ್ರದರ್ಶನ; ಪುಟ್ಟಣ್ಣಶೆಟ್ಟರ ಟೌನ್ ಹಾಲಿನಲ್ಲಿ ಒಂದು ಪ್ರದರ್ಶನ ಎಂದು ನಿಶ್ಚಯವಾಯಿತು.

ಬಿ. ಆರ್. ವಿ. ಥಿಯೇಟರ್ ತುಂಬಿ ಹೋಯಿತು. ಟೌನ್ ಹಾಲ್ ಮಾತ್ರ ಅರ್ಧ ತುಂಬಿತ್ತು. ಪ್ರದರ್ಶನಗಳನ್ನು ನೋಡಿ ಸಾಮಾನ್ಯ ಜನ ಸಂತೃಪ್ತರಾದರು; ಪತ್ರಿಕಾಕರ್ತರು ಕೀರ್ತಿಯನ್ನು ಮುಕ್ತಕಂಠದಿಂದ ಹೊಗಳಿದರು; ಒಬ್ಬಿಬ್ಬರು ಮಾತ್ರ 'ಇದು ಶುದ್ಧ ಬಯಲಾಟ' ಎಂದರು. ಆದರೆ ಎಲ್ಲರೂ ಚಂದ್ರಮುಖಿಯ ಬಗ್ಗೆ ಅತೃಪ್ತಿಗೊಳಿಸಿದರು. 'ಕೀರ್ತಿಯಂಥ ಶ್ರೇಷ್ಠ ಕಲಾವಿದರು ಚಂದ್ರಮುಖಿಯಂಥ ಅಪಕ್ವ ಕಲಾವಿದೆಯನ್ನು ಜತೆಗಾತಿ ಮಾಡಿಕೊಳ್ಳಬಾರದಾಗಿತ್ತು' ಎಂದು ಲಲಿತ ಕಲೆಗೇ ಮೀಸಲಾಗಿದ್ದ 'ಕಲಾವಿದ' ಪತ್ರಿಕೆ ಬರೆಯಿತು.

ಚಂದ್ರಮುಖಿಯ ಸ್ಥಳಕ್ಕೆ ಯಾರನ್ನು ಹುಡುಕುವುದು ಎಂದು ಕೀರ್ತಿ ಯೋಚಿಸುತ್ತಿರುವಲ್ಲಿ ಕಲ್ಪನಾ ಕೀರ್ತಿಯ ಕಲಾಶಾಲೆ ಸೇರಲು ಬಂದಳು.

ಕಲ್ಪನೆಗೆ ಅಲ್ಪಸ್ವಲ್ಪ 'ಕಥಕ್' ನಾಟ್ಯದ ಪರಿಚಯವಿದ್ದುದರಿಂದ ಅವಳಿಗೇ ವಿಶೇಷ ಶಿಕ್ಷಣ ಕೊಟ್ಟರೆ ಉತ್ತಮ 'ನಾಟ್ಯ ಜತೆಗಾತಿ' ಯಾಗಬಹು

ದೆಂದು ಕೀರ್ತಿ ಯೋಚಿಸಿದ; ಜೀವಾನಂದಂ ಮನಸ್ಸಿನಲ್ಲಿಯೂ ಅದೇ ವಿಚಾರ ಹೊಳೆದಿತ್ತು.

ಕೀರ್ತಿಯ ನಾಟ್ಯಶಾಲೆಯಲ್ಲಿ ಕಲ್ಪನೆಗೆ ಪ್ರಾಧಾನ್ಯ ದೊರೆಯಿತು. ಕೀರ್ತಿಯ ಸೂಚನೆಯಂತೆ ಕುಂಜುಮಣಿ ಶ್ರದ್ಧೆ ವಹಿಸಿ ಅವಳಿಗೆ ಪಾಠ ಹೇಳ ತೊಡಗಿದರು. ಯಾರು ರಿಹರ್ಸಲ್ ಮಾಡುತ್ತಿದ್ದರೂ ಬಂದು ನೋಡದಿದ್ದ ಕೀರ್ತಿ, ಕಲ್ಪನೆಯ ಪಾಠ ನಡೆಯುವಾಗ ಬಂದು ಕೂಡುತ್ತಿದ್ದ – ಸಲಹೆ ಸೂಚನೆಗಳನ್ನೂ ಕೊಡುತ್ತಿದ್ದ.

ಕೀರ್ತಿಯ ನಾಟ್ಯಶಾಲೆಯಲ್ಲಿಯೇ ಕಲ್ಪನೆಗೆ ಕ್ಯಾಪ್ಟನ್ ವಿಜಯನ ಪರಿಚಯವಾಯಿತು.

---

# ೨. ವಸುಂಧರಾ

## ೧

ಹೃದ್ರೋಗಗಳ ವಿಶೇಷಜ್ಞರಾದ ( Specialist ) ಡಾ. ಶೇಷಗಿರಿ ರಾಯರಿದ್ದುದು ಫ್ರೇಸರ್ ಟೌನಿನಲ್ಲಿ. ರಾಯರ ಖ್ಯಾತಿ ಬೆಂಗಳೂರಿನಲ್ಲಿ ಮಾತ್ರವಲ್ಲದೆ ದೇಶ ವಿದೇಶಗಳಲ್ಲಿಯೂ ಹರಡಿತ್ತು. ಅವರಲ್ಲಿ ಚಿಕಿತ್ಸೆ ಪಡೆಯಲು ಭಾರತದ ಎಲ್ಲಾ ಭಾಗಗಳಿಂದ ಜನ ಬರುತ್ತಿದ್ದರು. ಹೈದರಾಬಾದಿನ ನವಾಬರು, ಮದರಾಸಿನ ಚೆಟ್ಟಿಯಾರರು ರಾಯರನ್ನು ಬಿಟ್ಟು ಬೇರೆ ಡಾಕ್ಟರನ್ನೇ ಅರಿಯರು.

ರಾಯರು ನೋಡುವುದಕ್ಕೇನಂಥ ದೃಢಗಾತ್ರ ಆಳಲ್ಲ. ಐದಡಿ ಎರಡಂಗುಲ ಎತ್ತರ, ಕಂದು ಕೆಂಪು ಬಣ್ಣ. ಬಕ್ಕ ತಲೆ. ಅವರು ಸದಾ ಧರಿಸುತ್ತಿದ್ದುದು ಸಾದಾ ಟಸ್ಸರ್ ಸೂಟು. ವೇಸ್ಟ ಕೋಟಿನ ಕಿಸೆಯಲ್ಲಿ ಎರಡು ಥರ್ಮಾಮೀಟರುಗಳು, ಒಂದು ಷೀಪರ್ ಪೆನ್. ಕುತ್ತಿಗೆಗೆ ಅಂಟಿಸಿದಂತೆ ಸ್ಟೆತಾಸ್ಕೋಪ. ರಾಯರ ಮೂಗಿನ ಮೇಲೆ ಕಟ್ಟಿಲ್ಲದ ಚೌಕನೆಯ ಕನ್ನಡಕ.

ಡಾ. ಶೇಷಗಿರಿರಾಯರನ್ನೊಮ್ಮೆ ನೋಡಿದವರು ಅವರ ಖ್ಯಾತಿಯನ್ನೂ ವೈದ್ಯಕೀಯ ಪ್ರಾವೀಣ್ಯವನ್ನೂ ನಂಬುವುದು ಕಷ್ಟವಾಗಿತ್ತು. ಆದರೆ ಒಂದೆರಡು ನಿಮಿಷ ಅವರಲ್ಲಿ ಮಾತನಾಡುವಲ್ಲಿ ವ್ಯಕ್ತಿಯ ಅಂತರ್ಗತ ಹಿರಿಮೆ ತಾನೇ ತಾನಾಗಿ ಮನಸ್ಸಿಗೆ ತಟ್ಟುತ್ತಿತ್ತು. ಮಿತಭಾಷಿಗಳಾದ ಅವರ ಬಾಯಲ್ಲಿ ಬರುತ್ತಿದ್ದ ಒಂದೊಂದು ಮಾತಿನಲ್ಲಿಯೂ ಅಪಾರವಾದ ಪಾಂಡಿತ್ಯ, ಅನುಭವ, ಮಾನವಪ್ರೇಮ ಮಿಡಿಯುತ್ತಿತ್ತು.

ವಿಲಾಯತಿಗೊಮ್ಮೆ ಹೋಗಿ ವೈದ್ಯಕೀಯ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಎಂ. ಡಿ., ಎಲ್. ಆರ್. ಸಿ. ಪಿ. ಪ್ರಶಸ್ತಿಗಳನ್ನು ಪಡೆದುಕೊಂಡು ಯಾವಜ್ಜೀವವೂ ಅವುಗಳ ಆಧಾರದ ಮೇಲೆ ತಮ್ಮ ಪ್ರಪಂಚ ಸಾಗಿಸುವ ಡಾಕ್ಟರುಗಳ ವರ್ಗಕ್ಕೆ ಶೇಷಗಿರಿರಾಯರು ಸೇರಿರಲಿಲ್ಲ. ಐರೋಪ್ಯರ ವೈದ್ಯ ಕೀಯ ಪ್ರಗತಿಯನ್ನು ನಲವತ್ತು ವರ್ಷಕಾಲ ಅವರು ಗಮನಿಸಿದ್ದರು. ವಿಶ್ವ ವಿಖ್ಯಾತರಾದ ಡಾ. ಇವಾನ್ ಬ್ಲಾಕ್, ಡಾ. ಅಲೆಕ್ಸಿಸ್ ಕ್ಯಾರೆಲ್, ಡಾ. ಕೆನೆತ್ ವಾಕರ್ ಮೊದಲಾದ ಡಾಕ್ಟರುಗಳ ಜತೆ ಕೆಲಸ ಮಾಡಿ ವಿಶೇಷ ಅನುಭವ ಪಡೆದುಕೊಂಡಿದ್ದರು. ವರ್ಷ, ಎರಡು ವರ್ಷಕ್ಕೊಮ್ಮೆ ವಿಲಾಯ ತಿಗೆ ಹೋಗಿ, ಅಲ್ಲಿ ನಡೆದಿದ್ದ ಹೊಸ ಪ್ರಯೋಗಗಳನ್ನು ನೋಡಿ, ಅವುಗಳ ನಿರ್ಮಾಪಕರ ಜತೆ ವಿಚಾರ ವಿನಿಮಯ ಮಾಡಿಕೊಂಡು ಬಂದ ಹೊರತೂ ಶೇಷಗಿರಿರಾಯರಿಗೆ ಸಮಾಧಾನವಿರುತ್ತಿರಲಿಲ್ಲ. ಇಳಿ ವಯಸ್ಸಿನಲ್ಲಿಯೂ ತಪ್ಪದೆ ವಿಲಾಯತಿ ಯಾತ್ರೆ ಮಾಡುತ್ತಿದ್ದ ರಾಯರನ್ನು ಗೆಳೆಯರು

"ಈ ವಯಸ್ಸಿನಲ್ಲಿಯೂ ಏಕೆ ವಿಲಾಯತಿ ಯಾತ್ರೆ ಮಾಡುತ್ತೀರಿ. ವಿದೇಶಗಳಿಂದ ನೀವು ಕಲಿಯಬೇಕಾದದ್ದು ಏನಿದೆ!"

ಎಂದು ಪ್ರಶ್ನಿಸಿದರೆ ರಾಯರು ನಸುನಕ್ಕು

"ಗಡಿಯಾರದಂಥ ಒಂದು ಸಣ್ಣ ಯಂತ್ರದ ರಹಸ್ಯವನ್ನರಿಯಬೇಕಾ ದರೇ ಮನುಷ್ಯನಿಗೆ ಒಂದು ಜೀವಮಾನ ಬೇಕಾಗುತ್ತದೆ. ಮಾನವ ದೇಹ ವಿಶ್ವಕರ್ತನ ಪ್ರಯೋಗ ಶಾಲೆಯಿಂದ ( Laboratory ) ಬಂದಿರುವ ಅನ್ಯಾ ದೃಶ ಯಂತ್ರ. ಮಾನವ ಎಷ್ಟು ಪ್ರಯತ್ನ ಮಾಡಿದರೆ ತಾನೆ ಅದರ ಪೂರ್ಣ ರಹಸ್ಯ ಅರ್ಥ ಮಾಡಿಕೊಳ್ಳಲು ಸಾಧ್ಯ. ಪಾಶ್ಚಾತ್ಯರು ಪರಮ ಸಾಧಕರು ಪ್ರಯೋಗ ಪ್ರಿಯರು, ಸತ್ಯಾನ್ವೇಷಿಗಳು. ವಿಜ್ಞಾನದಲ್ಲಿ – ಅದರಲ್ಲಿಯೂ ವೈದ್ಯಕೀಯ ವಿಜ್ಞಾನದಲ್ಲಿ ಅವರು ಮಾಡಿರುವ ಪ್ರಯೋಗಗಳಿಂದ ಮಾನವ ಸಮಾಜದ ಉದ್ಧಾರವಾಗಿದೆ. ನನ್ನ ಪರಮ ಮಿತ್ರರು ಡಾ. ಅಲೆಕ್ಸಿಸ್ ಕ್ಯಾರೆಲ್ ಮಾಡಿರುವ ಶೋಧವನ್ನು ನೋಡಿ. ರೋಗಗ್ರಸ್ತ ಶ್ವಾಸಕೋಶ ವನ್ನು ಶಸ್ತ್ರಕ್ರಿಯೆಯಿಂದ ತೆಗೆದು, ಅದರ ಸ್ಥಳದಲ್ಲಿ ಕೃತಕ ಶ್ವಾಸಕೋಶ ವನ್ನಿಟ್ಟು ಅವರು ಮನುಷ್ಯನನ್ನು ಬದುಕಿಸುತ್ತಾರೆ. ಇಂಥವರಿಂದ ನಾವು ಕಲಿಯಬೇಕಾದುದು ಬಹಳ ಇದೆ. ಕಲಿಕೆಗೆ ಕೊನೆಯೆಲ್ಲಿ – ವಿದ್ಯೆಗೆ ಆದಿ

ಗೊತ್ತೇ ವಿನಾ ಅಂತ್ಯ ಗೊತ್ತಿಲ್ಲ."

ಎಂದು ಸಮಾಧಾನ ಹೇಳುತ್ತಿದ್ದರು.

ಡಾ. ಶೇಷಗಿರಿರಾಯರಿಗೆ ವಯಸ್ಸಾಗಿದ್ದುದರಿಂದ ಅವರು ರೋಗ ನಿಧಾನ ಮಾಡಿ ಚಿಕಿತ್ಸಾ ಭಾಗವನ್ನು ಮಗ ಡಾ. ಶ್ರೀಧರನಿಗೆ ಒಪ್ಪಿಸುತ್ತಿದ್ದರು. ಅವರ ಮನೆಯ ಒಳ ಆವರಣದಲ್ಲಿ ಪ್ರತ್ಯೇಕವಾಗಿದ್ದ ಕಟ್ಟಡವೇ ಅವರ ಚಿಕಿತ್ಸಾಲಯವಾಗಿತ್ತು.

ತಮಗೆ ದೊರೆತಿದ್ದ ವಿರಾಮವನ್ನು ಡಾ. ಶೇಷಗಿರಿರಾಯರಷ್ಟು ಚೆನ್ನಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಇಂಗ್ಲಿಷ್, ಜರ್ಮನ್, ಫ್ರೆಂಚ ಭಾಷೆಗಳಲ್ಲಿ ಪ್ರಕಟವಾಗುತ್ತಿದ್ದ ವೈದ್ಯಕೀಯ ಪತ್ರಿಕೆಗಳು, ಗ್ರಂಥಗಳನ್ನಲ್ಲದೆ ವಿವಿಧ ವಿಷಯಗಳ ಮೇಲಣ ಪತ್ರಿಕೆ, ಗ್ರಂಥಗಳನ್ನು ತರಿಸಿಕೊಂಡು ಅಹರ್ನಿಶಿ ಅಭ್ಯಾಸ ಮಾಡುತ್ತಿದ್ದರು. ಡಾಕ್ಟರಿಗೆ ಸಾಕಷ್ಟು ಸಂಸ್ಕೃತ ಪರಿಚಯವಿದ್ದುದರಿಂದ ವೇದ, ವೇದಾಂಗ, ಪುರಾಣಗಳನ್ನಲ್ಲದೆ ಚರಕ, ಸುಶ್ರುತ, ವಾತ್ಸ್ಯಾಯನ ಮೊದಲಾದ ಭಾರತೀಯ ವಿಜ್ಞಾನಿಗಳ ಕೃತಿಗಳನ್ನೂ ಆಳವಾಗಿ ಅಭ್ಯಾಸ ಮಾಡಿಕೊಂಡಿದ್ದರು. ಡಾಕ್ಟರ ಪುಸ್ತಕ ಭಾಂಡಾರ ಅವರ ಹಿರಿಯ ಆಸ್ತಿಯಾಗಿತ್ತು.

ಡಾಕ್ಟರ ಅಭಿರುಚಿ ಕೇವಲ ವೈದ್ಯವೃತ್ತಿಗೇ ಅಡಕವಾಗಿರಲಿಲ್ಲ. ಚಿತ್ರಕಲೆ, ಸಂಗೀತ, ಶಿಲ್ಪ, ವಾಸ್ತುಶಿಲ್ಪ, ನೃತ್ಯಕಲೆಗಳ ಬಗ್ಗೆ ಅವರಿಗೆ ಅಪಾರ ವಿಶ್ವಾಸವಿದ್ದಿತು. ಅವರ ಪುಸ್ತಕ ಭಂಡಾರದಷ್ಟೇ ಸಂಪದ್ಯುಕ್ತವಾಗಿದ್ದುದು ಅವರ ಕಲಾಸಂಗ್ರಹ ರಜಪೂತ, ಮೊಘಲ, ಚೀಣ, ಜಪಾನ್, ಇಟಾಲಿಯನ್ ಚಿತ್ರಗಳು, ಗ್ರೀಕ್ ಶಿಲ್ಪಗಳ ಪ್ರತಿಕೃತಿಗಳು, ಚೀಣ, ಟಿಬೆಟ್‌ಗಳ ತೂಗುಚಿತ್ರಗಳು ಅವರ ಸಂಗ್ರಹಕ್ಕೆ ಅಪೂರ್ವ ಶೋಭೆಯನ್ನಿತ್ತಿದ್ದವು.

ವೈದ್ಯನಾದವನು ಕೇವಲ ತನ್ನ ವೃತ್ತಿಯಲ್ಲಿಯೇ ನಿಮಗ್ನನಾಗದೆ ಲೋಕದ ಎಲ್ಲ ಚಟುವಟಿಕೆಗಳಲ್ಲಿಯೂ ಆಸಕ್ತಿ ವಹಿಸಬೇಕೆಂಬುದು ಡಾಕ್ಟರ ಅಭಿಮತವಾಗಿತ್ತು. ಈ ದೃಷ್ಟಿಯಿಂದಲೇ ಅವರು ಲಲಿತ ಕಲೆಗಳನ್ನು ವಿಶೇಷವಾಗಿ ಆದರಿಸುತ್ತಿದ್ದರು. ನಗರದಲ್ಲಿ ಒಳ್ಳೆಯ ಸಂಗೀತ, ನೃತ್ಯ, ಚಿತ್ರಕಲಾ ಪ್ರದರ್ಶನ ನಡೆದರೆ ಸಂಸಾರ ಸಮೇತರಾಗಿ ಮೊದಲು ಹೋಗುತ್ತಿದ್ದವರು ಡಾ. ಶೇಷಗಿರಿರಾಯರು.

ಡಾಕ್ಟರ ಮಗ ಶ್ರೀಧರನಿಗೆ ಚಿತ್ರಕಲೆಯಲ್ಲಿ ಸ್ವಲ್ಪ ಅಭಿರುಚಿಯಿತ್ತು. ಕಾಲೇಜಿನ ಶರೀರಶಾಸ್ತ್ರ ಪ್ರೊಫೆಸರರು ಶ್ರೀಧರನ ನೋಟ್ಸುಗಳಲ್ಲಿನ ರೇಖಾ ಚಿತ್ರಗಳನ್ನು ಮೆಚ್ಚಿಕೊಂಡು 'ಇದನ್ನು ಕೂಡಿಸಿಕೊಳ್ಳಿ' ಎಂದು ಪ್ರೋತ್ಸಾಹ ವಿತ್ತಿದ್ದರು. ಕಲಾಶಾಲೆಗೆ ಸೇರಿ ಚಿತ್ರಕಲೆಯನ್ನು ಸಶಾಸ್ತ್ರೀಯವಾಗಿ ಅಭ್ಯಾಸ ಮಾಡುವುದಕ್ಕೆ ಶ್ರೀಧರನಿಗೆ ಎಷ್ಟೇ ಮನಸ್ಸಿದ್ದರೂ ಪುರಸತ್ತಾಗುತ್ತಿರಲಿಲ್ಲ.

ಹಿರಿಯ ಮಗಳು ವಸುಂಧರಾ ಸಂಗೀತಜ್ಞಳಾಗಬೇಕೆನ್ನುವುದು ಡಾಕ್ಟರ ಆಕಾಂಕ್ಷೆಯಾಗಿತ್ತು. ಅವಳು ಹೈಸ್ಕೂಲು ಸೇರಿದೊಡನೆಯೇ ಮನೆಗೇ ಬಂದು ಪಾಠ ಹೇಳಲು ಒಬ್ಬ ಗವಯಿಯನ್ನು ಗೊತ್ತುಮಾಡಿದರು, ಅವನ ಪಾಠ ಎರಡೇ ವರ್ಷಗಳಲ್ಲಿ ಮುಗಿದಂತಾಗಿತ್ತು. ಗುರುವಿಗಿಂತ ಶಿಷ್ಯಳೇ ಮುಂದೆ ಹೋಗಿದ್ದಳು. ಡಾಕ್ಟರು ತಮ್ಮ ಗೆಳೆಯರಲ್ಲಿ ಪ್ರಚಾರ ಮಾಡಿ ಔತ್ತರೇಯ ಸಂಗೀತದ ಘನವಿದ್ವಾಂಸರಾದ ಪಂಡಿತ ಶಾಮಕೃಷ್ಣ ಅಥಣೀಕರ ಅವರನ್ನು ಗೊತ್ತು ಮಾಡಿದರು.

ವಸುಂಧರೆಯ ಶಾರೀರ ನೂಲಿನಂತೆ ಹಿಂಜುತ್ತಿತ್ತು. ತಾನಗಳು, ಖಟ್ಕಗಳು ನಿರರ್ಗಳವಾಗಿ ಅವಳ ಬಾಯಲ್ಲಿ ನುಡಿಯುತ್ತಿದ್ದವು. ಚೀಸ್ ಹಾಡಲಿ, ಠುಮ್ರಿ ಹಾಡಲಿ, ದಾದ್ರ ಹಾಡಲಿ ಒಂದು ಬಗೆಯ ಪೂರ್ಣತೆ ಅವಳ ಹಾಡಿಕೆಯಲ್ಲಿ ಕಂಡುಬರುತ್ತಿತ್ತು.

ಡಾಕ್ಟರು ಆಸ್ಪತ್ರೆಯ ಡ್ಯೂಟಿ ಮುಗಿಸಿಕೊಂಡು ಮನೆಗೆ ಬಂದು ಒಂದೊಂದು ದಿನ ಮಗಳನ್ನು ಹಾಡಲು ಕೇಳುತ್ತಿದ್ದರು. ವಸುಂಧರೆಯ ಸಂಗೀತದಲ್ಲಿ ಮಗ್ನರಾಗಿ ತಮ್ಮ ಸಮಸ್ತ ಆಯಾಸ, ಬೇಸರಿಕೆಯನ್ನು ಮರೆತು ಬಿಡುತ್ತಿದ್ದರು.

ವಸುಂಧರಾ ಆಗಾಗ್ಗೆ ಊರಿನ ಕಲಾಮಹೋತ್ಸವಗಳಲ್ಲಿ ಭಾಗ ವಹಿಸುತ್ತಿದ್ದಳು. ಆಲ್ ಇಂಡಿಯಾ ರೇಡಿಯೋದಲ್ಲಿ ಹಾಡುತ್ತಿದ್ದಳು. ಅವಳ ಹಾಡಿಕೆಯ ಬಗ್ಗೆ ಪತ್ರಿಕೆಗಳಲ್ಲಿ ಆಗಾಗ್ಗೆ ಒಂದೊಂದು ಒಳ್ಳೆಯ ಮಾತು ಬರುತ್ತಿತ್ತು. ಡಾಕ್ಟರ ಹೃದಯ ಹಿಗ್ಗಿನಿಂದ ಅರಳುತ್ತಿತ್ತು. ಪತ್ರಿಕೆಗಳ ಮೆಚ್ಚುಗೆಯ ಮಾತುಗಳನ್ನು ಮಗಳಿಗೆ ತೋರಿಸುತ್ತ 'ಜನ ಹೊಗಳುತ್ತಾರೆಂದು ಸಂಗೀತ ಸಿದ್ಧಿ[illegible]ಯೆಂದು ತಿಳಿಯಬೇಡ ವಸೂ. ಸಂಗೀತ

ಒಂದು ಮಹಾ ಸಮುದ್ರ. ಅದನ್ನು ಆಳವಾಗಿ ಹೊಕ್ಕಷ್ಟು ಅಪರೂಪವಾದ ಮುತ್ತು ರತ್ನಗಳು ಸಿಕ್ಕುತ್ತವೆ. ಅಲ್ಪತೃಪ್ತನಾದವನಿಗೆ ಸಿಕ್ಕುವುದು ಕಪ್ಪೆಯ ಚಿಪ್ಪು, ಜೊಂಡು' ಎಂದು ಎಚ್ಚರಿಕೆ ಕೊಡುತ್ತಿದ್ದರು.

ಡಾಕ್ಟರವರ ವೈದ್ಯವಿದ್ಯಾಪ್ರಾವಿಣ್ಯ, ಕಲಾಭಿರುಚಿ, ಜ್ಞಾನಾಸಕ್ತಿ ಪ್ರಸಿದ್ಧವಾಗಿದ್ದಂತೆ ಅವರ ಔದಾರ್ಯ, ಜೀವಕಾರುಣ್ಯವೂ ಪ್ರಸಿದ್ಧವಾಗಿತ್ತು. ಒಂದು ವಿಚಿತ್ರ ಬಗೆಯ ಸಾಮ್ಯವಾದವನ್ನು ಡಾಕ್ಟರು ಆದರಿಸುತ್ತಿದ್ದರೆಂದು ಕಾಣುತ್ತದೆ. ಸಲಹೆ, ಚಿಕಿತ್ಸೆಗಳಿಗೆ ಶ್ರೀಮಂತರಿಂದ ಧಾರಾಳವಾಗಿ ಹಣ ಸೆಳೆದುಕೊಳ್ಳುತ್ತಿದ್ದರು. ಬಡವರಿಗೆ ಉಚಿತ ಚಿಕಿತ್ಸೆ ಮಾಡುತ್ತಿದ್ದುದಲ್ಲದೆ ಅವರ ಔಷಧೋಪಚಾರ, ಪ್ರಯಾಣದ ಖರ್ಚನ್ನೂ ತಾವೇ ಪೂರೈಸುತ್ತಿದ್ದರು.

ಡಾಕ್ಟರ್ ಶೇಷಗಿರಿರಾಯರು ಬೆಂಗಳೂರಿನಲ್ಲಿ ಬಂದು ನೆಲಸುವುದಕ್ಕೆ ಅವರ ಸ್ವಾಭಿಮಾನವೇ ಕಾರಣವಾಯಿತು. ಮುಂಬಯಿಯಲ್ಲಿ ವೈದ್ಯಶಿಕ್ಷಣ ಪಡೆದು, ಸರ್ಕಾರದ ಸ್ಕಾಲರ್‌ಷಿಪ್ ಸಹಾಯದಿಂದ ವಿಲಾಯಿತಿಗೆ ಹೋಗಿ ಅಲ್ಲಿ ಪ್ರಥಮ ವರ್ಗದಲ್ಲಿ ತೇರ್ಗಡೆ ಹೊಂದಿದ ಮೇಲೆ ಡಾಕ್ಟರು ಮುಂಬಯಿಯ ಪೆಟಿಟ್ ( Petit ) ಆಸ್ಪತ್ರೆಯಲ್ಲಿ ಡಾಕ್ಟರಾಗಿ ನಿಂತು, ಕೇವಲ ದಕ್ಷತೆಯಿಂದಲೇ ಮುಂದುವರಿದು, ಕೆಲಕಾಲ 'ಗ್ರ್ಯಾಂಟ್ ಮೆಡಿಕಲ್ ಕಾಲೇಜಿ'ನ ಪ್ರಾಧ್ಯಾಪಕರಾಗಿದ್ದು, ತರುವಾಯ ಅದೇ ಪೆಟಿಟ್ ಆಸ್ಪತ್ರೆಯ ಪ್ರಧಾನ ಡಾಕ್ಟರಾಗಿ ನೇಮಕ ಹೊಂದಿದರು. ಈ ವೇಳೆಗೆ ಶೇಷಗಿರಿರಾಯರ ಖ್ಯಾತಿ ವಿಶ್ವದಲ್ಲೆಲ್ಲಾ ಹರಡಿತ್ತು.

ಒಂದು ದಿನ ಡಾಕ್ಟರಲ್ಲಿ ಸಮಯ ಗೊತ್ತು ಮಾಡಿಕೊಂಡು, ಖಾರ್‌ನಲ್ಲಿದ್ದ ಅವರ ಮನೆಗೆ ಒಬ್ಬರು ದೊಡ್ಡ ಮನುಷ್ಯರು ಹುಡುಕಿಕೊಂಡು ಬಂದರು. ಡಾಕ್ಟರು ಅವರನ್ನು ತಮ್ಮ ಸಮಾಲೋಚನ ಮಂದಿರದಲ್ಲಿ ( Consulting room ) ಕೂಡಿಸಿ

" ತಾವು ಯಾರು ? ಏನು ಬಂದಿರಿ ? " ಎಂದು ಕೇಳಿದರು.

ಅತಿಥಿ ತಮ್ಮ ಪರಿಚಯ ಮಾಡಿಕೊಡಲೊಪ್ಪದೆ

" ತಮ್ಮಿಂದ ಒಂದು ಮಹೋಪಕಾರವಾಗಬೇಕಾಗಿದೆ " ಎಂದರು.

" ಏನು ಹೇಳಿ– ಸಮಸ್ಯೆಗಳಲ್ಲಿ ಮಾತನಾಡದೆ ಸ್ಪಷ್ಟವಾಗಿ ಹೇಳಿ. ನನಗೆ ತುಂಬ ಕೆಲಸವಿದೆ. "

" ತಮಗೆ ಸ್ವಲ್ಪವೂ ವ್ಯವಧಾನವಿಲ್ಲವೆಂದು ಬಲ್ಲೆ ಡಾಕ್ಟರೇ – ನಾನು ಬಂದಿರುವ ವಿಷಯ ತುಂಬ ಗಹನವಾದುದು. ಇದು ಅತ್ಯಂತ ರಹಸ್ಯವಾಗಿರ ಬೇಕಾದುದು ಅಗತ್ಯ."

" ರಹಸ್ಯ ರಕ್ಷಣೆ ನನ್ನ ವ್ಯಕ್ತಿ ಧರ್ಮ. ನೀವು ನಿಸ್ಸಂಕೋಚವಾಗಿ ಮಾತನಾಡಬಹುದು."

" ದಯೆಯಿಟ್ಟು ನನ್ನ ಜತೆಯಲ್ಲಿ ಬಂದು ಒಬ್ಬ ರೋಗಿಯನ್ನು ಪರೀ ಕ್ಷಿಸಬೇಕು – ಅವರ ಪ್ರಾಣ ಉಳಿಸಬೇಕು. ನೀವು ಸಂಭಾವನೆಯಾಗಿ ಎಷ್ಟೇ ಹಣ ಕೇಳಿದರೂ ಕೊಡಲು ಸಿದ್ಧನಾಗಿದ್ದೇನೆ."

ಡಾಕ್ಟರು ಏಕೋ ಅನುಮಾನಿಸಲು ಆಗಂತುಕ ತನ್ನ ಪರಿಚಯಮಾಡಿ ಕೊಟ್ಟ. ಡಾಕ್ಟರು ಹೊರಡಲು ಸಿದ್ಧರಾಗಿ ತಮ್ಮ ಕೈಚೀಲವನ್ನೆತ್ತಿಕೊಂಡರು.

ಮಲಬಾರ್ ಹಿಲ್‌ನಲ್ಲಿದ್ದ ಭವ್ಯ ಅರಮನೆಯೊಂದಕ್ಕೆ ಆಗಂತುಕ ಡಾಕ್ಟರನ್ನು ಕರೆದೊಯ್ದ. ದಿವ್ಯವಾದ ಹಂಸತೂಲಿಕಾ ತಲ್ಪದ ಮೇಲೆ, ಎಲ್ಲೋ ಒಂದು ಮೂಲೆಯಲ್ಲಿ ಅಸ್ಥಿಪಂಜರವೊಂದು ಮಲಗಿತ್ತು.

ಡಾಕ್ಟರು ರೋಗಿಯನ್ನು ಪರೀಕ್ಷಿಸಿ ಹೊರಬಂದರು. ಆಗಂತುಕ ತವ ಕದಿಂದ

" ಗುಣವಾಗುವ ಸಂಭವವಿದೆಯೇ ?"

" ಗುಣಮಾಡಬಲ್ಲೆನೆಂಬ ಧೈರ್ಯ ನನಗಿದೆ. ಆದರೆ ರೋಗಿಯನ್ನು ತುಂಬ ಎಚ್ಚರದಿಂದ ನೋಡಿಕೊಳ್ಳಬೇಕು. ನಾನು ಯಾವ ಚಿಕಿತ್ಸಾಕ್ರಮ ಸೂಚಿಸುತ್ತೇನೆ, ಅದರಂತೆಯೇ ನಡೆದುಕೊಳ್ಳಬೇಕು."

" ಹಾಗೇ ಆಗಲಿ. ತಮ್ಮ ಮಾತು ಮೀರುವುದಿಲ್ಲ."

ಮೂರು ತಿಂಗಳ ಕಾಲ ಸತತ ಚಿಕಿತ್ಸೆಯಾಯಿತು. ರೋಗಿ ಬದುಕಿ ದುದು ಮಾತ್ರವೇ ಅಲ್ಲ, ಮೊದಲಿಗಿಂತಲೂ ಗೆಲುವಾದ.

ಒಂದು ರಾತ್ರಿ ಡಾಕ್ಟರು ಊಟ ಮುಗಿಸಿ ತಮ್ಮ ಡ್ರಾಯಿಂಗ್ ರೂಮಿ ನಲ್ಲಿ 'ಲ್ಯಾನ್ಸೆಟ್' (Lancet) ಪತ್ರಿಕೆ ಓದುತ್ತ ಕುಳಿತಿದ್ದರು. ಮಗ ಶ್ರೀಧರ ಬಂದು

" ಯಾರೊ ಬಂದಿದ್ದಾರೆ ಡ್ಯಾಡಿ – ನಿಮ್ಮನ್ನು ಹುಡುಕಿಕೊಂಡು."

ಎಂದು ಹೇಳಿದ. ಡಾಕ್ಟರೇ ಎದ್ದು ಹೋಗಿ ಅತಿಥಿಗಳೊಂದಿಗೆ ಬಂದು ಕುಳಿತು

"ಇಷ್ಟು ದೂರ ನೀವು ಬರುವಂತಾದ್ದು ಕಂಡು ನನಗೆ ತುಂಬ ಸಂತೋಷವಾಗಿದೆ" ಎಂದರು.

"ನಿಮ್ಮ ಕಟಾಕ್ಷ. ನಮ್ಮ ಪ್ರಾಣ ಉಳಿಸಿದಿರಿ – ನಿಮಗೆ ಯಾವ ರೀತಿಯಲ್ಲಿ ಕೃತಜ್ಞತೆ ಅರ್ಪಿಸಬೇಕೋ ತಿಳಿಯದು."

ಅವರ ಜತೆಯಲ್ಲಿದ್ದವರು ಕಾರಿನ ಬಳಿಗೆ ಹೋಗಿ, ಮೇಲುಮುಸುಕು ಹಾಕಿದ ಒಂದು ತಟ್ಟೆಯನ್ನು ತಂದು ಡಾಕ್ಟರಿಗೆ ಒಪ್ಪಿಸಿದರು. ಅದರ ತುಂಬ ಹಣ್ಣುಗಳು, ಬಾದಾಮಿ, ಕಲ್ಲುಸಕ್ಕರೆ, ದ್ರಾಕ್ಷಿ ಮತ್ತು ಇಪ್ಪತ್ತು ಸಾವಿರ ರೂಪಾಯಿಗಳಿಗೆ ಒಂದು ಚೆಕ್.

"ನಾವು ನಾಳೆ ನಾಡಿದ್ದರಲ್ಲಿ ಊರಿಗೆ ಹೋಗುತ್ತೇನೆ – ಅದಕ್ಕೇ ತಮ್ಮನ್ನು ಕಂಡು ಹೋಗಲು ಬಂದೆ."

"ಹೋಗಬಹುದು. ಚಿಕಿತ್ಸೆ ಮುಗಿದಿದೆ. ರೋಗ ಪುನಃ ಮರುಕಳಿಸದಂತೆ, ನಿಮ್ಮ ಡಾಕ್ಟರಿಂದ ರೋಗ ನಿಧಾನ ಮಾಡಿಸಿ ನನಗೆ ವರದಿ ಕಳುಹಿಸುತ್ತಿರಿ. ನಾನು ಬರೆದುಕೊಟ್ಟಿರುವ ಇಂಜಕ್ಷನ್ ತಪ್ಪದೆ ತೆಗೆದುಕೊಳ್ಳುತ್ತಿರಿ."

"ಆಗಬಹುದು. ತಮ್ಮಲ್ಲಿ ಇನ್ನೊಂದು ಪ್ರಾರ್ಥನೆ ಮಾಡಲು ಬಂದಿದ್ದೇವೆ."

"ಹೇಳಿ."

"ನಮ್ಮ ಸಂಸ್ಥಾನಕ್ಕೆ ತಾವು ಬಂದು, ನಮ್ಮ ದರ್ಬಾರ್ ಸರ್ಜನ್ ಆಗಿರಬೇಕೆಂದು ಬಯಸುತ್ತೇವೆ."

"ನನಗೆ ಇಲ್ಲಿ ಯಾವುದಕ್ಕೂ ಕೊರತೆಯಾಗಿಲ್ಲ. ಕೈತುಂಬ ಸಂಬಳ ಬರುತ್ತಿದೆ; ಸಾಕಷ್ಟು ಕನ್‌ಸಲ್ಟೇಷನ್ ಫೀಸ್ (Consultation fees) ಬರುತ್ತಿದೆ. ನನ್ನ ಮಗ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದಾನೆ. ನನ್ನ ಮಗಳೂ ಕಾಲೇಜಿನಲ್ಲಿದ್ದಾಳೆ. ನಾನು ಮುಂಬಯಿ ಬಿಡಲು ಹೇಗೆ ಸಾಧ್ಯ?"

"ಇಲ್ಲ ಡಾಕ್ಟರೇ – ನೀವು ನಮ್ಮ ಸಂಸ್ಥಾನಕ್ಕೆ ಬರಲೇ ಬೇಕು. ನಿಮ್ಮ ಎಲ್ಲಾ ಖರ್ಚು ಕಳೆದು ತಿಂಗಳಿಗೆ ಎರಡೂವರೆ ಸಾವಿರ ಕೊಡಲು ನಾವು ಸಿದ್ಧ

ರಾಗಿದ್ದೇವೆ. ನಮ್ಮ ‘ ವಸಂತ ಮಹಲ್ ’ ನಿಮಗೆ ಬಿಡಿಸಿ ಕೊಡುತ್ತೇವೆ. ಎರಡು ಸೊಗಸಾದ ಕಾರುಗಳನ್ನು ನಿಮ್ಮ ಉಪಯೋಗಕ್ಕೆ ಕೊಡುತ್ತೇವೆ. ನಿಮ್ಮ ಮಕ್ಕಳು ಇಲ್ಲಿಯೇ ಇದ್ದು ವಿದ್ಯೆ ಮುಂದುವರಿಸಬಹುದು. ಅವರಿಗೆ ಬೇಕಾದ ಸೌಕರ್ಯ ಮಾಡಿಕೊಡಲು ನಾವು ಸಿದ್ಧರಾಗಿದ್ದೇವೆ. ”

“ ಈ ವಿಷಯ ನಾನಿಷ್ಟು ಬೇಗ ನಿರ್ಧರಿಸಲಾರೆ. ನಾಳೆಯವರೆಗೆ ಕಾಲಾವಕಾಶ ಕೊಡಿ. ವಿಚಾರ ಮಾಡಿ ಹೇಳುತ್ತೇನೆ. ”

“ ಹಾಗೇ ಮಾಡಿ – ನಾಳೆ ಸಂಜೆ ನಮ್ಮ ದಿವಾನರು ನಿಮ್ಮನ್ನು ಬಂದು ಕಾಣುತ್ತಾರೆ. ಬರುವುದಕ್ಕೆ ಸಾಧ್ಯವಿಲ್ಲವೆಂದು ಹೇಳಬೇಡಿ. ”

ಎಂದು ತಿಳಿಸಿ ಇಬ್ಬರೂ ಹೊರಟರು.

ಅತಿಥಿಗಳು ಹೋದ ಮೇಲೆ ಡಾಕ್ಟರು ಮಗನನ್ನು ಕರೆದು, ನಡೆದ ಸಂಭಾಷಣೆಯನ್ನು ವಿವರಿಸಿ

“ ನಿನ್ನ ಅಭಿಪ್ರಾಯವೇನು ಶ್ರೀಧರ್ ” ಎಂದು ಕೇಳಿದರು.

“ ಶ್ರೀಧರ್ ಮುಖ ಕಹಿ ಮಾಡಿಕೊಂಡು

“ ಎಲ್ಲಿಯ ಸಹವಾಸ ಡ್ಯಾಡಿ ” ಎಂದ.

“ ಏಕೆ ಹಾಗೆನ್ನುವೆ. ”

“ ಇಲ್ಲಿ ಸುಖವಾಗಿದ್ದೇವೆ. ಈ ಸಂಸ್ಥಾನಕ್ಕೆ ಹೋಗಿ, ಅಲ್ಲಿಯ ನಿರಂಕುಶ ಮಹಾರಾಜರ ಕೈಗೆ ಸಿಕ್ಕಿಕೊಂಡು ನಾವೇಕೆ ನರಳಬೇಕು. ನಮ್ಮ ದೇಶದ ಆಶ್ರಿತ ಸಂಸ್ಥಾನಗಳ ( Native States ) ಹಣೇಬರಹ ಕನ್ಹಯ್ಯಲಾಲ್ ಘಾಬಾ ತಮ್ಮ ‘ ಎಚ್. ಎಚ್. ( H. H. ) ’ ಪುಸ್ತಕದಲ್ಲಿ ವಿವರಿಸಿದ್ದಾರಲ್ಲಾ ! ”

“ ಹೌದು ಶ್ರೀಧರ್. ಘಾಬಾ ಅವರ ಪುಸ್ತಕ ಓದಿದ್ದೇನೆ. ಅವರು ಹೇಳಿರುವುದರಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲ. ”

“ ಹಗಲು ಕಂಡ ಭಾವಿಗೆ ಇರುಳು ಬೀಳಬೇಕೆನ್ನುವಿರಾ ಡ್ಯಾಡಿ. ”

“ ನೋಡು ನಿನ್ನ ತಾಯಿಗೆ ಮುಂಬಯಿ ಹವಾ ಒಗ್ಗಿಲ್ಲ. ಇಂದೂರಿನಲ್ಲಿ ಕೆಲಕಾಲವಿದ್ದರೆ ಆಕೆಯ ಆರೋಗ್ಯ ಸುಧಾರಿಸಬಹುದು. ”

“ ಹಾಗಾದರೆ ಬೆಂಗಳೂರಿಗೇ ಹೋಗಬಹುದಲ್ಲ. ಬೆಂಗಳೂರಿನಲ್ಲಿ

ಪ್ರೈವೇಟ್ ಪ್ರ್ಯಾಕ್ಟೀಸ್ ( Private Practice ) ಮಾಡಿದರೆ ಆಗುವು ದಿಲ್ಲವೇ ? ”

“ ಹಣದ ವಿಷಯ ನಾನು ಯೋಚನೆ ಮಾಡುತ್ತಿಲ್ಲ ಶ್ರೀಧರ್. ಈಗ್ಗೆ ಸುಮಾರು ಹತ್ತು ವರ್ಷಗಳ ಹಿಂದೊಮ್ಮೆ ನಾನು ‘ ಮೆಡಿಕಲ್ ಕಾನ್-ಫರನ್ಸಿ ’ ಗೆ ಇಂದೂರಿಗೆ ಹೋಗಿದ್ದೆ. ಐದು ಸಾವಿರ ಜನರಿಗೆ ಒಂದರಂತೆ ಕೂಡ ಅಲ್ಲಿ ಆಸ್ಪತ್ರೆಯಿಲ್ಲ. ಸಾಂಕ್ರಾಮಿಕ ರೋಗಗಳಂತೂ ಪ್ರತಿ ವರ್ಷ, ತಪ್ಪದೆ ಬರುತ್ತವೆ. ಆಗ ಜನ ಹುಳುಗಳಂತೆ ಸಾಯುತ್ತಾರೆ. ಸರ್ಕಾರ ಜನರ ರಕ್ತ ಮಾಂಸ ಸುಲಿದು ಮಹಾರಾಜರ ಬೊಕ್ಕಸ ತುಂಬುತ್ತಿದೆ. ಉಸಿರೆ ತ್ತುವುದಕ್ಕೆ ಯಾರಿಗೂ ಧೈರ್ಯವಿಲ್ಲ. ”

ಇದರಿಂದ ಊರಿನ ಖಾಸಗಿ ಡಾಕ್ಟರುಗಳ (Private Practitioners) ಬೇಳೆ ಚೆನ್ನಾಗಿ ಬೇಯುತ್ತಿದೆ. ಒಂದು ಕ್ವಿನೈನ್ ಇಂಜಕ್ಷನ್ ಕೊಡಲಾರದ ಡಾಕ್ಟರು ಎರಡು ಮೂರು ಲಕ್ಷ ರೂಪಾಯಿಗಳ ಆಸ್ತಿ ಗಳಿಸಿದ್ದಾನೆ. ಬಡ ಜನರನ್ನು ಸುಲಿದು, ಅವರ ರಕ್ತ ಹೀರಿ ಡಾಕ್ಟರುಗಳು ಶ್ರೀಮಂತರಾಗಿದ್ದಾರೆ. ಒಂದು ಸಾಧಾರಣ ಇಂಜಕ್ಷನ್ನಿಗೆ ಮೂವತ್ತು ರೂಪಾಯಿ; ಸ್ಯಾಲ್‌ವರ್ಸನ್ ಇಂಜಕ್ಷನ್ನಿಗೆ ಎಂಭತ್ತರಿಂದ ಐನೂರು; ಮೂರು ಡೋಸ್ ಔಷಧಕ್ಕೆ ಒಂದೂ ವರೆ ರೂಪಾಯಿ – ಇವು ಖಾಸಗಿ ಡಾಕ್ಟರುಗಳ ಚಾರ್ಜುಗಳು. ಫಾಬಾ ಹೇಳಿರುವಂತೆ ಮನುಷ್ಯನ ನೀಚತನದ ಪರಮಾವಧಿಯನ್ನು ಈ ಕೆಲವು ಸಂಸ್ಥಾನಗಳು ಕಾಣಬಹುದು. ”

“ ತಿಳಿದೂ ತಿಳಿದೂ ಅಲ್ಲಿಗೇ ಹೋಗಬೇಕೆನ್ನುವಿರಲ್ಲಾ ! ”

“ ಆ ನಿರ್ಭಾಗ್ಯ ಜನಗಳ ಕಷ್ಟ ಪರಿಹರಿಸುವುದು ನನ್ನ ಕೈಯಲ್ಲೇಕಿರ ಬಾರದು ? ಮಹಾರಾಜರ ಪ್ರಾಣ ಉಳಿಸಿದ್ದೇನೆ – ಸದ್ಯಕ್ಕಂತೂ ಅವರು ನನಗೆ ಕೃತಜ್ಞರಾಗಿದ್ದಾರೆ. ಸಂಸ್ಥಾನಕ್ಕೆ ಬಾರೆಂದು ಆಹ್ವಾನಿಸಿದ್ದಾರೆ. ಅವರು ಸೂಚಿಸಿರುವ ಸಂಭಾವನೆ, ಸೌಕರ್ಯಗಳು ಉದಾರವಾದುದೆನ್ನುವುದ ರಲ್ಲಿ ಸಂದೇಹವಿಲ್ಲ. ಮಹಾರಾಜರ ವಿಶ್ವಾಸವಿರುವಾಗಲೇ ನಾನು ನೂರಿ-ನ್ನೂರು ಆಸ್ಪತ್ರೆ ಮಾಡಿಸಲು ಸಾಧ್ಯವಾದರೆ ನನ್ನ ಜೀವನ ಸಾರ್ಥಕವಾಗು ತ್ತದೆ. ಈ ಅವಕಾಶ ದೇವರೇ ಒದಗಿಸಿ ನನ್ನನ್ನು ಪರೀಕ್ಷಿಸುತ್ತಿದ್ದಾನೆಂದು ನಾನು ತಿಳಿದಿದ್ದೇನೆ. ”

ಮಗನ ಬಾಯಿ ಕಟ್ಟಿ ಹೋಯಿತು.

"ಕ್ಷಮಿಸಿ ಡ್ಯಾಡಿ – ನೀವು ಅಲ್ಲಿಗೆ ಹೋಗದಿರುವುದೇ ಲೇಸೆಂದು ನನ್ನ ಅಭಿಪ್ರಾಯ."

ಎಂದು ಹೇಳಿ ಅಲ್ಲಿ ನಿಲ್ಲದೆ ಮಲಗಲು ಹೊರಟುಹೋದ.

ಡಾಕ್ಟರು ಯೋಚಿಸುತ್ತ ಕುಳಿತರು.

ಮಾರನೆಯ ಸಂಜೆ ಡಾಕ್ಟರನ್ನು ನೋಡಲು ಬಂದ ದಿವಾನಸಾಹೇಬರಿಗೆ

"ಬರುವುದಕ್ಕೆ ಒಪ್ಪಿದ್ದೇನೆ ಎಂದು ಖಾವಂದಿರಿಗೆ ತಿಳಿಸಿ. ಆದರೆ ನನ್ನದು ಒಂದು ಕರಾರಿದೆ."

"ಏನು ಹೇಳಿ – ನೀವು ಯಾವ ಕರಾರು ವಿಧಿಸಿದರೂ ಒಪ್ಪಿಕೊಳ್ಳಲು ಮಹಾರಾಜಾ ಸಾಹೇಬರು ಸಿದ್ಧವಾಗಿದ್ದಾರೆ."

"ನಾನು ದರ್ಬಾರ್ ಸರ್ಜನ್ ಆಗಿರುವುದರ ಜತೆಗೆ 'ಸೀನಿಯರ್ ಸರ್ಜನ್' ಕೂಡ ಆಗಿರಬೇಕು. ನನ್ನ ಸಲಹೆಯಂತೆ ಸಂಸ್ಥಾನದ ವೈದ್ಯಕೀಯ ವ್ಯವಸ್ಥೆ ಮಾಡಲು ಶ್ರೀಮನ್ಮಹಾರಾಜರು ಒಪ್ಪಿಕೊಳ್ಳಬೇಕು."

"ಇದರಲ್ಲಿ ಒಂದು ಧರ್ಮಸೂಕ್ಷ್ಮವಿದೆ ಡಾಕ್ಟರ್ ಸಾಹೇಬ್. ನಿಜಸ್ಥಿತಿ ನಿಮ್ಮಲ್ಲಿ ಹೇಳದಿದ್ದರೆ ಮುಂದೆ ಅಸಮಾಧಾನಕ್ಕೆ ಕಾರಣವಾಗಬಹುದು. ನಿಮ್ಮ ಸಲಹೆಗೆ ವೈಯಕ್ತಿಕವಾಗಿ ನನ್ನ ಸಂಪೂರ್ಣ ಸಹಾನುಭೂತಿಯಿದೆ. ಆದರೆ........"

"ಸ್ಪಷ್ಟವಾಗಿ ಹೇಳಿ."

"ಖಾವಂದರ ಹತ್ತಿರ ನೀವು ಈ ವಿಷಯ ಖಂಡಿತವಾಗಿ ಮಾತನಾಡುವುದು ಒಳ್ಳೆಯದು. ಸಂಸ್ಥಾನದ ಆದಾಯವನ್ನು ಖಾವಂದರು ಧಾರಾಳವಾಗಿ ಬಳಸಿಕೊಳ್ಳುತ್ತಿದ್ದಾರೆ. ನಾಳೆ ನಿಮ್ಮ ನಿಯೋಜನೆಗಳಿಗೆ ಹಣ ಒದಗಿಸುವ ಜವಾಬ್ದಾರಿ ನನ್ನದು – ನನ್ನ ಪರಿಸ್ಥಿತಿ ನಿಮಗೆ ತಿಳಿಸಿದ್ದೇನೆ."

"ನಡೆಯಿರಿ – ಹಾಗಾದರೆ ಮಹಾರಾಜರನ್ನು ಕಂಡು ಈ ವಿಷಯ ಇತ್ಯರ್ಥ ಮಾಡಿಬಿಡೋಣ."

ಎಂದು ಹೇಳಿ ದಿವಾನರೊಂದಿಗೆ ಮಹಾರಾಜರ ಭೆಟ್ಟಿಗೆ ಬಂದರು. ಮಹಾರಾಜರು, ಡಾಕ್ಟರ ಎಲ್ಲ ಸಲಹೆಗಳಿಗೂ ಒಪ್ಪಿಗೆ ಕೊಟ್ಟುದಲ್ಲದೆ ಅವರ

ನಿಯೋಜನೆಗಳಿಗೆ ಹಣ ಒದಗಿಸುವ ಜವಾಬ್ದಾರಿಯನ್ನು ತಾವೇ ವಹಿಸಿಕೊಂಡರು.

ಡಾಕ್ಟರಿಗೆ ಪರಮ ಸಂತೋಷವಾಯಿತು.

ಇಂದೂರಿನಿಂದ ಕೆಲಸ ನಿಯಾಮಕ ಪತ್ರ ( appointment letter ) ಕೂಡಲೆ ಬಂದುದಲ್ಲದೆ, ಖುದ್ದು ಮಹಾರಾಜರೇ ಪತ್ರ ಬರೆದು ಡಾಕ್ಟರರ ಕರಾರುಗಳಿಗೆ ಒಪ್ಪಿಗೆ ಸೂಚಿಸಿದ್ದರು.

ಡಾಕ್ಟರು ತಮ್ಮ ಕೆಲಸಕ್ಕೆ ರಾಜೀನಾಮೆಯಿತ್ತು ಬಿಡುಗಡೆ ಪಡೆದುಕೊಂಡರು, ಇಂದೂರಿಗೆ ಹೊರಡಲು ಸಿದ್ಧರಾದರು. ಶ್ರೀಧರ, ವಸುಂಧರಾ ಹಾಸ್ಟಲ್ ಸೇರಿದರು.

ಡಾಕ್ಟರು, ಅವರ ಪತ್ನಿ ಕಲ್ಯಾಣಮ್ಮ, ಮಗಳು ಕಲ್ಪನಾ ಇಂದೂರಿಗೆ ಬಂದು, ' ವಸಂತ ಮಹಲಿ ' ನಲ್ಲಿ ನೆಲಸಿದರು.



೨

ಡಾಕ್ಟರ್ ಶೇಷಗಿರಿರಾಯರು ಇಂದೂರಿಗೆ ಹೋದುದು ಅಲ್ಲಿಯ ಡಾಕ್ಟರುಗಳಿಗೆ ' ಗ್ರಹಚಾರ ಕಾಲ ' ಬಂದಂತಾಯಿತು. ಸೀನಿಯರ್ ಸರ್ಜನ್‌ನಾಗಿ ಕೆಲಸ ವಹಿಸಿಕೊಂಡ ಒಂದೇ ತಿಂಗಳಲ್ಲಿ ಡಾಕ್ಟರ್ ಶೇಷಗಿರಿರಾಯರು ಸಂಸ್ಥಾನದ ವೈದ್ಯಾನುಕೂಲದ ಸಮಸ್ತ ವಿಷಯಗಳನ್ನು ಸಂಗ್ರಹಿಸಿ, ಸರ್ಕಾರದ ಡಾಕ್ಟರುಗಳ ನೆರವಿನಿಂದ ಒಂದು ಸ್ಥೂಲ ವರದಿ ಸಿದ್ಧಗೊಳಿಸಿ ಮಹಾರಾಜರಿಗೆ ಒಪ್ಪಿಸಿದರು.

ಮಹಾರಾಜರು ಮಾತು ಕೊಟ್ಟಿದ್ದಂತೆ ಡಾಕ್ಟರ ವರದಿಯನ್ನೂ ಅವರ ಸಲಹೆಗಳನ್ನೂ ಒಪ್ಪಿಕೊಳ್ಳಲೇಬೇಕಾಯಿತು.

ಡಾಕ್ಟರು ಮೊದಲು ಸಿವಿಲ್ ಹಾಸ್ಪೆಟಲಿನ ಸುಧಾರಣೆಯನ್ನಾರಂಭಿಸಿದರು. ಹೆಚ್ಚು ರೋಗಿಗಳ ಚಿಕಿತ್ಸೆ ವ್ಯವಸ್ಥೆ ಮಾಡಿದುದಲ್ಲದೆ, ಆಸ್ಪತ್ರೆಯ ಶುಚಿತ್ವ, ರೋಗಿಗಳ ಬಟ್ಟೆಬರೆಯ ಶುಭ್ರತೆ, ಅವರಿಗೆ ಕೊಡುವ ಆಹಾರದ ನೈರ್ಮಲ್ಯಗಳನ್ನು ಸುಧಾರಿಸಿದರು.

ಡಾಕ್ಟರುಗಳು, ನರ್ಸುಗಳು, ವಾರ್ಡ ಬಾಯ್‌ಗಳು ಸಮಸ್ತರೂ ಡಾಕ್ಟರ್ ಶೇಷಗಿರಿರಾಯರೆಂದರೆ ಗಡಗಡನೆ ನಡುಗಲಾರಂಭಿಸಿದರು. ಡಾಕ್ಟರಿಗೆ ಹಗಲೇ ಇರುಳಾಯಿತು – ಇರುಳೇ ಹಗಲಾಯಿತು.

ಶ್ರೀಮನ್ಮಹಾರಾಜರು ಕೊಟ್ಟಿದ್ದ ಎರಡು ಕಾರುಗಳಿಗೆ ಮೂರು ಮಂದಿ ಡ್ರೈವರುಗಳನ್ನು ಗೊತ್ತು ಮಾಡಿಕೊಂಡರು. ಎಂಟೆಂಟು ಗಂಟೆ ಕಾಲ ಒಬ್ಬ ಡ್ರೈವರು ಕೆಲಸದ ಮೇಲೆ ನಿಲ್ಲಬೇಕಾಗಿತ್ತು. ಡಾಕ್ಟರು ರಾತ್ರಿ ಎರಡು ಗಂಟೆಗೆ, ಮೂರು ಗಂಟೆಗೆದ್ದು ಸಿವಿಲ್ ಆಸ್ಪತ್ರೆಗೆ ಹೋಗುತ್ತಿದ್ದರು. ಕೆಲಸದ ಮೇಲೆ ಇರದೆ ಸಿನಿಮಾ ನೋಡುವುದಕ್ಕೂ ನರ್ಸುಗಳ ಜತೆ ಚಕ್ಕಂದಕ್ಕೋ ಹೋಗಿದ್ದ ಡ್ಯೂಟಿ ಡಾಕ್ಟರಿಗೆ ಗ್ರಹಚಾರ ಒದಗುತ್ತಿತ್ತು. ಸೀನಿಯರ್ ಸರ್ಜನ್ ಯಾವಾಗ ಬರುತ್ತಾರೆ – ಏನು ಕೇಳುತ್ತಾರೆ – ಏನು ತನಿಖೆ ಮಾಡುತ್ತಾರೆಂಬುದು ಯಾರಿಗೂ ಗೊತ್ತಿಲ್ಲ.

ಸಿವಿಲ್ ಆಸ್ಪತ್ರೆಯಲ್ಲಿದ್ದ ಹೊರ ಚಿಕಿತ್ಸಾಲಯ ( Outdoor Patient Dispensary ) ವನ್ನು ವಿಸ್ತರಿಸಿ, ಅಲ್ಲಿನ ವೈದ್ಯಕೀಯ ಪಡೆಯನ್ನು ಹೆಚ್ಚಿಸಿದರು. ಸಾಧಾರಣವಾದ ಎಲ್ಲ ಔಷಧಗಳೂ, ಇಂಜಕ್ಷನ್‌ಗಳೂ ರೋಗಿಗಳಿಗೆ ಬಿಟ್ಟಿ ಸಿಕ್ಕುತ್ತಿತ್ತು. ವಿಶೇಷ ಇಂಜಕ್ಷನ್ ಕೊಡಬೇಕಾದ ಸಂದರ್ಭದಲ್ಲಿ ರೋಗಿ ಅದರ ಮೌಲ್ಯವಷ್ಟನ್ನು ಕೊಡಬೇಕಾಗಿತ್ತು. ಮೌಲ್ಯವನ್ನು ಕೊಡಲಾರದ ಬಡವರಿಗೆ ಒಂದು ಪ್ರತ್ಯೇಕ ನಿಧಿಯನ್ನು ಸ್ಥಾಪಿಸಿ ಅದರ ಮೂಲಕ ಸಹಾಯ ಒದಗಿಸುತ್ತಿದ್ದರು. ಡಾಕ್ಟರು ಅವಕಾಶ ಸಿಕ್ಕಿದಾಗ ಊರಿನ ಶ್ರೀಮಂತರನ್ನು ಕಂಡು, ಅವರಲ್ಲಿ ಭಿಕ್ಷೆ ಬೇಡಿ 'ಬಡವರ ನಿಧಿ' ಯನ್ನು ತುಂಬುತ್ತಿದ್ದರು.

ಡಾಕ್ಟರ ಮನೆಯೂ 'ಉಚಿತ ಚಿಕಿತ್ಸಾಲಯ' ವಾಗುತ್ತ ಬಂತು. ರೋಗಿಗಳು ಎಷ್ಟೋ ಹೊತ್ತಿನಲ್ಲಿ ಬಂದರೂ ಬೇಸರಪಟ್ಟುಕೊಳ್ಳದೆ ಡಾಕ್ಟರು ಚಿಕಿತ್ಸೆ ಮಾಡಿ ಕಳಿಸುತ್ತಿದ್ದರು.

ಡಾಕ್ಟರು ಮಾಡಿದ ಸುಧಾರಣೆಗಳು ಊರಿನ ಬಡ ಜನರಿಗೆ ಎಷ್ಟು ಪ್ರಿಯವಾಯಿತೊ ಅಷ್ಟು ಖಾಸಗಿ ಡಾಕ್ಟರುಗಳಿಗೆ ಅಪ್ರಿಯವಾಯಿತು. ಅವರ ಸುಲಿಗೆಯ ವ್ಯಾಪಾರಕ್ಕೆ ಡಾ. ಶೇಷಗಿರಿರಾಯರು ಬಂದಾರಭ್ಯ ಪ್ರಬಲ ಧಕ್ಕೆ ತಗುಲಿತ್ತು. ಖಾಸಗಿ ಡಾಕ್ಟರುಗಳು ಒಳಗೇ ವಿಷ ಕಾರುತ್ತಿದ್ದರೂ ಬಹಿರಂಗ

ವಾಗಿ ಡಾ. ಶೇಷಗಿರಿರಾಯರ ಮೇಲೆ ಯಾವ ಆಕ್ಷೇಪವನ್ನೂ ಎತ್ತಲು ಖಾಸಗಿ ಡಾಕ್ಟರುಗಳಿಗೆ ಧೈರ್ಯವಾಗಲಿಲ್ಲ. ಶೇಷಗಿರಿರಾಯರು ಸಂಸ್ಥಾನದ ಪ್ರಧಾನ ವೈದ್ಯಾಧಿಕಾರಿಗಳಿದ್ದುದು ಮಾತ್ರವಲ್ಲದೆ ಪ್ರತಿಭಾಶಾಲಿ ಡಾಕ್ಟರೂ ಆಗಿದ್ದರು.

ಡಾಕ್ಟರ ದುಡಿಮೆ ನೋಡಲಾರದೆ ಒಮ್ಮೊಮ್ಮೆ ಕಣ್ಣಲ್ಲಿ ನೀರು ತಂದು ಕೊಂಡು ಕಲ್ಯಾಣಮ್ಮನವರು

" ಈ ಕೆಲಸವೂ ಸಾಕು, ಈ ಸಂಪಾದನೆಯೂ ಸಾಕು. ರಾಜೀನಾಮೆ ಕೊಟ್ಟು ಬಿಡಿ. ಬೆಂಗಳೂರಿಗೆ ಹೋಗಿ ಹಾಯಾಗಿ ರಾಮಕೃಷ್ಣಾ ಎಂದು ಇದ್ದು ಬಿಡೋಣ. "

ಎಂದರೆ ಡಾಕ್ಟರು ಗಂಭೀರವದನರಾಗಿ

" ನೋಡು ಕಲ್ಯಾಣಿ. ನಾನು ಸಂಪಾದನೆಗಾಗಿ ಇಲ್ಲಿಗೆ ಬಂದಿಲ್ಲ ವೆಂದು ನೀನು ಚೆನ್ನಾಗಿ ಬಲ್ಲೆ. ಭಗವಂತ ಕೈತುಂಬ ಕೊಟ್ಟ - ಒಳ್ಳೆಯ ಕಾಲದಲ್ಲಿ ನಾನೂ ನಾಲ್ಕು ಕಾಸು ಕೂಡಿಟ್ಟುಕೊಂಡೆ. ಇಲ್ಲಿ ನಾನು ಸಂಪಾ ದಿಸುತ್ತಿರುವುದನ್ನು ಇಲ್ಲಿಯೇ ವಿನಿಯೋಗಿಸುತ್ತಿದ್ದೇನೆ. ಇವನು ಹೀಗೇಕೆ ಮಾಡುತ್ತಿದ್ದಾನೆ ಎಂದು ನೀನು ಆಶ್ಚರ್ಯಪಡಬಹುದು. ಮೊನ್ನೆ ವಾರ್ಡ ಇನ್ಸ್‌ಪೆಕ್ಷನ್ ಮಾಡುತ್ತಿದ್ದೆ. ಒಬ್ಬಾತ ಮತ್ತು ಅವನ ಹೆಂಡತಿ – ಇಬ್ಬರೂ ಹಣ್ಣು ಹಣ್ಣು ಮುದುಕರು – ಅವರ ಜತೆಯಲ್ಲಿ ಚಿಕ್ಕ ವಯಸ್ಸಿನ ಹೆಣ್ಣು ಮಗಳು. ಮೂವರೂ ಬಂದು ನನ್ನ ಕಾಲಿನಮೇಲೆ ಬಿದ್ದು ನಮಸ್ಕರಿಸಿದರು. ' ನನ್ನಿಂದೇನಾಗಬೇಕು ' ಎಂದು ಕೇಳಿದೆ. ಮುದುಕ ಕೈಜೋಡಿಸಿ ನಿಂತು ' ತಂದೆ – ನನ್ನ ಮಗನನ್ನು ಕಾಪಾಡಿರಿ. ನಾವು ನಿರ್ಗತಿಕರು. ಅವನೇ ನಮ್ಮ ಆಧಾರ ' ಎಂದ. ' ಯಾರು ನಿಮ್ಮ ಮಗ ' ಎಂದು ಕೇಳಿದೆ. ಮಗ ಮಲಗಿದ್ದ ವಾರ್ಡಿಗೆ ನನ್ನನ್ನು ಕರೆದೊಯ್ದು ಅವನನ್ನು ತೋರಿಸಿದರು. ಹುಡುಗನಿಗೆ ಸುಮಾರು ೨೪–೨೫ ವಯಸ್ಸಿರಬಹುದು. ದೃಢಾಳು. ' ಯಶ ವಂತ, ದಾಕ್ತರ್ ಸಾಹೇಬರಿಗೆ ನಮಸ್ಕಾರ ಮಾಡು ' ಎಂದಳು ವೃದ್ಧ ತಾಯಿ. ಯಶವಂತ ಒಂದು ಕೈಯೂರಿಕೊಂಡು ಏಳಲು ಪ್ರಯತ್ನಿಸಿದ. ಅವನು ಏಳಲು ನಾನು ಅವಕಾಶ ಕೊಡಲಿಲ್ಲ. ಒಂದೇ ವಾರದ ಹಿಂದೆ ನಾನೇ ಶಸ್ತ್ರ ಚಿಕಿತ್ಸೆ ನಡೆಸಿ ಅವನ ಬಲಗೈ ಕತ್ತರಿಸಿ ಹಾಕಿದ್ದೆ. ' ನಿಮ್ಮ ಮಗ ಏನು

ಮಾಡುತ್ತಿದ್ದ ' ಎಂದು ವೃದ್ಧನನ್ನು ಕೇಳಿದೆ. ' ಹೋಲ್ಕರ್ ಮಿಲ್ಲಿನಲ್ಲಿ ಕೂಲಿ ಮಾಡುತ್ತಿದ್ದ ' ಎಂದು ವೃದ್ಧ ಹೇಳಿದ. ' ಈ ಅಪಘಾತ ಹೇಗಾಯಿತು ' ಎಂದು ಕೇಳಿದೆ. ಅದಕ್ಕೆ ಯಶವಂತ ಹೇಳಿದ ' ಸರ್ಕಾರ್, ನನಗೆ ಜ್ವರ ಬರುತ್ತಿತ್ತು. ಆದರೂ ಕೆಲಸದ ಮೇಲೆ ಹೋಗುತ್ತಿದ್ದೆ. ಯಂತ್ರ ನಡಸುವಾಗ ಜ್ಞಾನತಪ್ಪಿ ಬಿದ್ದುಬಿಟ್ಟೆ. ಯಂತ್ರಕ್ಕೆ ನನ್ನ ಕೈಸಿಕ್ಕಿಕೊಂಡಿತು. ಈಗ ಮಿಲ್ಲಿನವರು ನನ್ನ ಕೆಲಸದಿಂದ ತೆಗೆದು ಹಾಕಿದರು ' ಎಂದು. ' ಯೋಚನೆ ಮಾಡಬೇಡ ಯಶವಂತ. ನಿನಗೆ ಮಿಲ್ಲಿನಿಂದ ಪರಿಹಾರ ದ್ರವ್ಯ ಕೊಡಿಸುತ್ತೇನೆ ' ಎಂದು ಸಮಾಧಾನ ಹೇಳಿದೆ. ಇಂಥ ಪ್ರಕರಣಗಳು ನೂರಾರು. "

" ನೀವು ಗಟ್ಟಿಯಾಗಿದ್ದರಲ್ಲವೇ ಯಶವಂತನಂಥವರನ್ನು ಕಾಪಾಡುವುದು. "

" ಎಷ್ಟು ದಿನ ಬದುಕಿದ್ದರೂ ಒಂದು ದಿನ ಸಾಯಬೇಕಲ್ಲವೇ ? ಸ್ವಾರ್ಥಜೀವನ ನಡೆಸುತ್ತಾ ಕ್ಷುದ್ರ ಸಾವು ಪಡೆಯುವುದಕ್ಕಿಂತ ಹತ್ತು ಜನಕ್ಕೆ ಉಪಕಾರಿಯಾಗಿದ್ದು ವೀರಸಾವು ಪಡೆಯುವುದು ಲೇಸಲ್ಲವೇ ? "

ಕಲ್ಯಾಣಮ್ಮನವರ ಬಾಯಲ್ಲಿ ಮಾತು ಹೊರಡಲಿಲ್ಲ. ' ಧರ್ಮದೇವತೆಯೇ ನನ್ನ ಪತಿಯಾಗಿದ್ದಾನೆಯೇ ' ಎಂದಾಕೆ ವಿಚಾರ ಮಾಡತೊಡಗಿದರು.

## ೩

ಡಾಕ್ಟರ್ ಶೇಷಗಿರಿರಾಯರು ಇಂದೂರಿಗೆ ಬಂದು ಎರಡು ವರ್ಷಗಳಾಗಿದ್ದವು. ಈ ಅವಧಿಯಲ್ಲಿ ನೂರಾರು ಆಸ್ಪತ್ರೆಗಳನ್ನು ಸ್ಥಾಪಿಸಿದ್ದರು. ಆಸ್ಪತ್ರೆ ಸ್ಥಾಪಿಸಲಾಗದೆಡೆಗಳಲ್ಲಿ ' ಪ್ರವಾಸ ಆಸ್ಪತ್ರೆ ' ( Itinevant Hospital ) ವಾರಕ್ಕೊಮ್ಮೆ ಹೋಗಿ ಬರುತ್ತಿತ್ತು.

ಶ್ರೀಧರ ಮುಂಬಯಿಯಲ್ಲಿ ತನ್ನ ಮೆಡಿಕಲ್ ಕೋರ್ಸ್ ಮುಗಿಸಿಕೊಂಡು ವಿಯನ್ನಾದಲ್ಲಿ ವಿದ್ಯೆ ಮುಂದುವರಿಸುತ್ತಿದ್ದ.

ಕಲ್ಯಾಣಮ್ಮನವರ ಆರೋಗ್ಯ ಸುಧಾರಿಸುವುದರ ಬದಲು ಹೆಚ್ಚು ಚಿಂತಾಜನಕವಾಯಿತು. 'ನನ್ನ ಹೆಂಡತಿಯ ಕಾಹಿಲೆಯನ್ನೇ ನಾನು ವಾಸಿ ಮಾಡಲಾರೆನಲ್ಲಾ' ಎಂದು ಡಾಕ್ಟರು ಕೊರಗಲಾರಂಭಿಸಿದರು.

ತಾವು ಹೆಚ್ಚು ಕಾಲ ಬದುಕುವುದು ಸಾಧ್ಯವಿಲ್ಲವೆಂದು ಕಲ್ಯಾಣಮ್ಮನವರ ಮನಸ್ಸಿಗೆ ಖಂಡಿತವಾಯಿತು. ತಾವು ಕಣ್ಣು ಮುಚ್ಚುವ ಮುನ್ನ ವಸುಂಧರಾ, ಶ್ರೀಧರ ಮತ್ತು ಕಲ್ಪನೆಯ ಮದುವೆ ಮುಗಿಸಿ ಬಿಡಲು ಅವರು ಆತುರರಾದರು.

ಕಲ್ಯಾಣಮ್ಮನವರ ಸಮೀಪ ಬಂಧುಗಳು ಸೀತಾರಾಮಯ್ಯನವರ ಮಗ ಶ್ರೀನಿವಾಸ ಇಂಜನಿಯರಿಂಗ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಮೈಸೂರಿನಲ್ಲಿ ಅಸಿಸ್ಟೆಂಟ್ ಇಂಜನಿಯರಾಗಿದ್ದ. ಅವನಿಗೇ ವಸುಂಧರೆಯನ್ನು ಕೊಡುವುದೆಂದು ಕಲ್ಯಾಣಮ್ಮನವರು ಮೊದಲಿಂದಲೂ ಲೆಕ್ಕ ಹಾಕಿಕೊಂಡಿದ್ದರು.

" ಏಪ್ರಿಲ್ ಮೊದಲನೆಯ ವಾರದಲ್ಲಿ ವಸುಂಧರಾ ಪರೀಕ್ಷೆ ಮುಗಿಸಿಕೊಂಡು ಬರುತ್ತಾಳೆ. ಆಗ ಬರುವಂತೆ ಸೀತಾರಾಮಯ್ಯನವರಿಗೆ ಬರೆಯಿರಿ. ಕುಟುಂಬ ಸಮೇತರಾಗಿ ಅವರು ಎಪ್ರಿಲ್ ತಿಂಗಳಲ್ಲಿಯೇ ಬರಲಿ. ಲಗ್ನ ನಿಶ್ಚಯಿಸೋಣ. "

ಎಂದು ಗಂಡನಿಗೆ ಹೇಳಿದರು.

ಡಾಕ್ಟರು ಹೆಂಡತಿಯ ಮಾತು ಮೀರಲಾರದೆ ಸೀತಾರಾಮಯ್ಯನವರಿಗೆ ಪತ್ರ ಬರೆದರು. ಸೀತಾರಾಮಯ್ಯನವರು ಮೇ ತಿಂಗಳಿನಲ್ಲಿ. ಪತ್ನೀ ಪುತ್ರ ಸಮೇತ ಇಂದೂರಿಗೆ ಬರುವುದಾಗಿ ಉತ್ತರವಿತ್ತರು.

ಸೀತಾರಾಮಯ್ಯನವರ ಕಾಗದವನ್ನು ಹೆಂಡತಿಯ ಕೈಯಲ್ಲಿಟ್ಟು ಡಾಕ್ಟರು ಕೇಳಿದರು

" ಒಂದುವೇಳೆ ಗಂಡಿನವರಿಗೆ ಹೆಣ್ಣು ಮೆಚ್ಚುಗೆಯಾಗಿ ಅವರು ಈಗಲೇ ಲಗ್ನ ಮಾಡಿಕೊಡಿ ಎಂದರೇನು ಮಾಡುವುದು ? "

" ಏನು ಮಾಡುವುದು ಎಂದರೆ ಲಗ್ನಮಾಡಿ ಕೊಡುವುದು. "

" ಲಗ್ನ ಮಾಡಲೇ ಬೇಕು – ಅದು ಅನಿವಾರ್ಯ. ಆದರೆ ಇನ್ನೂ ಒಂದೆರಡು ವರ್ಷ ವಸುಂಧರಾ ಸಂಗೀತ ಕಲಿಯಬೇಕೆಂದು ನನ್ನ ಇಚ್ಛೆ. "

" ಲಗ್ನವಾದ ಮೇಲೆ ಸಂಗೀತ ಕಲಿಯಬಾರದೇ. ಮೈಸೂರಿನ ತುಂಬ ಸಂಗೀತ ವಿದ್ವಾಂಸರಿದ್ದಾರೆ. ವಸುಂಧರಾ ಅಲ್ಲಿಯೇ ಕಲಿಯುತ್ತಾಳೆ. "

" ಸಂಸಾರ ಗಂಟುಬಿದ್ದ ಮೇಲೆ ವಿದ್ಯೆ ಸಾಗುವುದೇ ಕಲ್ಯಾಣಿ. ಶ್ರೀಧರ ಬರದೆ ನಾವು ಲಗ್ನ ಮಾಡುವುದು ನ್ಯಾಯವೇ ? "

" ಸೀತಾರಾಮಯ್ಯನವರು ಬಂದಮೇಲೆ ನಿಶ್ಚಿತಾರ್ಥವಾಗಲಿ. ಲಗ್ನ ಬೇಕಾದರೆ ಮುಂದಿನ ವರ್ಷ ಮಾಡೋಣ. ಆ ವೇಳೆಗೆ ಶ್ರೀಧರನೂ ಬಂದಿರುತ್ತಾನೆ. ಆ ವೇಳೆಗೆ ಶ್ರೀಧರನಿಗೂ ಹೆಣ್ಣು ಗೊತ್ತು ಮಾಡಿ ಅವನ ಮದುವೆಯನ್ನೂ ಮುಗಿಸಬಹುದು. "

ಕಲ್ಯಾಣಮ್ಮನವರ ಸಲಹೆ ಯೋಗ್ಯವೆಂದು ಡಾಕ್ಟರಿಗೆ ಕಂಡುಬಂದುದರಿಂದ ಅವರದನ್ನು ಒಪ್ಪಿಕೊಂಡರು.

ಪರೀಕ್ಷೆ ಮುಗಿಸಿಕೊಂಡು ವಸುಂಧರಾ ಮಾರ್ಚಿ ತಿಂಗಳು ಕೊನೆಗೆ ಇಂದೂರಿಗೆ ಬಂದಳು. ಸೀತಾರಾಮಯ್ಯನವರು, ಅವರ ಮಗ ಬರುವ ವಿಷಯವನ್ನು ತಾಯಿ ಸೂಕ್ಷ್ಮವಾಗಿ ವಸುಂಧರೆಗೆ ತಿಳಿಸಿದಳು.

ವಸುಂಧರಾ ತನ್ನ ಸಂಗೀತ ಮುಂದುವರಿಸಲು ಆತುರಳಾದಳು. ಅವಳ ಉತ್ಸಾಹಭಂಗವಾಗದಂತೆ ಡಾಕ್ಟರು ಕೂಡಲೆ ಪಂಡಿತ ವಿಷ್ಣುಶಾಸ್ತ್ರಿಗಳನ್ನು ಬರಮಾಡಿಕೊಂಡು ಸಂಗೀತ ಪಾಠ ಆರಂಭ ಮಾಡಿಸಿದರು.

ವಿಷ್ಣುಶಾಸ್ತ್ರಿಗಳವರದು ವೀಣೆಗೆ ಹೆಸರಾದ ಮನೆತನ. ಅವರ ತಂದೆ ಭಾವೂಶಾಸ್ತ್ರಿಗಳು ಬರೋಡ, ಗ್ವಾಲಿಯರ್, ಮೈಸೂರು ಸಂಸ್ಥಾನಗಳಿಗೆ ಹೋಗಿ ವೀಣೆ ಕಛೇರಿ ಮಾಡಿ ಮಾನ ಸನ್ಮಾನಗಳನ್ನು ದೊರಕಿಸಿಕೊಂಡಿದ್ದರು. ವಿಷ್ಣುಶಾಸ್ತ್ರಿಗಳಿಗೆ ಮೈಸೂರಿನ ಶೇಷಣ್ಣನವರು, ಸುಬ್ಬಣ್ಣನವರ ಪರಿಚಯ ಚೆನ್ನಾಗಿತ್ತು.

ವಿಷ್ಣುಶಾಸ್ತ್ರಿಗಳವರಲ್ಲಿ ವಸುಂಧರಾ ವೀಣೆಯ ಪಾಠ ಆರಂಬಿಸಿದಳು. ವಸುಂಧರೆಗೆ ಸಾಕಷ್ಟು ಸಂಗೀತ ಪರಿಶ್ರಮವಿದ್ದುದರಿಂದ ಪಂಡಿತರಿಗೆ ಹೆಚ್ಚು ಶ್ರಮವಾಗುತ್ತಿರಲಿಲ್ಲ. ಮೊಟಗೆ ಕೈ ಹದವಾಗಬೇಕಾಗಿತ್ತು. ಶಾಸ್ತ್ರಿಗಳು ಪ್ರತಿನಿತ್ಯ ತಪ್ಪದೆ ಪಾಠಕ್ಕೆ ಬಂದು ಜೋಡು ವೀಣೆಯನ್ನಿಟ್ಟುಕೊಂಡು ಎರಡು ಮೂರು ಗಂಟೆಯ ಕಾಲ ಸತತವಾಗಿ ಅಭ್ಯಾಸ ಮಾಡಿಸತೊಡಗಿದರು.

ಅಕ್ಕ ವೀಣೆ ಕಲಿಯುವುದನ್ನು ನೋಡಿದ ಮುದ್ದು ಕಲ್ಪನಾ ತಾನು

ನಾಟ್ಯ ಕಲಿಯಬೇಕೆಂದು ಹಟ ಹಿಡಿದಳು.

ಕಥಕ ಸಂಪ್ರದಾಯದ ನಾಟ್ಯದಲ್ಲಿ ಖ್ಯಾತಿ ಪಡೆದಿದ್ದ ಶಂಭು ಮಹಾರಾಜನನ್ನು ನಾಟ್ಯ ಕಲಿಸಲಿಕ್ಕೆ ಡಾಕ್ಟರು ಗೊತ್ತು ಮಾಡಿದರು.

ಮೇ ತಿಂಗಳಲ್ಲಿ ಸೀತಾರಾಮಯ್ಯನವರು ಪತ್ನೀಪುತ್ರ ಸಮೇತರಾಗಿ ಇಂದೂರಿಗೆ ಬಂದರು. ನಾಲ್ಕು ದಿನಗಳ ವಿಶ್ರಾಂತಿ, ನಗರ ಪರ್ಯಟನ ಮುಗಿದ ಮೇಲೆ ಒಂದು ದಿನ ಡಾಕ್ಟರು ಮಾತು ತೆಗೆದರು. ಸೀತಾರಾಮಯ್ಯನವರು ಸಂತೋಷವಾಗಿ ತಮ್ಮ ಒಪ್ಪಿಗೆ ಸೂಚಿಸಿದರು.

ಭಾವೀ ಬೀಗರಿಗೆ ಸೊಗಸಾದ ಔತಣವೂ ಆಯಿತು. ಮದುವೆ ಮುಂದಿನ ವೈಶಾಖಕ್ಕೆ ನೆರವೇರಿಸುವುದೆಂದೂ ನಿಶ್ಚಯವಾಯಿತು. ಕಲ್ಯಾಣಮ್ಮನವರು ಮೆಲ್ಲನೆ

" ಹಾಗೇ ನಮ್ಮ ಶ್ರೀಧರನಿಗೂ ಮದುವೆ ಮಾಡಿ ಬಿಡಬೇಕೆಂದಿದ್ದೇವೆ. ನಿಮಗೆ ತಿಳಿದ ಹಾಗೆ ಒಳ್ಳೆಯ ಸಂಬಂಧಗಳಿವೆಯೇ " ಎಂದು ಕೇಳಿದರು.

" ನಮ್ಮ ಪೈಕಿಯದೇ ಒಂದು ಹುಡುಗಿಯಿದೆಯಮ್ಮ. ಅದು ನಿಮ್ಮ ಮಗನಿಗೆ ಸರಿಹೋಗಬಹುದೆಂದು ಕಾಣುತ್ತದೆ. ಹುಡುಗಿ ಗೌರಮ್ಮನ ಹಾಗಿದೆ. ಬಿ. ಎ. ಕ್ಲಾಸಿನಲ್ಲಿ ಓದುತ್ತಿದೆ. ಮನೆತನವೂ ಒಳ್ಳೆಯದು. ಹುಡುಗಿಯ ತಂದೆ ರೈಸ್ ಮಿಲ್ ಇಟ್ಟುಕೊಂಡಿದ್ದಾರೆ. ಲೇವಾದೇವಿ ಮಾಡುತ್ತಾರೆ. ಸಾಕಷ್ಟು ಗಳಿಸಿ ಶ್ರೀಮಂತರಾಗಿದ್ದಾರೆ. ಒಬ್ಬಳೇ ಮಗಳೆಂದು ಅಕರಾಸ್ತೆಯಾಗಿ ಸಾಕಿದ್ದಾರೆ. "

" ಬಡವರ ಮನೆಯ ಹುಡುಗಿಯಾದರೂ ಚಿಂತೆಯಿಲ್ಲ. ದೊಡ್ಡವರ ಮನೆ ಹುಡುಗಿಯನ್ನು ನಾವು ಪೂರೈಸುವುದಕ್ಕಾಗುವುದೇನಪ್ಪಾ. "

" ಹಾಗೇನಿಲ್ಲಮ್ಮ. ಹಿರಣ್ಯಯ್ಯನವರು ಈಗ ಶ್ರೀಮಂತರಾಗಿದ್ದರೂ ಬಡತನ ಕಂಡವರು. ಇಂದಿಗೂ ಶ್ರೀಮಂತಿಕೆಯ ಅಟ್ಟಹಾಸಕ್ಕೆ ಹೋಗದೆ ಸಾಧಾರಣ ಜೀವನವನ್ನೇ ನಡಸುತ್ತಿದ್ದಾರೆ. ತುಂಬ ಸಾತ್ವಿಕರು – ಭಗವದ್ಭಕ್ತರು. ಇವತ್ತಿಗೂ ಎಷ್ಟೇ ಅಡ್ಡಿ ಆಪತ್ತುಗಳಿದ್ದರೂ ತ್ರಿಕಾಲಸಂಧ್ಯೆ ಪೂಜೆಗಳನ್ನು ನಿಲ್ಲಿಸುವುದಿಲ್ಲ. ಮಗಳು ಸುಂದರಿಯನ್ನೂ ಹಾಗೇ ಬೆಳಸಿದ್ದಾರೆ. ಆ ಹುಡುಗಿ ರೂಪದಲ್ಲಿಯೂ ಸುಂದರಿ – ಗುಣದಲ್ಲಿಯೂ ಸುಂದರಿ. ನಾನು ತಿಳಿದಮಟ್ಟಿಗೆ ಈ ಸಂಬಂಧ ನಿಮಗೆ ಒಪ್ಪಿಗೆಯಾಗುತ್ತದಮ್ಮ. "

"ಹುಡುಗೀಗೆ ಸಂಗೀತ ಹೇಳಿಸಿದ್ದಾರೆಯೋ?"

ಎಂದು ಡಾಕ್ಟರು ಕೇಳಿದರು.

"ಮೈಸೂರು ಲಕ್ಷ್ಮೀನಾರಣಪ್ಪನವರ ಹೆಸರು ನೀವು ಕೇಳಿರಬಹುದು. ಘನ ವಿದ್ವಾಂಸರು. ಅವರು ಸುಂದರಮ್ಮನಿಗೆ ಮೂರು ವರ್ಷ ವೀಣೆ ಪಾಠ ಹೇಳಿದ್ದಾರೆ. ಸೊಗಸಾಗಿ ವೀಣೆ ನುಡಿಸಿಕೊಂಡು ಹಾಡುತ್ತಾಳೆ. ಜಾತಕಾನುಕೂಲವಾದರೆ ಇದು ಸೊಗಸಾದ ದಾಂಪತ್ಯವಾಗುತ್ತದೆ."

"ಹಿರಣ್ಯಯ್ಯನವರಿಗೆ ಜಾತಕದಲ್ಲಿ ಅಷ್ಟು ನಂಬಿಕೆಯೇ?"

"ಹೇಳಿದೆನಲ್ಲಾ— ಅವರು ಸ್ವಲ್ಪ ಹಳೆಯ ಕಾಲದ ಮನುಷ್ಯರು. ಪಂಚಾಂಗ ನೋಡದೆ ಅವರು ಯಾವ ಕೆಲಸವನ್ನೂ ಮಾಡುವುದಿಲ್ಲ."

"ನನ್ನ ಮಗ ವಿಲಾಯತಿಯಿಂದ ಬರುತ್ತಾನಲ್ಲಾ ಸೀತಾರಾಮಯ್ಯನವರೇ."

"ಅದೇನು ಸ್ವಾಮಿ — ಪ್ರಾಯಶ್ಚಿತ್ತ ಮಾಡಿಕೊಂಡು ಪಂಚಗವ್ಯ ತೆಗೆದುಕೊಂಡರಾಯಿತು."

ಅವರ ಮಾತಿಗೆ ಡಾಕ್ಟರು ನಕ್ಕರು.

"ನಿಮ್ಮ ಮಗನ ಜಾತಕವಿದೆಯೇ?"

"ಇದೆ— ನಾನು ಕೊಡುತ್ತೇನೆ."

ಎಂದು ಕಲ್ಯಾಣಮ್ಮನವರು ಹೇಳಿದರು.

ಶ್ರೀನಿವಾಸನಿಗೆ ಹೆಚ್ಚು ರಜವಿಲ್ಲದಿದ್ದುದರಿಂದ ಸೀತಾರಾಮಯ್ಯನವರು ಕೂಡಲೆ ಹೊರಡಬೇಕಾಯಿತು.

೪

ಅದೇ ವರ್ಷ ಡಿಸೆಂಬರ್ ತಿಂಗಳಲ್ಲಿ ಶ್ರೀಧರ ತನ್ನ ಪರೀಕ್ಷೆ ಮುಗಿಸಿಕೊಂಡು ವಿಯನ್ನಾದಿಂದ ಹಿಂದಿರುಗಿದ. ಮುಂದೇನು ಮಾಡುವುದು ಎನ್ನುವ ಪ್ರಶ್ನೆ ಹುಟ್ಟಿಕೊಂಡಿತು.

"ನಾನು ಇಲ್ಲಿಯೇ ಪ್ರೈವೇಟ್ ಪ್ರ್ಯಾಕ್ಟೀಸ್ ಮಾಡುತ್ತೇನೆ ಡ್ಯಾಡಿ."

ಎಂದು ಶ್ರೀಧರ ಹೇಳಿದ.

"ಇಲ್ಲಿ ಬೇಡ ಶ್ರೀಧರ್. ಇಲ್ಲಿನ ಪ್ರೈವೇಟ್ ಪ್ರ್ಯಾಕ್ಟೀಸ್ ಮಾಡುವ ಡಾಕ್ಟರುಗಳಿಗೂ ನನಗೂ ಇರುವ ಮಧುರ ಸಂಬಂಧ ನಿನಗೆ ಗೊತ್ತೇ ಇದೆ. ನನ್ನ ಮೇಲೆ ಅವರಿಗಿರುವ ಆಗ್ರಹವನ್ನು ನಿನ್ನ ಮೇಲೆ ತೀರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ನೀನು ಮುಂಬಯಿಗೋ ಬೆಂಗಳೂರಿಗೋ ಹೋಗಿ ಪ್ರ್ಯಾಕ್ಟೀಸ್ ಆರಂಭಿಸು."

ಎಂದು ಹೇಳಿದರು. ಮಗ ಬೆಂಗಳೂರಿನಲ್ಲಿ ಪ್ರ್ಯಾಕ್ಟೀಸ್ ಮಾಡಬೇಕೆನ್ನುವುದೇ ತಾಯಿಯ ಅಭಿಲಾಷೆಯೂ ಆಗಿತ್ತು.

ಡಾಕ್ಟರು ಹದಿನೈದು ದಿವಸ ರಜಾ ತೆಗೆದುಕೊಂಡು, ಸಂಸಾರದೊಂದಿಗೆ ಬೆಂಗಳೂರಿಗೆ ಹೋದರು. ಅವರ ನೆರವಿಗೆ ಸೀತಾರಾಮಯ್ಯನವರು ಮೈಸೂರಿನಿಂದ ಬಂದರು. ಡಾಕ್ಟರು ಬೆಂಗಳೂರಿನ ವೃತ್ತಿಬಾಂಧವರಲ್ಲಿ ವಿಚಾರಮಾಡಿ ಕಂಟೋನ್ಮೆಂಟಿನಲ್ಲಿ ಪ್ರ್ಯಾಕ್ಟೀಸ್ ಆರಂಭಿಸುವುದೇ ಒಳ್ಳೆಯದೆಂದು ನಿಶ್ಚಯಿಸಿದರು.

ಊರಿನ ನಾನಾ ಭಾಗಗಳಲ್ಲಿದ್ದ ಮನೆಗಳನ್ನು ನೋಡಿ ಕೊನೆಗೆ ಫ್ರೇಸರ್ ಟೌನಿನಲ್ಲಿದ್ದ ವಿಶಾಲ ಆವರಣವನ್ನೊಳಗೊಂಡ ಮನೆಯನ್ನು ಗೊತ್ತುಮಾಡಿಕೊಂಡದ್ದಾಯಿತು. ಸೀತಾರಾಮಯ್ಯನವರು ಮಾಲೀಕನೊಂದಿಗೆ ಮಾತು ಕತೆ ನಡೆಸಿ ನಲವತ್ತು ಸಾವಿರಕ್ಕೆ ಮನೆಯನ್ನು ಕುದುರಿಸಿದರು.

ಆವರಣದಲ್ಲಿ ಎರಡು ಮನೆಗಳಿದ್ದವು. ಒಂದನ್ನು ವಾಸಕ್ಕೂ ಇನ್ನೊಂದನ್ನು ಚಿಕಿತ್ಸಾಲಯಕ್ಕೂ ಅಳವಡಿಸಿಕೊಳ್ಳುವುದೆಂದು ನಿಶ್ಚಯಿಸಲಾಯಿತು. ಚಿಕಿತ್ಸಾಲಯಕ್ಕೆ ಅವಶ್ಯಕವಾದ ಸಾಮುಗ್ರಿಗಳಿಗೆ ಮುಂಬಯಿಗೆ ಬರೆದುದೂ ಆಯಿತು.

ಊರಿಗೆ ಹೊರಡುವ ದಿನ ನಿಶ್ಚಯವಾಗಲು ಡಾಕ್ಟರು ಹೆಂಡತಿಗೆ

"ನೀನೂ ಮಕ್ಕಳೂ ಶ್ರೀಧರನ ಜತೆ ಏಕಿರಬಾರದು."

"ನೀವು........"

"ನಾನು ಇಂದೂರಿಗೆ ಹೋಗುತ್ತೇನೆ."

"ನಿಮ್ಮನ್ನು ಬಿಟ್ಟು ನಾನಿರಲೇ?"

" ಮಗ ಜೀವನ ಆರಂಭಿಸುತ್ತಾನೆ. ಅವನ ಜತೆ ನೀನಿದ್ದರೆ ನನ್ನ ಮನಸ್ಸಿಗೆ ನೆಮ್ಮದಿ. ಬೆಂಗಳೂರಿನ ಹವಾಮಾನದಿಂದ ನಿನ್ನ ಆರೋಗ್ಯವೂ ಸುಧಾರಿಸುತ್ತದೆ. ಕಲ್ಪನೆಯ ವಿದ್ಯಾಭ್ಯಾಸಕ್ಕೂ ಅನುಕೂಲವಾಗುತ್ತದೆ. "

ಕಲ್ಯಾಣಮ್ಮನವರ ಕಣ್ಣಲ್ಲಿ ನೀರು ತುಂಬಿ ಬಂತು. ಸಾವಕಾಶವಾಗಿ ಸಮಾಧಾನ ತಂದುಕೊಂಡು

" ಹೆಚ್ಚು ಕಾಲ ಬದುಕಿರುತ್ತೇನೆಂದು ನಂಬಿಕೆ ನನಗಿಲ್ಲ. ನಾನಿರುವ ವರೆಗೆ ನಿಮ್ಮನ್ನು ಬಿಟ್ಟಿರಲಾರೆ. ಈ ಜನ್ಮದಲ್ಲಿ ನಿಮ್ಮ ಪಾದಸೇವೆ ನನ್ನ ಮನಸ್ಸಿಗೆ ತೃಪ್ತಿಯಾಗುವಂತೆ ಮಾಡಲು ದೇವರು ಅವಕಾಶ ಕೊಡಲಿಲ್ಲ. ನೀವೇ ನನ್ನ ಸೇವೆ ಮಾಡುವಂತಾಯಿತು. ಮುಂದಿನ ಜನ್ಮಕ್ಕಾದರೂ........ "

" ಇದೇನು ಮಾತೆಂದು ಆಡುತ್ತಿರುವೆ ಕಲ್ಯಾಣಿ. ಗಂಡ ಹೆಂಡತಿ ಪರಸ್ಪರ ಯೋಗಕ್ಷೇಮ ನೋಡಿಕೊಳ್ಳಬೇಕಾದುದು ಧರ್ಮ. ನನಗೆ ಯಾವ ಕೊರತೆಯೂ ಇಲ್ಲ. ನನ್ನ ಬಗ್ಗೆ ಭಗವಂತ ನಿಸ್ಸೀಮ ದಯೆ ತೋರಿಸಿದ್ದಾನೆ. ನೀನೂ – ಮಕ್ಕಳು ನನ್ನ ಜೀವ ತುಂಬಿದ್ದೀರಿ. – ನಾವಿಬ್ಬರೂ ನಲವತ್ತು ವರ್ಷ ಸಂಸಾರ ಮಾಡಿದ್ದೇವೆ. ಒಂದು ದಿನ ನೀನು ನನ್ನ ಮನಸ್ಸಿಗೆ ಬೇಸರವನ್ನಾಗಲಿ ನೋವನ್ನಾಗಲಿ ಉಂಟು ಮಾಡಲಿಲ್ಲ – ಮಕ್ಕಳೂ ನಿನ್ನ ಮೇಲ್ಪಂಕ್ತಿಯಲ್ಲೇ ನಡೆದುಕೊಳ್ಳುತ್ತಿದ್ದಾರೆ. "

ಎಂದು ಹೆಂಡತಿಯನ್ನು ಸಮಾಧಾನ ಮಾಡಿ, ಅವರನ್ನೂ ಮಕ್ಕಳನ್ನೂ ಕರೆದುಕೊಂಡು ಇಂದೂರಿಗೆ ಪ್ರಯಾಣ ಬೆಳಸಿದರು.

## ೫

ಡಾಕ್ಟರ್ ಶೇಷಗಿರಿರಾಯರು ಇಂದೂರು ತಲುಪುವ ವೇಳೆಗೆ ಶ್ರೀಮನ್ಮಹಾರಾಜರು ತಮ್ಮ ಅಮೇರಿಕಾ ಪ್ರವಾಸ ಮುಗಿಸಿಕೊಂಡು ಬಂದಿದ್ದರು. ಡಾಕ್ಟರು ಮಹಾರಾಜರನ್ನು ಅರಮನೆಯಲ್ಲಿ ಭೆಟ್ಟಿಯಾಗಿ, ಅವರ ಯೋಗಕ್ಷೇಮ ವಿಚಾರಿಸಿಕೊಂಡು ತಮ್ಮ ಸಂಸಾರದ ಕಥೆಯನ್ನು ಒಪ್ಪಿಸಿದರು.

ಡಾಕ್ಟರ ಮಾತು ಕೇಳಿ ಮಹಾರಾಜರಿಗೆ ಕುಸು ಅಸಮಾಧಾನವೇ ಆಯಿತು.

"ಮಗನನ್ನು ಬೆಂಗಳೂರಿಗೆ ಏಕೆ ಕಳುಹಿಸಿದಿರಿ. ನಮ್ಮ ಸಂಸ್ಥಾನದಲ್ಲಿ ಅವರಿಗೆ ಕೆಲಸ ಕೊಡಬಹುದಾಗಿತ್ತಲ್ಲ." ಎಂದರು.

"ಮಹಾಸ್ವಾಮಿ, ಇಂದೂರಿನ ವೈದ್ಯವೃತ್ತಿ ನನ್ನ ಮಾಲ್ಕಿ ಹಕ್ಕಾಯಿತೆಂದು ಡಾಕ್ಟರುಗಳು ಆಕ್ಷೇಪಿಸುತ್ತಿದ್ದಾರೆ. ನನ್ನ ಮಗನಿಗೂ ಇಲ್ಲಿ ಕೆಲಸ ಕೊಡಿಸಿದರೆ ಅವರ ಅಪಾದನೆಯನ್ನು ನಾನೇ ಸಮರ್ಥಿಸಿದ ಹಾಗಾಗುತ್ತದೆ. ಇದಕ್ಕಾಗಿ ಅವನನ್ನು ಬೆಂಗಳೂರಿಗೆ ಕಳಿಸಬೇಕಾಯಿತು."

ಎಂದು ಉತ್ತರವಿತ್ತರು.

ಒಂದು ವಾರ ಕಳೆದಿರಬಹುದು. ಒಂದು ದಿನ ದಿವಾನಸಾಹೇಬರ ಆಪ್ತಸಚಿವ ಡಾಕ್ಟರ ಬಳಿಗೆ ಬಂದು

"ದಿವಾನಸಾಹೇಬರು ತಮ್ಮಲ್ಲಿ ಏನೋ ಮಾತನಾಡಬೇಕಾಗಿದೆಯಂತೆ. ಸಂಜೆ ಪುರಸತ್ತಿದ್ದರೆ ಡ್ರೈವ್ ಹೋಗಬಹುದೆಂದು ತಿಳಿಸಿದ್ದಾರೆ."

ಎಂದು ಹೇಳಿದ. ಅವಶ್ಯಕವಾಗಿ ಆಗಬಹುದೆಂದು ಡಾಕ್ಟರು ಒಪ್ಪಿಕೊಂಡರು.

ಸಂಜೆಗೆ ದಿವಾನಸಾಹೇಬರು 'ವಸಂತ ಮಹಲ್' ಬಳಿಗೆ ಬಂದು ಕಾರಿನಲ್ಲಿ ಡಾಕ್ಟರನ್ನು ಕರೆದುಕೊಂಡು ಹೋದರು. ಊರಹೊರಗೆ ಐದಾರು ಮೈಲಿ ಕಾರು ಹೋದ ಮೇಲೆ ಅದನ್ನು ನಿಲ್ಲಿಸಿ ದಿವಾನಸಾಹೇಬರು ಡಾಕ್ಟರನ್ನು ಜತೆಯಲ್ಲಿ ಕರೆದುಕೊಂಡು ನಡೆದು ಹೋದರು. ಮುಕ್ಕಾಲು ಮೈಲಿ ದಾಟಿದ ಮೇಲೆ

"ನನ್ನ ನಡತೆ ನಿಮಗೆ ವಿಚಿತ್ರವಾಗಿ ಕಾಣಬರುತ್ತಿದೆಯಲ್ಲವೇ ಡಾಕ್ಟರೇ?" ಎಂದು ಕೇಳಿದರು.

"ವಿಷಯ ಬಹಳ ರಹಸ್ಯವಾದ್ದು ಎಂದೆನಿಸುತ್ತಿದೆ."

"ಹೌದು. ನಿಮ್ಮೊಬ್ಬರಲ್ಲಿಯೇ ನಾನು ಮನಸ್ಸು ಬಿಚ್ಚಿ ಮಾತನಾಡಲು ಸಾಧ್ಯ. ಊರಿನಲ್ಲಿ ಗೋಡೆಗಳಿಗೂ ಕಿವಿಗಳಿವೆ. ಅದಕ್ಕಾಗಿ ಇಷ್ಟು ದೂರ ಬರಬೇಕಾಯಿತು."

"ಹೇಳಿ ದಿವಾನಸಾಹೇಬ."

"ವಸಂತ ಮಹಲ್ ನಿಮಗನುಕೂಲವಾಗಿದೆಯೇ?"

" ಹೊಸದಾಗಿ ಕೇಳುತ್ತಿರುವಿರಲ್ಲ. ನನ್ನ ವಸತಿಯ ಬಗ್ಗೆ ನಾನು ಯಾವಾಗಲೂ ಆಕ್ಷೇಪವೆತ್ತಿಲ್ಲ. "

" ಹೌದು. "

" ದೀಪಕ್ ಮ್ಯಾನ್ಷನ್ಸ್ ( Deepak Mansions ) ಇಷ್ಟೇ ಚೆನ್ನಾಗಿದೆ. "

" ನಿಮ್ಮ ಮಾತು ನನಗರ್ಥವಾಗುತ್ತಿಲ್ಲ. "

" ನೀವು ' ವಸಂತ ಮಹಲ್ ' ಬಿಟ್ಟು, ' ದೀಪಕ್ ಮ್ಯಾನ್ಷನ್ಸ್ ' ಗೆ ಹೋಗಿರಬೇಕೆಂದು ಮಹಾರಾಜರ ಅಪ್ಪಣೆಯಾಗಿದೆ. "

" ದೀಪಕ್ ಊರ ಹೊರಗಿದೆ – ಅರಮನೆಗೂ ದೂರ, ಜನರಲ್ ಆಸ್ಪತ್ರೆಗೂ ದೂರ. ಮಹಾರಾಜರ ಅಪ್ಪಣೆ ಮೀರಬೇಕೆಂದು ನನ್ನ ಇಚ್ಛೆಯಿಲ್ಲ – ಆದರೆ ದೀಪಕ್ ಮ್ಯಾನ್ಷನ್ಸಿಗೆ ಹೋಗುವುದರಿಂದ ನನ್ನ ಕೆಲಸಕ್ಕೆ ತುಂಬ ಅಡಚಣೆಯಾಗುತ್ತದೆ. "

" ನೀವು ಹೇಳುವುದು ಸತ್ಯ ಡಾಕ್ಟರೇ – ಆದರೇನು ಮಾಡಲಿ ಮಹಾರಾಜರ ಅಪ್ಪಣೆ ಹಾಗಿದೆ. "

" ಇದರ ಕಾರಣವೇನೆಂದು ಕೇಳಬಹುದೇ ? "

" ನಿಮ್ಮಲ್ಲಿ ಕಾರಣ ಹೇಳುತ್ತೇನೆ – ಆದರೆ ಈ ರಹಸ್ಯ ನಮ್ಮಿಬ್ಬರಲ್ಲೇ ಇರಬೇಕು. "

" ತಮ್ಮ ರಹಸ್ಯ ನನ್ನಿಂದ ಕಾಪಾಡಲ್ಪಡುವುದೆಂಬ ನಂಬಿಕೆಯಿದ್ದರೆ ಹೇಳಬಹುದು. "

" ಮಹಾರಾಜರ ಅಮೇರಿಕಾ ಪ್ರವಾಸ ಯಶಸ್ವಿಯಾಗಿ ನಡೆಯಿತು. "

" ಖರ್ಚೆಷ್ಟು ಬಂತು ? "

" ಹದಿಮೂರು ಲಕ್ಷ. "

" ನನ್ನ ನಿಯೋಜನೆ ಮುಳುಗಿದ ಹಾಗೇ. "

" ಭಂಡಾರದಲ್ಲಿ ಬಿಡಿ ಕಾಸಿಲ್ಲ. ಸಾಲ ತೆಗೆದುಕೊಳ್ಳದಿದ್ದರೆ ಮುಂದಿನ ತಿಂಗಳು ಸಂಬಳ ಕೊಡುವುದಕ್ಕೂ ಮಾರ್ಗವಿಲ್ಲ. ಇಷ್ಟು ಸಾಲದೆಂದು ಮಹಾರಾಜರು ಅಮೇರಿಕಾದಿಂದ ಬರುವಾಗ ಒಬ್ಬ ಡಾಕ್ಟರನ್ನು ಕರೆದು ಕೊಂಡು ಬಂದಿದ್ದಾರೆ. "

" ಯಾರವರು ? "

" ಡಾ. ಮಿಸ್. ವೈಟ್ ( Dr. Miss White ) ಅವರನ್ನು ಲೇಡಿ ಸೀನಿಯರ್ ಸರ್ಜನ್ ( Lady Senior Surgeon ) ಆಗಿ ನಿಯಾಮಕ ಮಾಡುವವರಿದ್ದಾರೆ. "

" ಬಹಳ ಸಂತೋಷ. ನನ್ನ ಹೊರೆ ಅರ್ಧ ಕಡಿಮೆಯಾದಂತಾಯಿತು. "

" ನಿಮ್ಮ ಹೊರೆ ಕಡಿಮೆಯಾಗುವುದಿಲ್ಲ ಡಾಕ್ಟರೇ. ಮಿಸ್. ವೈಟ್ ರವರ ವಯಸ್ಸು ಎಷ್ಟಿರಬಹುದು ಊಹಿಸಿ. "

" ನಲವತ್ತು ಐವತ್ತು ಇರಬಹುದು. "

" ಇಪ್ಪತ್ತುಮೂರೋ ಇಪ್ಪತ್ತುನಾಲ್ಕೋ. ಆಕೆ ಇದೇ ಮೆಡಿಕಲ್ ಕಾಲೇಜಿನಿಂದ ಹೊರಬಿದ್ದಿದ್ದಾಳೆ. ಸ್ವಲ್ಪವೂ ಅನುಭವವಿಲ್ಲ. "

" ಆಗಲಿ – ದೊಡ್ಡವರಿಗೆ ವಿವೇಕ ಹೇಳಲು ಯಾರಿಗೆ ಸಾಧ್ಯ. "

" ಮಿಸ್. ವೈಟ್ ತಮ್ಮ ಸಮೀಪದಲ್ಲಿರಬೇಕೆಂದು, ಅವರಿಗೆ ' ವಸಂತ ಮಹಲ್ ' ಕೊಡಲು ಮಹಾರಾಜರು ನಿರ್ಧರಿಸಿದ್ದಾರೆ. "

" ನಾನೇನು ಮಾಡಬೇಕು ತಾವೇ ಹೇಳಿ – ತಮ್ಮ ಸೂಚನೆಯಂತೆ ನಡೆದುಕೊಳ್ಳಲು ನಾನು ಸಿದ್ಧನಾಗಿದ್ದೇನೆ. "

" ಇದು ತಮ್ಮ ಆತ್ಮಗೌರವಕ್ಕೆ ಸಂಬಂಧಪಟ್ಟ ಪ್ರಶ್ನೆ ಡಾಕ್ಟರೇ. ನಿಷ್ಕಾರಣವಾಗಿ ನಿಮ್ಮನ್ನು ವಸಂತ ಮಹಲಿನಿಂದ ಹೊರಗೆ ಹಾಕುವುದೆಂದರೆ ನಿಮ್ಮ ಘನತೆಯನ್ನು ನೆಲಸಮ ಮಾಡಿದಂತಾಗುತ್ತದೆ. "

" ದಿವಾನಸಾಹೇಬ, ನನ್ನ ಮಗ ಬೆಂಗಳೂರಿನಲ್ಲಿ ಪ್ರಾಕ್ಟೀಸ್ ಆರಂಭಿಸಿರುವುದು ತಮಗೆ ಗೊತ್ತಿದೆಯಲ್ಲಾ........ "

" ಗೊತ್ತಿದೆ. "

" ನನಗೂ ವಯಸ್ಸಾಗುತ್ತ ಬಂತು. ನಾಲ್ಕು ವರ್ಷ ಅವನ ಜತೆಯಲ್ಲಿದ್ದುಕೊಂಡು ಅವನಿಗೆ ನೆರವಾಗುವುದು ನನ್ನ ಧರ್ಮ. "

" ಅಂದರೆ ಕೆಲಸ ಬಿಟ್ಟುಬಿಡುತ್ತೀರಾ ? "

" ಆತ್ಮಗೌರವವುಳ್ಳ ಯಾವನಾದರೂ ಇನ್ನೇನು ಮಾಡಲು ಶಕ್ಯ. "

" ನಿಮ್ಮ ಯೋಜನೆಗಳು........ "

"ಆ ನೊಗ ನನ್ನ ಹೆಗಲ ಮೇಲೆ ಹೇರಿದವನು ಭಗವಂತ. ಅವನೇ ಅದನ್ನು ದಕ್ಷರಾದವರಿಗೆ ವಹಿಸುತ್ತಾನೆ. ನೀವು ಇರುವಾಗ ನನ್ನ ಯೋಜನೆಗಳ ಬಗ್ಗೆ ನಾನು ಯೋಚಿಸಬೇಕಾಗಿಲ್ಲ."

"ಡಾಕ್ಟರ್ ಸಾಹೇಬ್, ಮುಖಸ್ತುತಿ ಮಾಡುತ್ತಿದ್ದೇನೆಂದು ತಾವು ಭಾವಿಸಬಾರದು. ನಾನಾಗಲಿ ಯಾರಾಗಲಿ ತಾವು ಮಾಡಿರುವ ಕೆಲಸ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಪ್ರತ್ಯಕ್ಷ ನರಕವಾಗಿದ್ದ ಈ ಸಂಸ್ಥಾನವನ್ನು ಮನುಷ್ಯರ ವಾಸಕ್ಕೆ ಯೋಗ್ಯವಾಗುವಂತೆ ಮಾಡಿದವರು ತಾವು. ತಮ್ಮ ಮನಸ್ಸು ನೋಯಿಸಿ, ಕಳಿಸಿ ಕೊಡುವುದೆಂದರೆ ನಾವು ಮಾಡುತ್ತಿರುವ ಅಕೃತ್ಯಗಳ ಪರಮಾವಧಿ."

"ಖಂಡಿತವಾಗಿ ನಾನು ಮನಸ್ಸು ಚಿಕ್ಕದು ಮಾಡಿಕೊಳ್ಳುವುದಿಲ್ಲ ದಿವಾನ್ ಸಾಹೇಬ್. ತಾವು ದುಃಖಪಡಬೇಡಿ. ನನ್ನ ಸೌಭಾಗ್ಯವತಿಯವರ ಆರೋಗ್ಯ ಚೆನ್ನಾಗಿಲ್ಲ. ಬೆಂಗಳೂರಿನ ವಾಸದಿಂದ ಅವರು ನಾಲ್ಕು ದಿನ ಬದುಕಬಹುದು – ಭಗವಂತನೇ ನನಗೆ ದಾರಿ ತೋರಿಸಿದ್ದಾನೆ. ಬೆಂಗಳೂರಿಗೆ ಹೋಗಿಬಿಡೋಣ ಎಂದು ಅವರು ಹಿಂದೆಯೇ ಹೇಳಿದರು – ಆಗ ಅವರ ಮಾತು ಕೇಳದೆ ನಾನು ತಪ್ಪು ಮಾಡಿದೆ."

ಎಂದರು. ಇಬ್ಬರೂ ಮೌನವಾಗಿ ಕಾರಿಗೆ ಹಿಂದಿರುಗಿ ಮನೆ ಸೇರಿದರು.

ಮಾರನೆಯ ದಿನವೇ ಡಾಕ್ಟರು ತಮ್ಮ ರಾಜೀನಾಮೆ ಪತ್ರವನ್ನು ಮಹಾರಾಜರಿಗೆ ಕಳಿಸಿಕೊಟ್ಟು 'ಕೂಡಲೆ ನಿವೃತ್ತಿ ಮಾಡಬೇಕೆಂದು' ಪ್ರಾರ್ಥಿಸಿಕೊಂಡರು.

ಡಾಕ್ಟರು ಕೆಲಸಕ್ಕೆ ರಾಜೀನಾಮೆಯಿತ್ತ ವಿಷಯ ಕೇಳಿ ಕಲ್ಯಾಣಮ್ಮನವರಿಗೆ ಆನಂದವಾಯಿತು. ತನ್ನ ಸಂಗೀತ ಪಾಠ ಅರ್ಧಕ್ಕೆ ನಿಂತುಹೋಗುವುದಲ್ಲ ಎಂದು ವಸುಂಧರೆಗೆ ಯೋಚನೆಯಾಯಿತು. ತನ್ನ ನಾಟ್ಯಪಾಠ ನಿಂತುಹೋಗುವುದಲ್ಲ ಎಂದು ಕಲ್ಪನಾ ಮರುಗಿದಳು.

ಡಾಕ್ಟರ ರಾಜೀನಾಮೆ ಪತ್ರ ಸ್ವೀಕೃತವಾಗುವುದಕ್ಕೆ ತಡವಾಗಲಿಲ್ಲ. ಡಾ. ಮಿಸ್. ವೈಟ್ ಅವರಿಗೆ ಅಧಿಕಾರ ಸೂತ್ರ ಒಪ್ಪಿಸಿ ಕೊಡಬೇಕೆಂದು ಮಹಾರಾಜರಿಂದ ನಿರೂಪ ಬಂದಿತು.

ಇಂದೂರು ಬಿಡುವ ಮುನ್ನ ಡಾಕ್ಟರ ಮನಸ್ಸು ಮಿಶ್ರ ಭಾವನೆಗಳಿಂದ ಕೂಡಿತು. ತಾವು ಆರಂಭಿಸಿದ ಕೆಲಸವನ್ನು ಅರ್ಧಕ್ಕೇ ಬಿಟ್ಟು ಹೋಗ ಬೇಕಲ್ಲ ಎನ್ನುವ ದುಃಖ ಒಂದು ಕಡೆ; ಬೆಂಗಳೂರಿನಲ್ಲಿ ಮಗನ ಜತೆಯಲ್ಲಿರ ಬಹುದು – ಹೆಂಡತಿಯ ಆರೋಗ್ಯವೂ ಸುಧಾರಿಸುತ್ತದೆ ಎನ್ನುವ ಸಂತೋಷ ಇನ್ನೊಂದು ಕಡೆ.

ಡಾಕ್ಟರು ಹೊರಟು ಹೋಗುವ ಸುದ್ದಿ ಊರಿನಲ್ಲಿ ಕಾಳ್ಗಿಚ್ಚಿನಂತೆ ವ್ಯಾಪಿಸಿತು. ಡಾಕ್ಟರ ಚಿಕಿತ್ಸೆಯಿಂದ ಗುಣ ಹೊಂದಿದವರು, ಅವರಿಂದ ಉಪಕೃತರಾದವರು ಮರಗುವುದಂತಿರಲಿ – ಅವರ ಸುಧಾರಣೆಗಳನ್ನು ವಿರೋಧಿಸಿದ ಅಧಿಕಾರಿಗಳೂ, ಡಾಕ್ಟರುಗಳೂ ಮಮ್ಮಲ ಮರುಗಿದರು. ಅವರ ತ್ಯಾಗಪೂರ್ಣ, ನಿಸ್ವಾರ್ಥಕ ಜೀವನ ಎಲ್ಲರೆದುರಿಗೂ ಬಂದು ನಿಂತಂತಾಯಿತು.

ಡಾಕ್ಟರಿಗೆ ಯೋಗ್ಯ ರೀತಿಯಲ್ಲಿ ಸತ್ಕಾರ ಮಾಡಿ, ಅವರನ್ನು ರಾಜ ವೈಭವದಲ್ಲಿ ಬೀಳ್ಕೊಡಬೇಕೆಂದು ಜನ ಮನಸ್ಸು ಮಾಡಿದರು. ಡಾಕ್ಟರಿಗೆ ಸುದ್ದಿ ತಿಳಿದ ಕೂಡಲೆ 'ನಾನು ಯಾವ ಸತ್ಕಾರವನ್ನೂ ಒಪ್ಪಿಕೊಳ್ಳುವುದಿಲ್ಲ. ನಿಮ್ಮ ವಿಶ್ವಾಸಕ್ಕಿಂತ ಹೆಚ್ಚಿನ ಗೌರವಾದರ ನನಗೆ ಬೇಕಿಲ್ಲ' ಎಂದು ಖಂಡಿತವಾಗಿ ಹೇಳಿಬಿಟ್ಟರು.

ದಿವಾನ್ ಸಾಹೇಬರವರನ್ನು ಸಂತೈಸುವ ಕೆಲಸ ಡಾಕ್ಟರು ವಹಿಸಬೇಕಾಯಿತು.

ತಮ್ಮ ಸಾಮಾನುಗಳನ್ನೆಲ್ಲಾ ಪ್ಯಾಕ್ ಮಾಡಿ ಗೂಡ್ಸ್ ಗಾಡಿಯ ಮೂಲಕ ಕಳಿಸುವ ವ್ಯವಸ್ಥೆ ಮಾಡಿ ಡಾಕ್ಟರು ಸಂಸಾರ ಸಮೇತರಾಗಿ ಬೆಂಗಳೂರಿಗೆ ಪ್ರಯಾಣ ಬೆಳಸಿದರು.

## ೬

ಶ್ರೀಧರ ಪ್ರ್ಯಾಕ್ಟೀಸ್ ಆರಂಭಿಸಿದ್ದ. ತಂದೆ ಬಂದುದು ಅವನಿಗೆ ಕೋಟಿ ಭುಜ ಬಂದಂತಾಯಿತು.

ಬೆಂಗಳೂರಿನಲ್ಲಿ ನೆಲಸಿದ ಕೆಲವೇ ದಿನಗಳಲ್ಲಿ ಡಾಕ್ಟರು ಸೀತಾರಾಮಯ್ಯನವರನ್ನೂ ಹಿರಣ್ಯಯ್ಯನವರನ್ನೂ ಬರಮಾಡಿಕೊಂಡರು. ಶ್ರೀಧರ, ಸುಂದರಿ ಇಬ್ಬರ ಜಾತಕವೂ ಅನ್ಯೋನ್ಯವಾಗಿತ್ತು. ಹೆಣ್ಣು ಎಲ್ಲರ ಮನಸ್ಸಿಗೂ ಬಂದುದರಿಂದ ನಿಶ್ಚಿತಾರ್ಥವೂ ಸಾಧಿಸಿತು.

ಮಗಳ ಮದುವೆಯನ್ನು ಮೈಸೂರಿನಲ್ಲೇ ಏಕೆ ಮಾಡಬಾರದೆಂಬ ಸಲಹೆಯನ್ನು ಸೀತಾರಾಮಯ್ಯನವರು ಡಾಕ್ಟರ ಮುಂದಿಟ್ಟರು.

ಎಲ್ಲಾ ವ್ಯವಸ್ಥೆಯನ್ನು ತಾವು ನೋಡಿಕೊಳ್ಳುವುದಕ್ಕೆ ಹಿರಣ್ಣಯ್ಯನವರು ಒಪ್ಪಿಕೊಂಡರು.

ಈ ಮಾತಿಗೆ ಮೊದಲು ಕಲ್ಯಾಣಮ್ಮನವರು ಒಪ್ಪಿಕೊಳ್ಳಲಿಲ್ಲ.

"ಮಗಳ ಲಗ್ನ ನಾವು ನಮ್ಮ ಮನೆಯಲ್ಲಿ ಮಾಡಬೇಡವೇ?" ಎಂದರು.

"ನಮ್ಮೂರಿಗೇ ನಾವು ಹೊಸಬರಾಗಿದ್ದೇವೆ. ಈ ವಿಷಯ ಸ್ಥಳೀಕರಾದ ಸೀತಾರಾಮಯ್ಯನವರು, ಹಿರಣ್ಯಯ್ಯನವರಿಗೆ ಬಿಡುವುದು ಒಳ್ಳೆಯದೆಂದು ಕಾಣುತ್ತದೆ. ಇಲ್ಲಿ ನಾವು ವಸುಂಧರಾ ಲಗ್ನ ಮುಗಿಸಿಕೊಂಡು ಮೈಸೂರಿಗೆ ಶ್ರೀಧರನ ಲಗ್ನಕ್ಕೆ ಹೋಗುವುದೂ ಪ್ರಯಾಸವಾಗುತ್ತದೆ. ಮೈಸೂರಿನಲ್ಲಿಯೇ ಎರಡೂ ನೆರವೇರಲಿ" ಎಂದು ಡಾಕ್ಟರು ಸೂಚಿಸಿದರು. ಕಲ್ಯಾಣಮ್ಮನವರು ವಿಚಾರ ಮಾಡಿ ಪತಿಯ ಸಲಹೆಯನ್ನೊಪ್ಪಿಕೊಂಡರು.

ವೈಶಾಖ ಮಾಸದಲ್ಲಿ ಎರಡು ಲಗ್ನಗಳೂ ಸಾಂಗವಾಗಿ ಮೈಸೂರಿನಲ್ಲಿ ನೆರವೇರಿದವು. ಡಾಕ್ಟರು ಮಗಳನ್ನು ಜತೆಯಲ್ಲಿಯೇ ಕರೆದುಕೊಂಡು ಬಂದುದರಿಂದ ಅವಳ ಸಂಗೀತ ಶಿಕ್ಷಣ ಮುಂದುವರಿಸಲು ಯಾವ ಅಡ್ಡಿಯೂ ಇರಲಿಲ್ಲ. ಸೀತಾರಾಮಯ್ಯನವರೇ ಅದಕ್ಕೂ ನೆರವಾಗಿ ವಿದ್ವಾನ್ ವೆಂಕಟರಾಮಯ್ಯನವರನ್ನು ಗೊತ್ತುಮಾಡಿ ಕೊಟ್ಟರು.

ಡಾಕ್ಟರವರ ಸಂಸಾರ ಜೀವನ ವ್ಯವಸ್ಥಿತವಾಯಿತು. ಕಾಲೇಜ್ ಆರಂಭವಾದ ಕೂಡಲೆ ಕಲ್ಪನಾ ಕಾಲೇಜ್ ಸೇರಿದಳು. ವಸುಂಧರೆಯ ಸಂಗೀತ ಪಾಠ ಕ್ರಮವಾಗಿ ಸಾಗಿತು.

ಕಲ್ಪನೆಯ ನಾಟ್ಯಾಭ್ಯಾಸ ತಾತ್ಕಾಲಿಕವಾಗಿ ನಿಂತಂತೆ ಆಯಿತು. 'ನಾಟ್ಯ ಕಲಿಯುವುದಕ್ಕಂತೂ ಅನುಕೂಲವಿಲ್ಲ – ಸಂಗೀತವನ್ನಾದರೂ

ಕಲಿಯಲಿ ' ಎಂದು ಡಾಕ್ಟರು ಕಲ್ಪನೆಗೂ ಸಂಗೀತ ಪಾಠ ವೆಂಕಟರಾಮಯ್ಯ ನವರಿಂದಲೇ ಆರಂಭ ಮಾಡಿಸಿದರು.

ಕಲ್ಯಾಣಮ್ಮನವರ ಆರೋಗ್ಯ ಮಾತ್ರ ಸುಧಾರಿಸಲಿಲ್ಲ. ಅವರು ದಿನ ದಿನಕ್ಕೆ ಸವೆಯುತ್ತ ಬಂದರು. ಔಷಧ, ಟಾನಿಕ್ಕುಗಳು ನಿಷ್ಪ್ರಯೋಜಕವಾದವು. ಅವರಿಗೆ ಇದ್ದಕ್ಕಿದ್ದಂತೆ ಜ್ವರ ಬರುತ್ತಿತ್ತು. ನಾಲ್ಕು ದಿನ ವೈಕಾದ ಮೇಲೆ ಜ್ವರ ಆರುತ್ತಿತ್ತು. ತುಂಬ ನಿಶ್ಶಕ್ತಿ ವ್ಯಾಪಿಸುತ್ತಿತ್ತು. ಡಾಕ್ಟರು ತಮ್ಮ ವೇಳೆಯ ಬಹ್ವಂಶವನ್ನು ಹೆಂಡತಿಗೆ ನಿವೇದಿಸಿದ್ದರು. ಕಲ್ಯಾಣಮ್ಮನವರು ಆರೋಗ್ಯವಾಗಿದ್ದಾಗ ಅವರನ್ನು ಜತೆಯಲ್ಲಿ ಕರೆದುಕೊಂಡು ಸ್ವಲ್ಪ ದೂರ ನಡೆಸಿಕೊಂಡು ಬರುವರು. ಅವರ ಮನಸ್ಸಿಗೆ ಹರ್ಷವಿದ್ದಾಗ ಡ್ರೈವ್ ಕರೆದುಕೊಂಡು ಹೋಗುತ್ತಿದ್ದರು. ಒಳ್ಳೆಯ ಸಿನಿಮಾ, ನಾಟಕ ನಡೆಯುತ್ತಿದ್ದರೆ ಕಲ್ಯಾಣಮ್ಮನವರನ್ನೂ ಮಕ್ಕಳನ್ನೂ ಕರೆದುಕೊಂಡು ಹೋಗುತ್ತಿದ್ದರು.

ಈ ವೃದ್ಧ ದಂಪತಿಗಳ ' ಆದರ್ಶ ಪ್ರೇಮ ' ನೋಡಿ ಫ್ರೇಸರ್ ಟೌನ್ ಜಿಕ್ಕಸ ಬೆರಗಾಗಿತ್ತು. ಕಿರಿಯರು, ಹಿರಿಯರಿಬ್ಬರಿಗೂ ಅವರ ಜೀವನ ಮೇಲ್ಪಂಕ್ತಿಯಾಗಿತ್ತು.

ಕೀರ್ತಿ ಇದೇ ಕಾಲಕ್ಕೆ ತನ್ನ ಬಿ. ಆರ್. ವಿ. ಥಿಯೇಟರ್ ಪ್ರದರ್ಶನ ಇಟ್ಟುಕೊಂಡಿದ್ದ. ಡಾ. ಶೇಷಗಿರಿರಾಯರು ಮೊದಲೇ ತಮ್ಮ ಸೀಟುಗಳನ್ನು ' ರಿಸರ್ವ್ ' ಮಾಡಿಸಿ ಪತ್ನಿ, ಪುತ್ರ, ಪುತ್ರಿಯರ ಸಂಗಡ ನಾಟ್ಯಪ್ರದರ್ಶನ ನೋಡಿ ಬಂದರು.

ಕೀರ್ತಿಯ ನಾಟ್ಯ ಪ್ರದರ್ಶನ ಶ್ರೀಧರ್ ಮತ್ತು ಕಲ್ಪನೆಗೆ ತುಂಬ ಮೆಚ್ಚುಗೆಯಾಯಿತು.

" ಕೀರ್ತಿ ತುಂಬ ದೊಡ್ಡ ಕಲಾವಿದರು. ಅವರ ಪ್ರತಿಯೊಂದು ಚಲನ ವಲನವೂ ಕಲಾಪೂರ್ಣವಾಗಿದೆ. ಅಂಥ ವೈಕಟ್ಟು ನಾನು ನೋಡಿಯೇ ಇಲ್ಲ. "

ಎಂದು ಶ್ರೀಧರ ಮುಕ್ತಕಂಠದಿಂದ ಹೊಗಳಿದ. ಅವನಷ್ಟೇ ಉತ್ಸಾಹ ಗೊಂಡಿದ್ದ ಕಲ್ಪನಾ

" ಅವರನ್ನು ನೋಡಿದರೆ ವೆರೂಳ ( Ellora ) ದಲ್ಲಿರುವ ದೇವರ ಭವ್ಯ ಮೂರ್ತಿಯನ್ನು ನೋಡಿದಂತಾಗುತ್ತದೆ. ಕೀರ್ತಿ ದೇವಾಂಶಸಂಭೂತರಾದ

ಕಲಾವಿದರು ( Divine Artist ) ”

ಎಂದು ಸೇರಿಸಿ, ಅಕ್ಕನ ಕಡೆ ನೋಡಿದಳು. ವಸುಂಧರಾ ಅನುಮಾನಿಸುತ್ತ

“ ಪ್ರದರ್ಶನ ಚೆನ್ನಾಗಿತ್ತು. ಆದರೆ ಕೀರ್ತಿಯವರಿಗಾಗಲಿ ಅವರ ಮಂಡಳಿಯವರಿಗಾಗಲಿ ತಾಳಜ್ಞಾನ ಇಲ್ಲ – ನೀವೇನನ್ನುವಿರಿ ಡ್ಯಾಡಿ. ”

ಎಂದು ತಂದೆಯ ಕಡೆ ನೋಡಿದಳು. ಯಾರ ಪಕ್ಷ ವಹಿಸಿ ಮಾತನಾಡುವುದೆನ್ನುವ ಉಭಯ ಸಂಕಟಕ್ಕೆ ಸಿಕ್ಕಿಕೊಂಡ ಡಾಕ್ಟರು ಜಾಣ್ಮೆಯಿಂದ

“ ನನಗೇನಮ್ಮ ಗೊತ್ತಾಗುತ್ತದೆ. ನೀನು ಸಂಗೀತ ವಿದುಷಿ – ಇವರಿಬ್ಬರೂ ಕಲಾ ವಿಮರ್ಶಕರು. ಈ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡುವ ಸಾಮರ್ಥ್ಯವುಳ್ಳವರು ನೀವು ” ಎಂದರು.

ಶ್ರೀಧರ ನಗುತ್ತಾ

“ ಡ್ಯಾಡಿ ನಮ್ಮ ಹುಚ್ಚಾಟ ಕಂಡು ನಗುತ್ತಿದ್ದಾರೆ. ”

ಎಂದು ಹೇಳಿದ. ಕಲ್ಪನಾ ತಂದೆಯ ಬಳಿಗೆ ಬಂದು, ಅವರ ತಲೆ ನೇವರಿಸುತ್ತ

“ ಡ್ಯಾಡಿ – ನಾನು ಕೀರ್ತಿಯವರ ಬಳಿ ನಾಟ್ಯ ಕಲಿಯುತ್ತೇನೆ. ” ಎಂದಳು.

ಅವಳ ಪ್ರಾರ್ಥನೆಗೆ ಬೆಂಬಲವೀಯುತ್ತ ಶ್ರೀಧರ್

“ ಕಲಿಯಲಿ ಡ್ಯಾಡಿ. ಒಳ್ಳೆ ಎಕ್ಸರ್‌ಸೈಸ್ ( exercise ) ಆಗುತ್ತದೆ ” ಎಂದ.

ಕಲ್ಯಾಣಮ್ಮನವರು ಮೆಲ್ಲನೆ

“ ಬೆಂಗಳೂರು ಬೊಂಬಾಯಿಯ ಹಾಗಲ್ಲ ಕಲ್ಪನಾ. ಇಲ್ಲಿಯ ಜನ ಇನ್ನೂ ಹಳೆಯ ಸಂಪ್ರದಾಯದವರು. ನೀನು ನಾಟ್ಯ ಕಲಿಯಲಾರಂಭಿಸಿದರೆ ನಿನಗೆ ಹೆಸರಿಡುತ್ತಾರೆ. ”

“ ಜನ ಕೆಟ್ಟ ಮಾತಾಡಿದರೆ ಅದನ್ನು ಧೈರ್ಯವಾಗಿ ಎದುರಿಸಬಲ್ಲೆಯಾ ಕಲ್ಪಾ. ಅವರು ಹೀಗಂದರು, ಇವರು ಹಾಗಂದರು ಎಂದುಕೊಂಡು ಅಳುತ್ತ ಕೂಡುವೆಯೋ ? ”

“ ಡ್ಯಾಡಿ – ನನ್ನ ನಡತೆಯಲ್ಲಿ ತಪ್ಪು ಇಲ್ಲದಿದ್ದರೆ ಯಾರೇನಂದರೇನು?

ಅದಕ್ಕೇಕೆ ನಾನು ಅಳುತ್ತ ಕೂಡಬೇಕು. ನಾಟ್ಯಕಲೆ ಕಲಿಯುವುದರಲ್ಲಿ ಏನಾದರೂ ತಪ್ಪಿದೆಯೋ ಡ್ಯಾಡಿ ? "

" ಕಾಲಪರಿಸ್ಥಿತಿಯಿಂದ ತಪ್ಪಾಗಿದೆ ಕಲ್ಪಾ. ಒಂದು ಕಾಲದಲ್ಲಿ ನಮ್ಮ ದೇಶದ ಹೆಣ್ಣುಮಕ್ಕಳು ಅವಶ್ಯಕವಾಗಿ ನಾಟ್ಯ ಕಲಿಯಬೇಕಾಗಿತ್ತು. ಇವತ್ತು ನೀವು ಇಂಗ್ಲಿಷ್ ಕಲಿಯುವ ಹಾಗೆ ಹಿಂದಿನ ಕಾಲದಲ್ಲಿ ನಾಟ್ಯ ಕಲಿಯುತ್ತಿದ್ದರು. ಈ ಬಗ್ಗೆ ಶಾಸ್ತ್ರ ಬರೆದ ' ಭರತ ಮುನಿ ' ಯನ್ನು ನಮ್ಮ ಜನ ಋಷಿಯೆಂದು ಗೌರವಿಸಿದ್ದಾರೆ. ಅಯೋಗ್ಯರು ನಾಟ್ಯವನ್ನು ಅಲ್ಪವಿಹಾರದ ಸಾಧನ ಮಾಡಿಕೊಂಡರು. ಭರತನಾಟ್ಯ ಸೂಳೆಯರ ಪಾಲಾಗಿ ' ದಾಸಿ ಆಟ ' ವಾಯಿತು. ಕುಲೀನೆಯರು ಅದನ್ನು ಕಲಿಯುವುದು ಧರ್ಮಬಾಹಿರವಾಗುತ್ತ ಬಂದಿತು. "

" ಈಗ ಕುಲೀನರು ನಾಟ್ಯ ಕಲಿಯುತ್ತಿದ್ದಾರಲ್ಲಾ ! "

" ಹೌದು – ಈಗೀಗ ಅದರ ದುರ್ವಿಧಿ ಕಳೆಯುತ್ತ ಬಂದಿದೆ. ಉದಯ ಶಂಕರ್, ಮೇನಕಾ, ರುಕ್ಮಿಣಿ ಮೇಲ್ಪಂಕ್ತಿ ಹಾಕಿಕೊಟ್ಟು ಅದರ ಅಪ-ಯಶಸ್ಸನ್ನು ಕಳೆಯುತ್ತ ಬಂದಿದ್ದಾರೆ – ನೀನು ನಾಟ್ಯಕಲಿಯಲು ನನ್ನದೇನೂ ಅಭ್ಯಂತರವಿಲ್ಲ. ಮೊದಲು ಮಮ್ಮಿಯ ಅಪ್ಪಣೆ ಪಡೆದುಕೋ. "

" ನಿಮ್ಮ ತಂದೆ ಅಭ್ಯಂತರವಿಲ್ಲವೆಂದ ಮೇಲೆ ನನ್ನದೇನು ಅಭ್ಯಂತರವಮ್ಮಾ ! "

ಎಂದು ಕಲ್ಯಾಣಮ್ಮನವರು ಸಮ್ಮತಿ ಸೂಚಿಸಿದರು.

## ೭

ಕೀರ್ತಿಯ ನಾಟ್ಯ ಪ್ರದರ್ಶನಗಳಲ್ಲಿ ಆದ ಆಭಾಸ ಅವನ ಧೋರಣೆಯಲ್ಲಿ ಯಾವ ವ್ಯತ್ಯಾಸವನ್ನೂ ಮಾಡಿರಲಿಲ್ಲ. ' ನಾಟ್ಯಶಾಲೆ ' ಯನ್ನು ವಿಸ್ತರಿಸಿದರೆ ಜತೆಯಲ್ಲಿ ಅಭಿನಯಿಸುವುದಕ್ಕೆ ಕುಲೀನ ಸ್ತ್ರೀಯರು ದೊರೆಯಬಹುದೆಂಬ ಭಾವನೆ ಕೀರ್ತಿಯ ಮನಸ್ಸಿನಲ್ಲಿ ಹೊಳೆಯಿತು.

ಜೀವಾನಂದಂ ಅವನ ಭಾವನೆಗೆ ಪುಟಗೊಟ್ಟು 'ನಾಟ್ಯಶಾಲೆ' ಯ ವ್ಯವಸ್ಥೆ – ಅದಕ್ಕೂ ಹೆಚ್ಚಾಗಿ ಪ್ರಸಾರದ ಕಡೆಗೆ ಲಕ್ಷ್ಯ ಕೊಟ್ಟಿದ್ದರು. 'ಕೀರ್ತಿಯವರ ಓರಿಯಂಟಲ್ ನೃತ್ಯಶಾಲೆ – ಡೈರೆಕ್ಟರ್ ಅಂತರ-ರಾಷ್ಟ್ರೀಯ ಖ್ಯಾತಿ ಪೆತ್ತ **ಕೀರ್ತಿ** – ವ್ಯವಸ್ಥಾಪಕರು – ಸುಪ್ರಸಿದ್ಧ ಕಲಾವಿಮರ್ಶಕರಾದ ಜೀವಾನಂದಂ – ಆಚಾರ್ಯರು – ಗುರು ಕುಂಜುಮಣಿ

Kirthi's School of Oriental Dance.
Director: KIRTHI ; of International fame.
Impresavio : JEEVANANDAM : Famous art-critic.
Director of Studies : GURU KUNJUMANI

ಎಂದು ಪ್ರಕಟವಾಗಿತ್ತು. ಕೀರ್ತಿ ಪಾಠ ಹೇಳುವ ಗೋಜಿಗೆ ಹೋಗುತ್ತಿರಲಿಲ್ಲ. ಆ ಶಾಖೆಯೆಲ್ಲಾ ಕುಂಜುಮಣಿಗೆ ಸೇರಿತ್ತು. ದೊಡ್ಡ ಮನುಷ್ಯರ ಮನೆಯವರಿಗೆ ಮಾತ್ರ ಕುಂಜುಮಣಿ ಪಾಠ ಹೇಳಿಕೊಡುತ್ತಿದ್ದರು. ಉಳಿದವರನ್ನು ತಮ್ಮ ಶಿಷ್ಯರಿಗೆ ಒಪ್ಪಿಸುತ್ತಿದ್ದರು.

ಶ್ರೀಧರನ ಜತೆ ಕಲ್ಪನಾ 'ನಾಟ್ಯಶಾಲೆ' ಗೆ ಬಂದಾಗ 'ರಿಹರ್ಸಲ್' ನಡೆದಿತ್ತು. ಕುಂಜುಮಣಿ ಪಾಠ ಹೇಳಿಕೊಡುತ್ತಿದ್ದರು. ಕೀರ್ತಿ, ಜೀವಾನಂದಂ, ಕ್ಯಾಪ್ಟನ್ ನಿಸ್ಸಾರ್ ನೋಡುತ್ತ ಕುಳಿತಿದ್ದರು. ಡಿಕ್ಕಿ ಶ್ರೀಧರನನ್ನು ಸ್ವಾಗತಿಸಿ, ಬಂದ ವಿಷಯ ಕೇಳಿದ. 'ಕೀರ್ತಿಯವರನ್ನು ನೋಡಬೇಕಾಗಿದೆ' ಎಂದು ಶ್ರೀಧರ ಹೇಳಿ ಅವನ ಕೈಗೆ ತನ್ನ ವಿಸಿಟಿಂಗ್ ಕಾರ್ಡ್ ಕೊಟ್ಟ. ಡಿಕ್ಕಿ ಒಳಗೆ ಹೋಗಿ ಕೀರ್ತಿಗೆ ಸುದ್ದಿ ಮುಟ್ಟಿಸಿದ. 'ಅವರನ್ನು ಒಳಗೆ ಬರಮಾಡು' ಎಂದು ಹೇಳಿ ಕೀರ್ತಿ ಅವರ ವಿಷಯ ಸಂಪೂರ್ಣವಾಗಿ ಮರೆತುಬಿಟ್ಟ.

ರಿಹರ್ಸಲ್ ಮುಗಿಯುವ ವರೆಗೆ ಶ್ರೀಧರ, ಕಲ್ಪನಾ ಸುಮ್ಮನೆ ಕೂಡಬೇಕಾಯಿತು. ರಿಹರ್ಸಲ್ ಮುಗಿದ ಮೇಲೆ ಕೀರ್ತಿ ಅವರ ಕಡೆ ತಿರುಗಿ

"ಯಾರು ನೀವು" ಎಂದು ಕೇಳಿದ.

"ನನ್ನ ಕಾರ್ಡು ಕಳಿಸಿದ್ದೆ" ಎಂದು ಶ್ರೀಧರ ಹೇಳಿದ.

ಕೈಯಲ್ಲಿಯೇ ಇದ್ದ ಕಾರ್ಡನ್ನು ಓದಿಕೊಂಡು ಕೀರ್ತಿ

"ಡಾ. ಶ್ರೀಧರ್ ನೀವೇಯೇನು ?"

" ಹೌದು. "

" ನೀವು ಡಾ. ಶೇಷಗಿರಿರಾಯರ ಮಕ್ಕಳೇನು? "

" ಹೌದು. ನಮ್ಮ ತಂದೆಯವರು ನಿಮಗೆ ಗೊತ್ತೇ? "

" ಪರಿಚಯವಿಲ್ಲ. ಅವರ ಹೆಸರು ಕೇಳಿದ್ದೇನೆ. ಏನು ಬಂದಿರಿ ? "

" ನಿಮ್ಮಲ್ಲಿ ಮಾತನಾಡಬೇಕಾಗಿತ್ತು. "

" ಬನ್ನಿ ಮೇಲೆ ಹೋಗೋಣ. "

ಎಂದು ಹೇಳಿ ಜೀವಾನಂದಂ, ಕ್ಯಾಪ್ಟನ್ ನಿಸ್ಸಾರ್ ಅವರ ಪರಿಚಯ ಮಾಡಿಕೊಟ್ಟ.

ನಿಸ್ಸಾರ್ ಕೀರ್ತಿಯ ಅಪ್ಪಣೆ ಪಡೆದು ಹೋದ ಮೇಲೆ ಕೀರ್ತಿ ಇಬ್ಬ ರನ್ನೂ ಮಹಡಿಯ ಮೇಲಿದ್ದ ತನ್ನ ' ಡ್ರಾಯಿಂಗ್ ರೂಮ್ ' ಗೆ ಕರೆದೊಯ್ದು. ಅವರ ಹಿಂದೆಯೇ ಜೀವಾನಂದಂ ಬಂದರು.

" ಈಕೆ ನನ್ನ ತಂಗಿ – ಕಲ್ಪನಾ "

ಎಂದು ಶ್ರೀಧರ ಪರಿಚಯ ಮಾಡಿಕೊಟ್ಟು

" ನಾವಿಬ್ಬರೂ ನಿಮ್ಮ ನಾಟ್ಯವನ್ನು ಬಹಳ ಮೆಚ್ಚಿಕೊಂಡಿದ್ದೇವೆ. "

" ಸಂತೋಷ. ಬಿ. ಆರ್. ವಿ. ಗೆ ಬಂದಿದ್ದಿರಾ ? "

" ಸಂಸಾರ ಸಮೇತ ಬಂದಿದ್ದೆವು. "

" ನನ್ನ ಪ್ರದರ್ಶನ ಚೆನ್ನಾಗಿರಲಿಲ್ಲವೆಂದು ಕೆಲವರು ಟೀಕೆ ಮಾಡಿದ್ದಾರೆ. "

" ಎಲ್ಲರ ಅಭಿರುಚಿಯೂ ಒಂದೇ ರೀತಿಯಿರುವುದಿಲ್ಲ. "

" ಇದು ಅಭಿರುಚಿಯ ಮಾತಲ್ಲ ಶ್ರೀಧರ್. ಅಸೂಯೆಯ ಮಾತು. "

" ನಿಮ್ಮ ಮೇಲೆ. ಯಾರಿಗೆ ಅಸೂಯೆ. "

" ಉದಯಶಂಕರನಿಗೆ, ಅವನ ಅಭಿಮಾನಿಗಳಿಗೆ. "

" ಉದಯಶಂಕರ್ ಎಲ್ಲೋ ಇದ್ದಾರೆ ಪಾಪ – ಅವರನ್ನೇಕೆ ಆಕ್ಷೇಪಿಸುವಿರಿ ? "

" ಅವನು ಎಲ್ಲಾ ಕಡೆಯಲ್ಲಿಯೂ ತನ್ನ ಬಳಗ ಬೆಳಸಿದ್ದಾನೆ. ಇತರರನ್ನು ಹಳಿಯುವುದೇ ಅವರ ಕೆಲಸ. "

" ಯಾರು ಹಳಿದರೇನು – ಹೊಗಳಿದರೇನು ? – ಹಿತ್ತಾಳೆ ಭಂಗಾರ

ವಾಗುವುದಿಲ್ಲ; ಭಂಗಾರ ಪಿತ್ತಾಳೆಯಾಗುವುದಿಲ್ಲ."

"ನಿಜ ನಿಜ – ಬಂದ ಕೆಲಸ ನೀವು ಹೇಳಲೇ ಇಲ್ಲ."

"ನನ್ನ ತಂಗಿ ನಿಮ್ಮಲ್ಲಿ ನಾಟ್ಯ ಕಲಿಯಲು ತುಂಬ ಆಸಕ್ತಳಾಗಿದ್ದಾಳೆ."

ಕೀರ್ತಿ ಕಲ್ಪನೆಯ ಕಡೆ ತಿರುಗಿ

"ನಾಟ್ಯಶಿಕ್ಷಣ ಈ ಮೊದಲೇ ಆಗಿದೆಯೇ?"

"ಇಂದೂರಿನಲ್ಲಿ ನಾಲ್ಕು ದಿನ ಕಥಕ್ ಕಲಿತಿದ್ದೇನೆ."

"ಸಂಗೀತ ಬರುತ್ತದೆಯೇ?"

"ಅಲ್ಪ ಸ್ವಲ್ಪ."

"ಹಾಗಾದರೆ ಮೊದಲಿನಿಂದ ಆರಂಭಿಸಬೇಕಾಗುತ್ತದೆ."

"ಆರಂಭಿಸಲು ಸಿದ್ಧವಾಗಿದ್ದೇನೆ."

"ಕಾಲೇಜಿನಲ್ಲಿ ಓದುತ್ತಿರುವಿರಾ?"

"ಓದುತ್ತಿದ್ದೇನೆ."

"ನಾಟ್ಯ ಕಲಿಯುವುದಕ್ಕೆ ವೇಳೆಯೆಲ್ಲಿ ಸಿಕ್ಕುತ್ತದೆ?"

"ಬೆಳಿಗ್ಗೆ ಅಥವಾ ಸಂಜೆ ಅದಕ್ಕಾಗಿ ಮೀಸಲಾಗಿಡುತ್ತೇನೆ."

"ಶ್ರದ್ಧೆಯಿಂದ ಕಲಿಯಬೇಕು. ಇಲ್ಲಿ ಕಲಿಸಿಕೊಟ್ಟುದನ್ನು ಮನೆಯಲ್ಲಿ ಚೆನ್ನಾಗಿ ಅಭ್ಯಾಸ ಮಾಡಿಕೊಂಡು ಬರಬೇಕು,"

"ಹಾಗೇ ಆಗಲಿ."

ಕೀರ್ತಿ ಶ್ರೀಧರನ ಕಡೆ ತಿರುಗಿ

"ಡಾ. ಶ್ರೀಧರ್. ನಿಮ್ಮ ತಂಗಿಯನ್ನು ಶಾಲೆಗೆ ಸೇರಿಸಿಕೊಳ್ಳುತ್ತೇನೆ. ಈಗ ನಾವು ಕೆಲವು ಕಟ್ಟು ಕಾಯಿದೆ ಮಾಡಿಕೊಂಡಿದ್ದೇವೆ. ಅವುಗಳನ್ನೆಲ್ಲ ನಮ್ಮ ಇಂಪ್ರೆಸಾರಿಯೊ ವಿವರಿಸುತ್ತಾರೆ. ನನಗೆ ಸ್ವಲ್ಪ ಕೆಲಸವಿದೆ. ಹೋಗಲು ಅಪ್ಪಣೆ ಕೊಡಿ."

ಎಂದು ಎದ್ದುನಿಂತ. ಶ್ರೀಧರ

"ಪಾಠಕ್ಕೆ ಎಂದಿನಿಂದ ಬರಬಹುದು."

"ನಾಳೆಯಿಂದಲೇ ಬರಲಿ."

ಎಂದು ಹೇಳಿದವನೇ ಕೀರ್ತಿ ಅಲ್ಲಿ ನಿಲ್ಲದೆ ಹೊರಟು ಹೋದ. ಜೀವಾನಂದಂ, ಅಚ್ಚಾಗಿದ್ದ ಒಂದು ಅಪ್ಲಿಕೇಷನ್ ಫಾರ್ಮ್ (Application form)

ಶ್ರೀಧರನ ಕೈಯಲ್ಲಿಟ್ಟು

"ಇದನ್ನು ತುಂಬಿ ನಾಳೆ ಫೀಸಿನೊಂದಿಗೆ ಕಳಿಸಿಕೊಡಿ."

"ಫೀಸು ಎಷ್ಟು?"

"ತಿಂಗಳಿಗೆ ನೂರು ರೂಪಾಯಿ."

"ಆರಂಭದಲ್ಲಿಯೇ ನೂರು ರೂಪಾಯಿ ಹೆಚ್ಚಲ್ಲವೇ?"

"ನಾವು ಬೇರೆ ಬೇರೆ ದೇಶಗಳಿಂದ ಶಾಲೆಗೆ ತಜ್ಞರನ್ನು ಕರೆಸಿದ್ದೇವೆ. ಅವರಿಗೆ ಕೈತುಂಬ ಸಂಬಳ ಕೊಡುತ್ತಿದ್ದೇವೆ. ಶಾಲೆಗೆ ತುಂಬ ಖರ್ಚಿದೆ."

"ಆಗಲಿ – ಕಳಿಸಿ ಕೊಡುತ್ತೇನೆ."

"ನಮ್ಮ ಪ್ರದರ್ಶನಗಳಲ್ಲಿ ಈಕೆ ಪಾತ್ರ ವಹಿಸಬೇಕಾಗುತ್ತದೆ."

"ವಹಿಸುತ್ತಾಳೆ."

"ನಮ್ಮ ಜತೆ ಪ್ರವಾಸ ಮಾಡಬೇಕಾಗುತ್ತದೆ."

"ಕಾಲೇಜಿಗೆ ರಜವಿದ್ದಾಗ ಬರುತ್ತಾಳೆ."

ಎಂದು ಹೇಳಿ ಜೀವಾನಂದಂ ಅಪ್ಪಣೆ ತೆಗೆದುಕೊಂಡು ತಂಗಿಯೊಡನೆ ಹೊರಟ.

ಕೀರ್ತಿಯ ಶಾಲೆಯಲ್ಲಿ ನಡೆದುದನ್ನು ತಂದೆಗೆ ವಿವರಿಸುತ್ತ ಶ್ರೀಧರ

"ಡ್ಯಾಡಿ - ಇವರು ವ್ಯಾಪಾರಕ್ಕೆ ಹೊರಟ ಹಾಗೆ ಕಾಣುತ್ತದೆ. ಮೊದ ಲಿಗೇ ಫೀಸು ನೂರು ರೂಪಾಯಿಯಂತೆ!"

ಎಂದು ಹೇಳಿದ. ಡಾ. ಶೇಷಗಿರಿರಾಯರು ಮಗಳ ಕಡೆ ತಿರುಗಿ

"ನೀನು ಏನು ಹೇಳುವೆಯಮ್ಮ."

ಎಂದರು. ಕಲ್ಪನೆ ಮುಖ ಚಿಕ್ಕದು ಮಾಡಿಕೊಂಡು ನಿಂತುಕೊಂಡಿದ್ದಳು. ಡಾಕ್ಟರು ಮಗಳನ್ನು ಹತ್ತಿರ ಕರೆದು ಅವಳನ್ನು ನೇವರಿಸುತ್ತಾ

"ನೂರಲ್ಲ ಇನ್ನೂರಾಗಲಿ. ಶಾಲೆ ಸೇರುವೆಯಂತೆ ಸುಮ್ಮನಿರು – ಯೋಚನೆ ಮಾಡಬೇಡ" ಎಂದು ಹೇಳಿದರು.

ಮಾರನೆಯ ದಿನದಿಂದಲೇ ಕಲ್ಪನೆಯ ಪಾಠ ಆರಂಭವಾಯಿತು. ಬೆಳಿಗ್ಗೆ ಶಾಲೆಯಲ್ಲಿ ಕಲಿತು ಬಂದುದನ್ನು ಕಲ್ಪನಾ ತಪ್ಪದೆ ಸಂಜೆ ಅಭ್ಯಾಸ ಮಾಡಿಕೊಳ್ಳುತ್ತಿದ್ದಳು. ವಸುಂಧರಾ ತಂಗಿಗೆ ನೆರವಾಗುತ್ತಿದ್ದಳು.

ಮಗಳ ನಾಟ್ಯಾಭ್ಯಾಸದಲ್ಲಿ ಡಾ. ಶೇಷಗಿರಿರಾಯರು ವಿಶೇಷ ಆಸಕ್ತಿ ವಹಿಸುತ್ತಿದ್ದರು. ನಾಟ್ಯಶಾಸ್ತ್ರದ ಮೇಲೆ ಹಲವು ಗ್ರಂಥಗಳನ್ನು ಸಂಗ್ರಹಿಸಿದರು. ತಂತ್ರಭಾಗವನ್ನು ಮಗಳಿಗೆ ಓದಿ ವಿವರಿಸಿ, ಅವುಗಳ ಹಿನ್ನೆಲೆಯನ್ನು ವರ್ಣಿಸುತ್ತಿದ್ದರು.

ನವರಾತ್ರಿ ಕಳೆದ ಕೂಡಲೆ ವಸುಂಧರಾ ಗಂಡನ ಮನೆಗೆ ಹೋಗಬೇಕಾಯಿತು. ಮನೆಯಲ್ಲಿಯೇ ಪ್ರಸ್ತದ ಶಾಸ್ತ್ರ ಮುಗಿಸಿ ಅವಳನ್ನು ಬೀಳ್ಕೊಟ್ಟರು.

ವಸುಂಧರಾ ಹೊರಟು ಹೋದುದು ಕಲ್ಪನೆಗೆ ಒಂದು ಕೈ ಮುರಿದಂತಾಯಿತು. ಸಂಗೀತ ವಿದ್ವಾನ್ ವೆಂಕಟರಾಮಯ್ಯನವರು ಕಲ್ಪನೆಯ ಸಂಗೀತ ಪಾಠ ಮುಂದುವರಿಸಿದರು. ನಾಟ್ಯಾಭ್ಯಾಸದ ಜತೆಗೆ ಕಲ್ಪನಾ ಸಂಗೀತ ಶಿಕ್ಷಣವು ನಡೆದಿತ್ತು.

ಡಿಶೆಂಬರ್ ವೇಳೆಗೆ ಕಲ್ಪನೆಯ ನಾಟ್ಯಾಭ್ಯಾಸ ಒಂದು ಘಟ್ಟಕ್ಕೆ ಬಂದಿತ್ತು. ಡಿಶೆಂಬರ್ ತಿಂಗಳ ಕೊನೆಯಲ್ಲಿ ಕೀರ್ತಿ ಕೊಡಲಿದ್ದ ಪ್ರದರ್ಶನದಲ್ಲಿ ಅವಳಿಗೆ ಸ್ಥಾನ ನಿರ್ದೇಶವಾಯಿತು. ನೃತ್ಯನಾಟಕದಲ್ಲಿ ಕಲ್ಪನೆಗೆ ಪಾತ್ರ ಸಿಕ್ಕಿದುದಲ್ಲದೆ ಅವಳಿಗೇ ಪ್ರತ್ಯೇಕವಾಗಿ ಒಂದು ನಾಟ್ಯ ಕೊಡಲಾಯಿತು.

ಶ್ರೀಧರನ ಹೆಂಡತಿ ಸುಂದರಿ 'ಗಂಡನ ಮನೆ' ಗೆ ಬಂದಳು. ಕಲ್ಪನೆಯ ' ರಿಹರ್ಸಲ್ ' ಗಳಿಗೆ ವೆಂಕಟರಾಮಯ್ಯನವರು ಪಿಟೀಲನ್ನೂ ಸುಂದರಿ ವೀಣೆಯನ್ನೂ ನುಡಿಸತೊಡಗಿದರು.

ಕೀರ್ತಿಯ ಪ್ರದರ್ಶನ ಹಿಂದಿನ ಪ್ರದರ್ಶನಗಳಿಗೆ ಯಾವ ರೀತಿಯಲ್ಲಿಯೂ ಉತ್ತಮವಾಗಿರಲಿಲ್ಲ. ಆದರೆ ಈ ಪ್ರದರ್ಶನದ ಸಲುವಾಗಿಯೇ ಕೀರ್ತಿ ಕೂಡಿಸಿದ್ದ ' ಶಿವ–ದ್ವಂದ್ವ ' ನಾಟ್ಯ ಬಹಳ ಜನಗಳನ್ನಾಕರ್ಷಿಸಿತು. ಚಂದ್ರಮುಖಿಯ ಬದಲು ಸೊಹಾನಿ ಸೋದರಿಯರಲ್ಲಿ ಹಿರಿಯಳಾದ ತಾರಾ ಪಾರ್ವತಿಯ ಭೂಮಿಕೆಯನ್ನು ಧರಿಸಿದ್ದಳು. ತಾರಾದೇವಿಯ ತಂಗಿ ಮೀರಾ ಮತ್ತು ಕಲ್ಪನಾ ಪಾರ್ವತಿಯ ಇಬ್ಬರು ಸಖಿಯರ ಭೂಮಿಕೆ ಧರಿಸಿದ್ದರು.

ಉದಯಶಂಕರ್ ಅವರು ' ಶಿವತಾಂಡವ ' ನಾಟ್ಯ ಕೂಡಿಸಿ ವಿದೇಶಗಳಲ್ಲಿ ಪ್ರದರ್ಶಿಸಿದ ಮೇಲೆ ಶಿವಪರವಾದ ವಸ್ತುಗಳಿಗೆ ವಿಶೇಷ ಖ್ಯಾತಿ ದೊರೆತಿತ್ತು. ' ಶಿವತಾಂಡವ, ಶಿವಲಾಸ್ಯ, ಶಿವದ್ವಂದ್ವ, ಗಿರಿಜಾಕಲ್ಯಾಣ ಮೊದ

ಲಾದ ವಸ್ತುಗಳು ಚಿಕ್ಕಪುಟ್ಟ ನಾಟ್ಯ ಮೇಳಗಳಿಗೂ ಪ್ರಿಯವಾಗುತ್ತ ಬಂದವು. ನಾಟಕದ ಕಂಪೆನಿಯವರ ಕೈಗೆ ಸಿಕ್ಕಿ ಶಿವ, ಕೃಷ್ಣ, ನಾರದರಿಗೆ ಯಾವ ಪಾಡು ಬಂದಿತ್ತೋ ಅದೇ ಪಾಡು ನಾಟ್ಯ ಮೇಳದವರಿಂದ ಆ ಪ್ರಸಿಧ್ಧ ಪುರಾಣವ್ಯಕ್ತಿಗಳಿಗೆ ದೊರಕಿತು.

ಶಿವಪರವಾದ ವಸ್ತುಗಳಲ್ಲಿ ಎಲ್ಲಕ್ಕಿಂತ ಹೆಚ್ಚು ಆದರಕ್ಕೆ ಪಾತ್ರವಾದುದು ' ಶಿವ-ದ್ವಂದ್ವ ' ವಸ್ತು. ಉಳಿದ ವಸ್ತುಗಳಲ್ಲಿ ಬಹುರಸಗಳ ವಿನ್ಯಾಸಕ್ಕೆ ಅವಕಾಶವಿರಲಿಲ್ಲ. ಕರುಣೆಯೋ, ರೌದ್ರವೋ ಸರ್ವಸ್ವಾಮ್ಯ ವಹಿಸುತ್ತಿತ್ತು. ಶಿವ-ದ್ವಂದ್ವದಲ್ಲಿ ನವರಸಗಳ ಆವಿಷ್ಕಾರಕ್ಕೆ ಸಂಪೂರ್ಣ ಅವಕಾಶವಿತ್ತು.

ಒಂದು ದಿನ ಕೈಲಾಸದಲ್ಲಿ ಶಿವ-ಪಾರ್ವತಿ ಓಲಗ ಕೊಡುತ್ತಿದ್ದಾರೆ. ದೇವಾಧಿ ದೇವತೆಗಳು ಪೀಠಸ್ಥರಾಗಿದ್ದಾರೆ. ನಂದಿ, ಭೃಂಗಿ ಇವರ ನಾಟ್ಯ ವಾಗುತ್ತದೆ. ನಾಟ್ಯ ನೋಡಿ ಮೆಚ್ಚಿಕೊಂಡ ದೇವರ್ಷಿ ನಾರದ ತನ್ನ ಸಂತೋಷ ವ್ಯಕ್ತಗೊಳಿಸಿ ಶಿವನನ್ನು ಅಭಿವಂದಿಸುತ್ತಾನೆ. ಶಿವೆ ತುಸು ಮುನಿದು ' ಇವರು ಶಿವನ ಶಿಷ್ಯರು – ನನ್ನ ಶಿಷ್ಯರಾಗಿದ್ದರೆ ಇದಕ್ಕೂ ಚೆನ್ನಾಗಿ ಅಬಿನಯ ಕಲಿಸುತ್ತಿದ್ದೆ ' ಎಂದು ಶಿವನನ್ನು ಜರಿಯುತ್ತಾಳೆ.

ಶಿವ-ಶಿವೆಯರಲ್ಲಿ ವಾದ ಪ್ರಾರಂಭವಾಗುತ್ತದೆ. ನಾನು ಹೆಚ್ಚು ಎಂದು ಶಿವ; ನಾನು ಹೆಚ್ಚು ಎಂದು ಶಿವೆ. ಜಗತ್ತಿನ ಮಾತಾಪಿತರಲ್ಲಿಯೇ ಈ ಬಗೆಯ ಘರ್ಷಣೆ ಒದಗಿದರೆ ಲೋಕ ಹಾಳಾಗುವುದೆಂದು ಬಗೆದು ಮಹಾವಿಷ್ಣು ನಾರದನ ಮರೆಹೊಕ್ಕು ಜಗಳ ಪರಿಹರಿಸಬೇಕೆಂದು ಬೇಡುತ್ತಾನೆ.

ಕುಶಾಗ್ರಮತಿಯಾದ ನಾರದ ಶಿವ-ಶಿವೆಯರ ಬಳಿಗೆ ಬಂದು ' ಸುಮ್ಮನೆ ಸುತ್ತಾಡಿದರೆ ಏನು ಪ್ರಯೋಜನ. ನೀವಿಬ್ಬರೂ ನಿಮ್ಮ ಕಲೆಯ ಪ್ರದರ್ಶನ ಮಾಡಿ. ನಾನೂ ಶ್ರೀಮನ್ಮಹಾವಿಷ್ಣು, ಬ್ರಹ್ಮದೇವ ಪರೀಕ್ಷಕರಾಗರುತ್ತೇವೆ' ಎಂದು ಸಮಾಧಾನ ಹೇಳುತ್ತಾನೆ.

ಶಿವ-ಶಿವೆಯರ ದ್ವಂದ್ವ ಆರಂಭವಾಗುತ್ತದೆ. ಶಿವ ' ಶೃಂಗಾರ ರಸ ' ಅಭಿನಯಿಸುತ್ತಾನೆ. ಶಿವೆ ಅವನ ಸರಿಜೋಡಿಯಾಗಿ ' ಶೃಂಗಾರ ರಸ ' ಅಭಿನಯಿಸುತ್ತಾಳೆ; ತರುವಾಯ ಶಿವ ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ರೌದ್ರ, ಶಾಂತರಸಗಳನ್ನು ಪ್ರದರ್ಶಿಸುತ್ತಾನೆ. ಶಿವೆ ಯಾವದರಲ್ಲಿಯೂ ಸೋಲುವುದಿಲ್ಲ.

ಶಿವನಿಗೆ ಚಿಂತೆ ಮೂಡುತ್ತದೆ. ಶಿವೆಗೆ ತಾನು ಸೋಲುವಂತಾಯಿತಲ್ಲ ಎಂದು ದುಃಖಿಯಾಗುತ್ತಾನೆ. ಉಳಿದಿರುವ 'ಭೀಭತ್ಸ' ರಸದ ಸೆನಪಾಗುತ್ತದೆ. ಶಿವನ ಮುಖದಲ್ಲಿ ಗೆಲುವಿನ ಮುಗುಳ್ನಗೆ ಮೂಡುತ್ತದೆ. ತಾನು ಧರಿಸಿದ್ದ ಗಜಚರ್ಮಾಂಬರವನ್ನು ಕಿತ್ತೆಸೆದು ದಿಗಂಬರನಾಗಿ ಉನ್ಮತ್ತನಂತೆ ಭೀಭತ್ಸ ರಸವನ್ನು ಅಭಿನಯಿಸಿ ತೋರಿಸುತ್ತಾನೆ. ಸ್ತ್ರೀ ಸಹಜವಾದ ನಾಚಿಕೆ ಶಿವೆಯನ್ನು ಕಾಡುತ್ತದೆ. ಶಿವನಂತೆ ತಾನೂ ವಿವಸ್ತ್ರಳಾಗಲೊಪ್ಪದೆ ತನ್ನ ಸೋಲನ್ನೊಪ್ಪಿಕೊಳ್ಳುತ್ತಾಳೆ. ಪರೀಕ್ಷಕರು ಶಿವನೇ ಗೆದ್ದನೆಂದು ಸಾರುತ್ತಾರೆ.

ಅಧೋಮುಖಿಯಾಗಿ ದುಃಖಿಸುತ್ತ ನಿಂತಿದ್ದ ಶಿವೆಯ ಬಳಿಗೆ ಶಿವ ಬಂದು ಆಕೆಯನ್ನು ಸಂತೈಸುತ್ತ 'ದೇವಿ, ನಾನು ಸೃಷ್ಟಿ, ನೀನು ಸ್ಥಿತಿ. ಸೃಷ್ಟಿ ಸಹಜವಾಗಿ ದಿಗಂಬರ ಸ್ವರೂಪ. ಉಪಾಧಿಗಳು ಸ್ಥಿತಿಯನ್ನು ವಸ್ತ್ರಗಳಂತೆ ಅಪ್ಪಿಕೊಳ್ಳುತ್ತವೆ. ಲಯದ ಘಟ್ಟ ಮುಟ್ಟುವ ಜೀವ ಮತ್ತೆ ಅನಿವಾರ್ಯವಾಗಿ ದಿಗಂಬರ ಸ್ವರೂಪಿಯಾಗುತ್ತದೆ. ನೀನೂ, ನಾನು ಲೋಕವ್ಯಾಪಾರದ ಹಂತಗಳು. ಇದರಲ್ಲಿ ಸೋಲು ಗೆಲವುಗಳ ಪ್ರಶ್ನೆಯೆಲ್ಲಿಂದ ಬಂತು?' ಎಂದು ವಿವರಿಸುತ್ತಾನೆ.

ಸಂತುಷ್ಟಳಾದ ಶಿವೆ ಶಿವನೊಂದಿಗೆ ಆನಂದದಿಂದ ಕುಣಿಯುತ್ತಾಳೆ. ದೇವಾದಿ ದೇವತೆಗಳೂ ಅವರೊಂದಿಗೆ ಕುಣಿದು ಹಿಗ್ಗುತ್ತಾರೆ.

ಕೀರ್ತಿಯ ಶಿವನ ಪಾತ್ರದ ಮಟ್ಟಕ್ಕೆ ತಾರಾದೇವಿಯ ಪಾರ್ವತಿ ಪಾತ್ರ ಬರಲಿಲ್ಲವೆಂದು ಎಲ್ಲರೂ ಅಭಿಪ್ರಾಯಪಟ್ಟರು. 'ಕಲಾವಿದ' ಪತ್ರಿಕೆ ಪ್ರದರ್ಶನವನ್ನು ವಿಮರ್ಶಿಸುತ್ತ 'ಸ್ತ್ರೀ ಪಾತ್ರಗಳನ್ನಾಯುವುದರಲ್ಲಿ ಕೀರ್ತಿಯವರು ಸ್ವಲ್ಪವೂ ಎಚ್ಚರಿಕೆ ವಹಿಸುವಂತೆ ಕಾಣುವುದಿಲ್ಲ. ಹಿಂದಿನ ಪ್ರದರ್ಶನದಲ್ಲಿ ನಾವು ಚಂದ್ರಮುಖಿಯ ಅಪಕ್ವ ಅಭಿನಯ ಸಹಿಸಿಕೊಳ್ಳಬೇಕಾಯಿತು; ಈ ಪ್ರದರ್ಶನದಲ್ಲಿ ತಾರಾದೇವಿಯನ್ನು ಸಹಿಸಿಕೊಳ್ಳಬೇಕಾಯಿತು. ಕೀರ್ತಿಯವರಿಗೆ ತಮ್ಮ ಮಂಡಳಿಯ ಕಲಾವಿದ, ಕಲಾವಿದೆಯರ ಪ್ರತಿಭೆಯ ಅರಿವೇ ಇದ್ದ ಹಾಗೆ ಕಾಣುವುದಿಲ್ಲ. ತಾರಾದೇವಿಯ ಪಾತ್ರವನ್ನು, ಪಾರ್ವತಿಯ ಸಖಿ ಭೂಮಿಕೆ ಧರಿಸಿದ್ದ ಕಲ್ಪನಾದೇವಿ ಅಭಿನಯಿಸಿದ್ದರೆ ಪ್ರದರ್ಶನ ಹೆಚ್ಚು ಕಳೆಗಟ್ಟುತ್ತಿತ್ತು' ಎಂದು ಬರೆಯಿತು.

ಕಲಾವಿದ ಪತ್ರಿಕೆಯ ವಿಮರ್ಶೆ ಅನವಶ್ಯಕ ಗೊಂದಲಕ್ಕೆಡೆ ಮಾಡಿತು. ತಾರಾ ಕೋಪಿಸಿಕೊಂಡು, 'ಇನ್ನು ಮೇಲೆ ನಾನು ಪಾತ್ರ ವಹಿಸುವುದೇ ಇಲ್ಲ' ಎಂದಳು. ಕೀರ್ತಿ ಮುನಿದುಕೊಂಡು 'ಇದು ಕಲ್ಪನೆಯ ಕಿತಾಪತಿ ಇರಬೇಕು' ಎಂದ. ಜೀವಾನಂದಂ ಅವರಿಬ್ಬರನ್ನೂ ಸಮಾಧಾನ ಮಾಡಬೇಕಾಯಿತು. 'ಕಲ್ಪನಾ ಇನ್ನೂ ಮಗು– ಅವಳ ಮೇಲೆ ಇಲ್ಲಸಲ್ಲದ ಅಪಾದನೆ ಮಾಡಬಾರದು' ಎಂದು ವಿವೇಕ ಹೇಳಿದರು.

ಬೇಸಿಗೆಯಲ್ಲಿ ಮದರಾಸಿನಲ್ಲಿ ಪ್ರದರ್ಶನ ಕೊಡುವ ವೇಳೆಗೆ ನಾಯಕಿ ಪಾತ್ರಕ್ಕೆ ಕಲ್ಪನೆಯನ್ನು ಸಿದ್ಧಗೊಳಿಸಬೇಕೆಂಬ ವಿಚಾರ ಜೀವಾನಂದಂ, ಕೀರ್ತಿ ಇಬ್ಬರ ಮನಸ್ಸಿನಲ್ಲಿಯೂ ಒಮ್ಮೆಲೇ ಹೊಳೆಯಿತು.

ಇದುವರೆಗೆ 'ಹತ್ತರ ಕೂಡ ಹನ್ನೊಂದು' ಆಗಿದ್ದ ಕಲ್ಪನೆಗೆ ಇದ್ದಕ್ಕಿದ್ದಂತೆ ಪ್ರಾಧಾನ್ಯ ಬಂದಿತು. ಅವರ 'ರಿಹರ್ಸಲ್'ಗೆ ಕೀರ್ತಿ ಬಂದು ಕೂಡುತ್ತಿದ್ದುದು ಮಾತ್ರವಲ್ಲದೆ ದ್ವಂದ್ವ ನಾಟ್ಯಗಳಲ್ಲಿ ಜತೆಯಲ್ಲಿ ರಿಹರ್ಸಲ್ ಮಾಡುತ್ತಿದ್ದ.

ಸೋಹಾನಿ ಸೋದರಿಯರು ಒಳಗೇ ಕುದಿಯಲಾರಂಭಿಸಿದರು. ಹೃದಯದಲ್ಲಿ ತುಂಬಿದ್ದ ಈರ್ಷೆಯ ವಿಷವನ್ನು ತೋರಗೊಡದೆ ತಾರಾ ಸಮಯ ಕಾಯುತ್ತಿದ್ದಳು.

ತಾರಾ, ಮೀರಾ, ಚಂದ್ರಮುಖಿ ಕೀರ್ತಿಯ 'ಒಳಗುಂಪಿ'ಗೆ ಸೇರಿದ್ದರು. ಸಂಜೆ ಮಿಲ್ಟ್ರಿ ಮಿತ್ರರು ಬಂದರೆ, ಅವರ ಆತಿಥ್ಯಕ್ಕೆ ನೆರವಾಗುತ್ತಿದ್ದವರೂ ಈ ಮೂವ್ವರೇ! ಹೇಗಾದರೂ ಮಾಡಿ ಕಲ್ಪನೆಯನ್ನೂ ಒಳಗುಂಪಿಗೆ ಸೇರಿಸಿಕೊಂಡು ಅವಳ ಶೀಲದ ಪದ್ಮವ್ಯೂಹವನ್ನು ಭೇದಿಸಬೇಕೆಂದು ತಾರಾ ನಿರ್ಧರಿಸಿಕೊಂಡಳು.

ಕೀರ್ತಿಯ ಒಳಗುಂಪಿನ ಚರಿತ್ರೆ ತಿಳಿದುಕೊಳ್ಳುವುದಕ್ಕಾಗಲಿ, ಅದನ್ನು ಸೇರುವುದಕ್ಕಾಗಲಿ ಕಲ್ಪನಾ ಸ್ವಲ್ಪವೂ ಉತ್ಸುಕಳಾಗಿರಲಿಲ್ಲ. ರಿಹರ್ಸಲ್ ವೇಳೆಯಲ್ಲಾಗಲಿ, ಉಳಿದ ಕಾಲದಲ್ಲಾಗಲಿ ಇತರರು ಆ ಬಗ್ಗೆ ಮಾತನಾಡಿದರೆ ಕಲ್ಪನಾ ಮುಖ ಸಿಂಡರಿಸಿಕೊಂಡು ಆ ಸ್ಥಳ ಬಿಟ್ಟು ದೂರ ಹೋಗುತ್ತಿದ್ದಳು. ನೃತ್ಯಪಾಠ ಬಿಟ್ಟು ಅವಳಿಗೆ ಬೇರೆ ಯಾವ ಹವ್ಯಾಸವೂ ಬೇಕಾಗಿರಲಿಲ್ಲ.

ಎಷ್ಟೋ ಬಾರಿ ಜತೆಯಲ್ಲಿ ಡ್ರೈವಿಗೋ, ಸಿನೇಮಾಕ್ಕೋ, ಅಂಗಡಿಯ ವ್ಯಾಪಾರಕ್ಕೋ ಕಲ್ಪನೆಯನ್ನು ಜತೆಯಲ್ಲಿ ಕರೆದೊಯ್ಯಬೇಕೆಂದು ಪ್ರಯತ್ನಿಸಿ ತಾರಾ, ಮೀರಾ ಇಬ್ಬರೂ ವಿಫಲರಾಗಿದ್ದರು. ಅವರ ಕರೆಯನ್ನು ಅತಿ ಸೂಕ್ಷ್ಮವಾಗಿ ನಿರಾಕರಿಸಿ ಕಲ್ಪನಾ ತನ್ನ ಕೆಲಸದಲ್ಲಿ ಮಗ್ನಳಾಗುತ್ತಿದ್ದಳು.

ಕಲ್ಪನೆಯ ನಡತೆಯನ್ನು ಕುಂಜುಮಣಿ ಬಹಳ ಮೆಚ್ಚಿಕೊಂಡಿದ್ದರು. 'ನಿನ್ನಿಂದ ನಮ್ಮ ಮಂಡಳಿಗೆ ಮಾತ್ರವೇ ಅಲ್ಲ; ನಾಟ್ಯಕಲೆಗೇ ಗೌರವ ಬರುತ್ತದೆ' ಎಂದು ಬಾಯಿಬಿಟ್ಟು ಹೇಳುತ್ತಿದ್ದರು. ಅವಳ ಶ್ರದ್ಧೆಯನ್ನು ಮಾದರಿಯಾಗಿ ಇತರರಿಗೆ ತೋರಿಸಿ 'ನೀವು ಎಷ್ಟು ಕಲಿತರೂ ಇಷ್ಟೇ – ನಿಮಗೇಕೆ ನಾಟ್ಯಕಲೆ' ಎಂದು ಮೂದಲಿಸುತ್ತಿದ್ದರು.

ಕಲ್ಪನೆಯ ಗಾಂಭೀರ್ಯವನ್ನು ಮೆಚ್ಚಿಕೊಂಡು ಅವಳನ್ನು ಅಂತರಂಗದಲ್ಲಿಯೇ ಆರಾಧಿಸುತ್ತಿದ್ದವನು ಕ್ಯಾಪ್ಟನ್ ವಿಜಯ. ಕೀರ್ತಿಯ 'ಒಳಬಳಗ' ಕ್ಕೆ ಅವನು ಸೇರದಿದ್ದರೂ, ನಿಸ್ಸಾರ್, ಸೋಹನ್‌ಸಿಂಗರಂತೆ ಅದರಲ್ಲಿಯೇ ಮುಳುಗದೆ ಇದ್ದವನು ವಿಜಯನೊಬ್ಬನೇ.

ನಿಸ್ಸಾರ್ ಕಲ್ಪನೆಯನ್ನು ಮಾತನಾಡಿಸಲು ಪ್ರಯತ್ನಿಸಿ ಅವಳಿಂದ ತಿರಸ್ಕೃತನಾಗಿದ್ದುದನ್ನು ವಿಜಯನೂ ನೋಡಿದ್ದ. ಕಲ್ಪನೆಯನ್ನು ಮಾತನಾಡಿಸಲು ಆತನ ಮನಸ್ಸು ಹರಿಯುತ್ತಿದ್ದರೂ ಮುಂದಡಿಯಿಡಲು ಧೈರ್ಯವಾಗುತ್ತಿರಲಿಲ್ಲ. 'ಇಂಥ ವಿಷ ವಾತಾವರಣದಲ್ಲಿ ಈ ಹೆಣ್ಣು ತಲೆಯೆತ್ತಿ ನಿಂತಿದೆಯಲ್ಲಾ' ಎಂದು ವಿಜಯ ಸಂತೋಷಪಡುತ್ತಿದ್ದ.

ಕಲ್ಪನೆಯ ಪರೀಕ್ಷೆ ಸಮೀಪಕ್ಕೆ ಬಂದಿತ್ತು. ಸ್ವಲ್ಪ ಕಾಲ ಅವಳು ನಾಟ್ಯವನ್ನು ಬದಿಗೊತ್ತಿ ಕಾಲೇಜ್ ವ್ಯಾಸಂಗಕ್ಕೆ ಗಮನ ಕೊಡಬೇಕಾಗಿತ್ತು. ಒಮ್ಮೆ ಅವಳು ನಾಲ್ಕು ದಿನ ನಾಟ್ಯಶಾಲೆಯ ಬಳಿ ಸುಳಿಯಲು ಸಾಧ್ಯವಾಗಲಿಲ್ಲ. ಮದರಾಸಿನ ಪ್ರೋಗ್ರಾಂ ನಿಶ್ಚಯಿಸಿಕೊಂಡು ಬರಲು ಹೋಗಿದ್ದ ಜೀವಾನಂದಂ ಊರಿಗೆ ಹಿಂದಿರುಗಿರಲಿಲ್ಲ. ಕೀರ್ತಿ ಒಂದು ದಿನ ಸಂಜೆ ವಿಜಯನನ್ನು ಕರೆದು

"ಕಲ್ಪನಾ ಏಕೋ ಬಂದಿಲ್ಲ, ನೀವು ಅತ್ತ ಕಡೆ ಹೋಗುವುದಿದ್ದರೆ ವಿಚಾರಿಸಿ. ಮದರಾಸು ಪ್ರದರ್ಶನ ಸಮೀಪಕ್ಕೆ ಬರುತ್ತಿದೆ. ಕಲ್ಪನೆಯನ್ನೇ

ಪ್ರಧಾನ ನರ್ತಕಿ ಮಾಡಿಕೊಂಡು ನಾವು ಕೆಲಸ ತೂಗಬೇಕಾಗಿದೆ. ಅವಳು ರಿಹರ್ಸಲ್ಲಿಗೆ ಬರದಿದ್ದರೆ ಆಭಾಸವಾಗುತ್ತದೆ. "

ಎಂದು ಹೇಳಿದ. ವಿಜಯನ ಬಹಳ ದಿನಗಳ ಆಸೆ ಪೂರೈಸಿದಂತಾಯಿತು. ಕಲ್ಪನೆಯನ್ನು ನೋಡುವ ಅವಕಾಶ ಮಾಡಿಕೊಟ್ಟ ಕೀರ್ತಿಯನ್ನು ಮನಸ್ಸಿನಲ್ಲಿಯೇ ನೂರು ಸಾರಿ ವಂದಿಸಿದ.

ವಿಜಯ ಕಲ್ಪನೆಯ ಮನೆಗೆ ಹೋದಾಗ ಡಾ. ಶೇಷಗಿರಿರಾಯರು ಕೈಯಲ್ಲೊಂದು ಪುಸ್ತಕ ಹಿಡಿದು ಕಾಂಪೌಂಡಿನಲ್ಲಿ ಓಡಿಯಾಡುತ್ತಿದ್ದರು. ವಿಜಯ ತನ್ನ ಜೀಪ್ ಕಾರು ನಿಲ್ಲಿಸಿ, ಒಳಗೆ ಹೋದ. ಡಾಕ್ಟರು ಅವನನ್ನು ನೋಡಿ

" ಯಾರು ಬೇಕಾಗಿತ್ತು ? " ಎಂದು ಕೇಳಿದರು.

" ಮಿಸ್. ಕಲ್ಪನಾ ಅವರನ್ನು ನೋಡಬೇಕಾಗಿತ್ತು. "

" ನೀವು ಯಾರು ? "

" ಕ್ಯಾಪ್ಟನ್ ವಿಜಯ........ ಕೀರ್ತಿಯವರು ಸಂದೇಶ ಕಳಿಸಿದ್ದಾರೆ. "

" ಬನ್ನಿ ಬನ್ನಿ ಒಳಗೆ ಬನ್ನಿ........ ಕಲ್ಪನಾ ನಿಮ್ಮ ವಿಷಯ ಆಗಾಗ್ಗೆ ಪ್ರಸ್ತಾಪಿಸುತ್ತಿರುತ್ತಾಳೆ. "

ಎಂದು ವಿಜಯನನ್ನು ಕರೆದೊಯ್ದು ಡ್ರಾಯಿಂಗ್ ರೂಮಿನಲ್ಲಿ ಕೂಡಿಸಿ ತಾವು ಒಳಗೆ ಹೋದರು.

' ನನ್ನ ವಿಷಯ ಕಲ್ಪನಾ ಪ್ರಸ್ತಾಪಿಸಿರುವಳೇ ! ' ಎಂದುಕೊಂಡ. ಡಾಕ್ಟರು ಆಡಿದ ಆ ಒಂದು ಮಾತು ವಿಜಯನ ಹೃದಯಕ್ಕೆ ಹಾಲೆರೆದಂತಾಗಿತ್ತು.

ಮರುಕ್ಷಣವೇ ಅವನನ್ನು ಅನುಮಾನ ಬಾಧಿಸತೊಡಗಿತು. ' ಕೀರ್ತಿಯವರ ಶಾಲೆಯಲ್ಲಿ ಕಲ್ಪನಾ ಯಾರನ್ನೂ ಮಾತನಾಡಿಸುತ್ತಿರಲಿಲ್ಲ. ನಮ್ಮಿಂದ ದೂರ ನಿಲ್ಲುತ್ತಿದ್ದಳು. ನಾನೀಗ ಹುಡುಕಿಕೊಂಡು ಬಂದಿರುವುದಕ್ಕೆ ಅಸಮಾಧಾನ ಪಟ್ಟುಕೊಳ್ಳುವಳೋ ಏನೋ ? '

ಡಾಕ್ಟರು ಮಗಳನ್ನು ಕರೆದುಕೊಂಡು ಬಂದರು. ಕಲ್ಪನಾ ವಿಜಯನ ಪರಿಚಯ ತಂದೆಗೆ ಮಾಡಿಕೊಟ್ಟಳು.

" ಕೀರ್ತಿಯವರು ಹೇಳಿ ಕಳಿಸಿದ್ದಾರೆ. ಮದರಾಸಿನ ಪ್ರದರ್ಶನ

ಹತ್ತಿರದಲ್ಲಿಯೇ ಇದೆಯಂತೆ. ರಿಹರ್ಸಲ್ಲಿಗೆ ನೀವು ಪುರಸತ್ತು ಮಾಡಿಕೊಂಡು ಬರಬೇಕೆಂದರು. ”

“ ನನ್ನ ಪರೀಕ್ಷೆ ಸಮೀಪಿಸಿತು – ಹೇಗೆ ಬರಲಿ ? ”

“ ಈ ಸಾರಿಯ ಪ್ರದರ್ಶನದಲ್ಲಿ ನೀವೇ ಪ್ರಧಾನ ಸ್ತ್ರೀಭೂಮಿಕೆ ಧರಿಸ ಬೇಕಂತೆ ! ”

“ ಹಾಗೇನು ? – ಹೋಗಿ ಬಾಮ್ಮಾ – ಅವರನ್ನು ನಿರಾಶೆಗೊಳಿಸ ಬೇಡ. ”

ಎಂದು ಡಾಕ್ಟರು ಮಗಳಿಗೆ ಹೇಳಿ

“ ಮಾತನಾಡುತ್ತಿರಿ. ಒಳಗೆ ಹೋಗಿ ನಿಮಗೆ ಸ್ವಲ್ಪ ಕಾಫೀಗೆ ಹೇಳಿ ಬರುತ್ತೇನೆ. ”

ಎಂದು ಡಾಕ್ಟರು ಎದ್ದು ಹೋದರು. ಕಲ್ಪನೆಯನ್ನು ಮಾತನಾಡಿಸಲು ವಿಜಯ ಧೈರ್ಯ ತಂದುಕೊಂಡು

“ ನಿಮ್ಮ ತಂದೆಯವರ ಅಭಿರುಚಿ ಬಹಳ ಮೇಲ್ಮಟ್ಟದ್ದು ” ಎಂದ.

“ ಏಕೆ ? ”

“ ಚಿತ್ರಗಳು, ಶಿಲ್ಪಗಳು, ಡ್ರಾಯಿಂಗ್ ರೂಮಿನ ಅಚ್ಚುಕಟ್ಟು ಎಲ್ಲವೂ ಅವರ ಸುಸಂಸ್ಕೃತಿಯನ್ನು ಸಾರುತ್ತಿವೆ. ಅವರ ವಿಷಯ ನಾನು ಬಹಳ ಕೇಳಿದ್ದೆ. ಇಂದವರ ದರ್ಶನವಾದುದು ನನ್ನ ಪುಣ್ಯ. ”

“ ಡ್ಯಾಡಿ ಕಲಾಭಿಮಾನಿಗಳು. ಪ್ರಾಚೀನ ಚಿತ್ರಗಳ ಮೂಲ ಕೃತಿ ಗಳನ್ನು ಸಂಗ್ರಹಿಸುವುದರಲ್ಲಿ ಅವರಿಗೆ ತುಂಬ ಅಭಿಮಾನ. ”

“ ಅವರ ಸಂಗ್ರಹವನ್ನೊಮ್ಮೆ ನೋಡಬೇಕಲ್ಲಾ ! ”

“ ಅವುಗಳಲ್ಲಿ ನಿಮಗೆ ಅಭಿರುಚಿ ಇದೆಯೇ ? ”

ವಿಜಯ ನಕ್ಕು

“ ಮಿಲ್ಟ್ರಿಯವರು ಎಂದರೆ ಶುದ್ಧ ರೂಕ್ಷರು ಎಂದು ತಿಳಿದುಕೊಂಡಿರು ವಿರಾ ? ಕಲೆಯ ವಿಷಯ ನನಗೆ ಹೆಚ್ಚು ಗೊತ್ತಿಲ್ಲ – ಆದರೆ ಅಭಿರುಚಿ ಇದೆ ಯೆಂದು ಧೈರ್ಯವಾಗಿ ಹೇಳಬಲ್ಲೆ. ”

“ ಆಗಲಿ – ಮತ್ತೆ ಯಾವಾಗಲಾದರೂ ತಂದೆಯವರ ಸಂಗ್ರಹ ತೋರಿ ಸುತ್ತೇನೆ. ”

" ನಾನು ಇಲ್ಲಿಗೆ ಬಂದೆನೆಂದು ನಿಮಗೆ ಅಸಮಾಧಾನವೇ ? "

" ಅಸಮಾಧಾನವೇಕಾಗಬೇಕು ? "

" ನಾಟ್ಯಶಾಲೆಯಲ್ಲಿ ನೀವು ಯಾರೊಂದಿಗೂ ಮಾತನಾಡುತ್ತಿರಲಿಲ್ಲ. "

" ಏನಿದೆ ಮಾತನಾಡುವುದಕ್ಕೆ. ಡ್ಯಾಡಿ ನನ್ನನ್ನು ನಾಟ್ಯಶಾಲೆಗೆ ಕಳು ಹಿಸುವುದು ನಾಟ್ಯವಿದ್ಯೆ ಕಲಿಯುವುದಕ್ಕೇ ವಿನಾ ಅವರಿವರೊಂದಿಗೆ ಚೆಲ್ಲಾಟ ಆಡಿಕೊಂಡು ಹೊತ್ತುಗಳೆಯುವುದಕ್ಕಲ್ಲ. "

ಕಲ್ಪನೆಯ ಉತ್ತರ ವಿಜಯನಿಗೆ ನುಂಗಲಾರದ ತುತ್ತಾಯಿತು.

" ನಾಟ್ಯಶಾಲೆಯ ವಾತಾವರಣ ನಿಮಗಷ್ಟು ಪ್ರಿಯವಾಗಿಲ್ಲವೆಂಬುದನ್ನು ಬಲ್ಲೆ. "

" ಇನ್ನೊಬ್ಬರ ರೀತಿ ನೀತಿಗಳನ್ನು ನಾನೇಕೆ ಚರ್ಚಿಸಲಿ. "

" ನನ್ನ ವಿಷಯದಲ್ಲಿಯೂ ನಿಮಗೆ ತಪ್ಪು ಭಾವನೆ ಬಂದಿರಬಹುದು. "

" ಏಕೆ ಬರಬೇಕು. ನೀವು ಅಸಭ್ಯ ರೀತಿಯಿಂದ ನನ್ನ ಹತ್ತಿರ ನಡೆದು ಕೊಂಡಿಲ್ಲವಲ್ಲ. "

" ನಿಸ್ಸಾರನ ನಡೆವಳಿಕೆಯಿಂದ ಅವನ ಸಂಗಡಿಗರಿಗೂ ಕೆಟ್ಟ ಹೆಸರು ಬರುವುದು ಸಹಜ. "

" ನಾಟ್ಯಕಲೆಗೆ ಬಂದಿರುವ ಕೆಟ್ಟ ಹೆಸರನ್ನು ತೊರೆಯಬೇಕೆಂದಲ್ಲವೇ ಕುಲೀನೆಯರಾದ ನಾವು ' ನಾಟ್ಯಶಾಲೆ ' ಗೆ ಬಂದಿರುವುದು ? "

" ಹೌದು. "

" ಆ ಧ್ಯೇಯವನ್ನು ನಾವು ಮರೆಯದಿರಬೇಕು. ಮತ್ತು ನಮ್ಮ ಗೌರವ ಕಾಪಾಡುವ ಹೊಣೆಗಾರಿಕೆ ಇತರರದೂ ಆಗಿರುತ್ತದೆ. "

" ಇನ್ನೊಬ್ಬರ ಜತೆಯಲ್ಲಿ ಮಾತನಾಡಿದಾಕ್ಷಣ ಶೀಲ ಭಂಗವಾಗುವು ದೆಂದು ಭಾವಿಸುವುದು ತೀರ ಹಳೆಯ ಭಾವನೆಯಾಗುತ್ತದೆ. "

" ನಿಮ್ಮ ಮಾತು ಒಪ್ಪಿದೆ. ನಾನು ಯಾರೊಂದಿಗೆ ಮಾತನಾಡುವು ದಕ್ಕಾಗಲಿ ಎಲ್ಲಿಗೆ ಹೋಗುವುದಕ್ಕಾಗಲಿ ನನ್ನ ತಾಯಿತಂದೆ ಅಡ್ಡಪಡಿಸುವು ದಿಲ್ಲ. ಅವರು ನನಗೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟಿದ್ದಾರೆ. ಆ ಸ್ವಾತಂತ್ರ್ಯವನ್ನು ನಾನು ದುರುಪಯೋಗ ಪಡಿಸಿಕೊಳ್ಳಬಾರದು – ಕೀರ್ತಿ ಯವರ ' ನಾಟ್ಯಶಾಲೆ ' ಗೆ ಬರುವವರೆಲ್ಲಾ ಕೇವಲ ಕಲಾಭಿಮಾನದಿಂದಲೇ

ಬರುವರೇನು ! – ಕೇವಲ ಸದುದ್ದೇಶದಿಂದಲೇ ನಮ್ಮನ್ನು ಮಾತನಾಡಿಸುವರೇನು ? ”

“ ಇಲ್ಲ. ನಿಮ್ಮ ಅಭಿಪ್ರಾಯ ಒಪ್ಪಿದೆ ” ಎಂದ.

ಡಾಕ್ಟರು ಅಡಿಗೆಯವನ ಕೈಯಲ್ಲಿ ಕಾಫಿ, ಬಿಸ್ಕತ್ತು ತೆಗೆಸಿಕೊಂಡು ಬಂದು ಜತೆಯಲ್ಲಿ ಕುಳಿತರು. ಅಡಿಗೆಯವನು ಕಪ್ಪುಗಳಿಗೆ ಕಾಫಿ ಬಗ್ಗಿಸಿ ಕೊಟ್ಟ. ಕಲ್ಪನಾ ಬಿಸ್ಕತ್ತಿನ ತಟ್ಟೆಯನ್ನು ವಿಜಯನ ಮುಂದೆ ಹಿಡಿದಳು. ಅವನು ಒಂದು ಬಿಸ್ಕತ್ತು ಕೈಗೆತ್ತಿಕೊಂಡ. ಡಾಕ್ಟರು ಬಿಸ್ಕತ್ತು ಬೇಡವೆಂದರು. ಕಲ್ಪನೆಯೂ ಕೈಗೊಂದು ಬಿಸ್ಕತ್ತು ತೆಗೆದುಕೊಂಡಳು.

ಅವರು ಕಾಫಿ ಸ್ವೀಕರಿಸುತ್ತಿರುವಲ್ಲಿ ಹೊರಗೆ ಕಾರು ಬಂದು ನಿಂತಿತು. ಶ್ರೀಧರ ಹೆಂಡತಿ, ತಾಯಿಯೊಂದಿಗೆ ಒಳಗೆ ಬಂದ;

ಡಾಕ್ಟರು ತಮ್ಮ ಕಾಫಿ ಕಪ್ಪನ್ನು ಪಕ್ಕದಲ್ಲಿದ್ದ ಟೀಪಾಯ್ ಮೇಲಿಟ್ಟು ಎದ್ದು ಹೆಂಡತಿಯ ಕೈಹಿಡಿದು, ಅವರನ್ನು ಸೋಫಾದ ಮೇಲೆ ಕೂಡಿಸಿ, ಸ್ವಸ್ಥಾನದಲ್ಲಿ ಕುಳಿತು ಕಾಫಿ ಕಪ್ ಕೈಗೆ ತೆಗೆದುಕೊಂಡರು.

ಕಲ್ಪನಾ ವಿಜಯನಿಗೆ ತನ್ನ ಅಣ್ಣ, ಅತ್ತಿಗೆ, ತಾಯಿಯ ಪರಿಚಯ ಮಾಡಿಕೊಟ್ಟು, ವಿಜಯನ ಪರಿಚಯ ಅವರಿಗೆ ಮಾಡಿಕೊಟ್ಟಳು. ಶ್ರೀಧರ ನಿಂತುಕೊಂಡೇ ಕಾಫಿ ಕುಡಿದು ಎಲ್ಲರ ಕ್ಷೇಮ ಕೇಳಿಕೊಂಡು ತನ್ನ ಕೆಲಸದ ಮೇಲೆ ಹೊರಟು ಹೋದ.

ಡಾಕ್ಟರ ಸಂಸಾರದ ಈ ಚಿತ್ರ ವಿಜಯನ ಮನಸ್ಸಿನ ಮೇಲೆ ವಿಲಕ್ಷಣ ಪರಿಣಾಮವನ್ನುಂಟು ಮಾಡಿತು.

“ ನಾನು ರಿಹರ್ಸಲ್ಲಿಗೆ ಬರಬೇಕೆಂದು ಕೀರ್ತಿ ಹೇಳಿಕಳಿಸಿದ್ದಾರೆ ಮಮ್ಮಿ.”

ಎಂದು ಕಲ್ಪನಾ ತಾಯಿಗೆ ವರದಿ ಒಪ್ಪಿಸಿದಳು.

“ ಪುರಸತ್ತು ಮಾಡಿಕೊಂಡು ಹೋಗಿ ಬಾಮ್ಮಾ. ”

ಎಂದರು ಕಲ್ಯಾಣಮ್ಮ.

“ ಆಗಲಿ, ನಾಳೆ ಬರುತ್ತೇನೆ ” ಎಂದು ಕಲ್ಪನಾ ಹೇಳಿದಳು.

ವಿಜಯ ಬಂದ ಕೆಲಸ ಮುಗಿದಿತ್ತು. ಅವನು ಹೊರಡಲನುವಾಗಿ ಎದ್ದು ನಿಂತ.

“ ಹೊರಡಲು ಅವಸರವೇ ? ” ಎಂದು ಡಾಕ್ಟರು ಕೇಳಿದರು.

" ಏನೂ ಇಲ್ಲ. ನಿಮಗೆ ಸುಮ್ಮನೆ ತೊಂದರೆ ಕೊಡುತ್ತಿದ್ದೇನೆ."

" ನಮಗೇನು ತೊಂದರೆ ! "

ವಿಜಯ ಮತ್ತೆ ಕುಳಿತು ಡಾಕ್ಟರಿಗೆ

" ತಮ್ಮ ಕಲಾಸಂಗ್ರಹ ನೋಡಬೇಕು."

" ಭಾರಿ ಸಂಗ್ರಹವೇನೂ ಇಲ್ಲ. ಅಲ್ಪ ಸ್ವಲ್ಪ ಮೂಲ ಚಿತ್ರಗಳನ್ನು ಸಂಗ್ರಹಿಸಿದ್ದೇನೆ. ಯಾವಾಗ ಬೇಕಾದರೂ ಬನ್ನಿ– ತೋರಿಸುತ್ತೇನೆ."

ಕಲ್ಯಾಣಮ್ಮನವರು ಸೂಕ್ಷ್ಮವಾಗಿ ವಿಜಯನನ್ನು ಪರೀಕ್ಷಿಸಿ

" ನಿಮ್ಮದು ಇದೇ ಊರೇ ? " ಎಂದು ಕೇಳಿದರು.

" ಹೌದು ತಾಯಿ. "

" ತಂದೆ, ತಾಯಿ, ಅಕ್ಕ-ತಂಗಿ, ಅಣ್ಣ-ತಮ್ಮ ಎಲ್ಲಿದ್ದಾರೆ – ಏನು ಮಾಡುತ್ತಿದ್ದಾರೆ. "

" ತುಮಕೂರು ಡಿಸ್ಟ್ರಿಕ್ಟಿನ ಒಂದು ಹಳ್ಳಿಯಲ್ಲಿದ್ದಾರೆ. ಅಲ್ಲಿ ನಮಗೆ ಸ್ವಲ್ಪ ಜಮೀನು ಇದೆ. ತಂದೆ ಮತ್ತು ನನ್ನ ತಮ್ಮ ಸ್ವಂತ ಸಾಗುವಳಿಮಾಡಿ ಸುತ್ತಿದ್ದಾರೆ. ನನ್ನ ಅಕ್ಕನನ್ನು ಮೈಸೂರಿಗೆ ಕೊಟ್ಟಿದೆ. ಭಾವ ಮೈಸೂರು ಡಿಸ್ಟ್ರಿಕ್ ಕಛೇರಿಯಲ್ಲಿ ಗುಮಾಸ್ತರಾಗಿದ್ದಾರೆ. "

" ನೀವು ಮಿಲ್ಟ್ರಿ ಹೇಗೆ ಸೇರಿದಿರಿ ? "

ಎಂದು ಕಲ್ಯಾಣಮ್ಮ ಕುತೂಹಲದಿಂದ ಕೇಳಿದರು.

" ನನ್ನದೂ ಸ್ವಲ್ಪ ಚರಿತ್ರೆ ಇದೆ ತಾಯಿ. ನಾನು ಚಿಕ್ಕವನಾಗಿದ್ದಾಗಲೇ ತಾಯಿ ತೀರಿಕೊಂಡರು. ನನಗೆ ಓದುವ ಹುಚ್ಚು ಬಹಳ. ತಂದೆಯವರಿಗೆ ನನ್ನನ್ನು ಓದಿಸಲು ಇಷ್ಟವಿಲ್ಲ. ಸ್ವಲ್ಪ ವೈಮನಸ್ಯ ಆರಂಭವಾಯಿತು. ನಾನು ಮನೆ ಬಿಟ್ಟು ತುಮಕೂರು ಸೇರಿದೆ. ಅಲ್ಲಿ ಭಿಕ್ಷಾನ್ನ, ವಾರಾನ್ನ ಮಾಡಿಕೊಂಡು ಹೈಸ್ಕೂಲು ಮುಗಿಸಿ, ಬೆಂಗಳೂರಿಗೆ ಬಂದೆ. ನನ್ನ ಅದೃಷ್ಟವಶಾತ್ ರಾಮಕೃಷ್ಣ ವಿದ್ಯಾರ್ಥಿ ನಿಲಯದಲ್ಲಿ ಸ್ಥಳ ಸಿಕ್ಕಿತು. ಕಾಲೇಜಿನ ಯು. ಟಿ. ಸಿ. ( University Training Corps ) ಕ್ಯಾಪ್ಟನ್ನೂ ಆಗಿದ್ದೆ. ಕಿಂಗ್ಸ್ ಕಮಿಷನ್ನಿಗೆ ( King's Commission ) ಜನಗಳನ್ನೂ ತೆಗೆದುಕೊಳ್ಳುವುದಕ್ಕಾಗಿ ಪತ್ರಿಕೆಗಳಲ್ಲಿ ಜಾಹೀರಾತುಗಳು ಬಂದವು. ವಿನೋದಕ್ಕೆ ನಾನೂ ಒಂದು ಅಪ್ಲಿಕೇಷನ್ ಹಾಕಿದೆ. ಅಧಿಕಾರಿಗಳಿಂದ ಸಂದರ್ಶನ

ಕರೆ ( Interview Call ) ಬಂತು. ಇಂಟರ್‌ವ್ಯೂ ಅನುಕೂಲವಾಗಿ ನಡೆದು ನನಗೆ ಕೆಲಸವೇ ಸಿಕ್ಕುಬಿಟ್ಟಿತು. ”

“ ನಿಮ್ಮ ಮನೆಯವರಿಗೂ ನಿಮಗೂ ಸಂಬಂಧವೇ ಇಲ್ಲವೇ ? ”

“ ಅಲ್ಪ ಸ್ವಲ್ಪ ಇದೆ. ಪ್ರತಿ ತಿಂಗಳೂ ತಪ್ಪದೆ ಮನೆಗೆ ಸ್ವಲ್ಪ ಹಣ ಕಳಿಸುತ್ತಿರುತ್ತೇನೆ. ”

“ ಅಯ್ಯೋ ಪಾಪ! ಚಿಕ್ಕಂದಿನಲ್ಲಿ ತುಂಬ ಕಷ್ಟಗಳನ್ನು ಅನುಭವಿಸಿರ ಬೇಕು. ”

“ ನನ್ನ ಭಿಕ್ಷಾನ್ನ, ವಾರಾನ್ನ ದಿವಸಗಳನ್ನು ಜ್ಞಾಪಿಸಿಕೊಂಡರೆ ಮೈ-ಮೇಲೆ ಮುಳ್ಳುಗಳೇಳುತ್ತವೆ. ”

ವಿಜಯನ ಜೀವನ ಕಥೆಯನ್ನು ತಾವು ಕೆಣಕಿ ಕೇಳಬಾರದಾಗಿತ್ತೆಂದು ಕಲ್ಯಾಣಮ್ಮನವರ ಮನಸ್ಸಿಗೆ ಭಾಸವಾಯಿತು.

“ ವೃಥಾ ಈ ವಿಷಯ ತೆಗೆದು ನಿಮ್ಮ ಮನಸ್ಸು ನೋಯಿಸಿದೆ. ”

ಎಂದರು. ವಿಜಯ ಕ್ಷಣಕಾಲ ಅಂತರ್ಮುಖಿಯಾಗಿದ್ದು

“ ಇಲ್ಲ ತಾಯಿ. ನನ್ನ ಮನಸ್ಸನ್ನು ಸಂತೋಷಗೊಳಿಸಿರುವಿರಿ. ದಯಾಶೂನ್ಯವಾದ ಲೋಕದ ನಡವಳಿಕೆ ನೋಡಿ ನೋಡಿ ಬೇಸತ್ತಿದ್ದವನಿಗೆ ನಿಮ್ಮ ಕನಿಕರ, ಕರುಣೆ, ಧೈರ್ಯವಿತ್ತಿದೆ. ತಾಯಿಯ ಪ್ರೇಮ ಅನ್ಯಾದೃಶ ವಾದುದು ಎಂದು ಕೇಳಿದ್ದೆ – ಗ್ರಂಥಗಳಲ್ಲಿ ಓದಿದ್ದೆ. ನಿರ್ಭಾಗ್ಯನಾದ ನನಗೆ ಅದರ ಪಾಲು ಸಿಕ್ಕಲಿಲ್ಲ. ಅಂತಃಕರಣಪೂರ್ಣವಾದ ನಿಮ್ಮ ಮಾತು ಆ ಕೊರತೆಯನ್ನು ತುಂಬಿದೆ. ”

ಎಂದು ಕಳಕಳಿಯಿಂದ ನುಡಿದ. ಕಲ್ಯಾಣಮ್ಮನವರ ಕಣ್ಣುಗಳು ತೇವಗೊಂಡಿದ್ದವು. ಹೆಚ್ಚು ಕಾಲ ಅಲ್ಲಿ ನಿಂತರೆ ಸ್ಥೈರ್ಯ ಕಳೆದುಕೊಳ್ಳ ಬಹುದೆಂದು ಹೆದರಿ ವಿಜಯ ಎದ್ದು ನಿಂತ.

“ ಆಗಾಗ್ಗೆ ಬರುತ್ತಿರಿ. ”

ಎಂದು ಕಲ್ಯಾಣಮ್ಮನವರು ಆಹ್ವಾನವಿತ್ತರು.

“ ಅವಶ್ಯವಾಗಿ ಬರುತ್ತೇನಮ್ಮಾ – ಡಾಕ್ಟರ್ ಸಾಹೇಬರ ಕಲಾಸಂಗ್ರಹ ನೋಡಬೇಕಾಗಿದೆ. ”

ಎಂದು ಹೇಳಿ ನಮಸ್ಕರಿಸಿ ಹೊರಟುಬಿಟ್ಟ.

ಅವನು ಹೋದ ಮೇಲೆ ಕಲ್ಯಾಣಮ್ಮನವರು ಗಂಡನ ಕಡೆ ತಿರುಗಿ

"ಪ್ರತಿಯೊಂದು ಬಾಳಿನಲ್ಲಿಯೂ ಎಷ್ಟು ದುಃಖ, ಎಷ್ಟು ನಿರಾಶೆ ತುಂಬಿದೆ ನೋಡಿದಿರಾ?" ಎಂದು ಕೇಳಿದರು.

"ಆಸೆ ನಿರಾಶೆ, ಸುಖ ದುಃಖಗಳ ನಡುವೆ ಹೋಗುವ ಸೇತುವೆಯೇ ಜೀವನ ಕಲ್ಯಾಣಿ."

ಎಂದು ಡಾಕ್ಟರು ಉತ್ತರಿಸಿ, ವಿಷಯದ ಗಭೀರತೆಯನ್ನು ಪರಿಹರಿಸಲು

"ಏನು ಖರೀದಿ ಮಾಡಿಕೊಂಡು ಬಂದಿರಿ – ಅತ್ತೆ ಸೊಸೆ ಇಬ್ಬರೂ."

ಎಂದು ಕೇಳಿದರು.

"ಸುಂದರೂಗೆ ಮಾವಿನಕಾಯಿ ಸರ ಮಾಡಿ ಹಾಕಿ ಬಂದೆ." ಎಂದರು.

ಕಲ್ಪನಾ ಹುಸಿ ಮುನಿಸನ್ನು ತೋರುತ್ತಾ

"ಅತ್ತಿಗೆ ಬಂದ ಮೇಲೆ ಮಮ್ಮಿ ನಮ್ಮನ್ನು ಸಂಪೂರ್ಣವಾಗಿ ಮರೆಯುತ್ತಿದ್ದಾಳೆ ಡ್ಯಾಡಿ."

ಎಂದಳು. ಕಲ್ಯಾಣಮ್ಮನವರು ಮಗಳ ಕಡೆ ತಿರುಗಿ

"ಅಯ್ಯೋ - ಹುಚ್ಚಿ" ಎಂದರು.

೮

ಡಾಕ್ಟರ ಮನೆಯಲ್ಲಿ ಒಂದು ಗಂಟೆ ಕಳೆದುದು ವಿಜಯನಿಗೆ ಒಂದು ಜೀವಮಾನದ ಅನುಭವ ದೊರಕಿಸಿ ಕೊಟ್ಟಿತ್ತು. ಡಾಕ್ಟರ ಮತ್ತು ಅವರ ಹಾರ್ದಿಕ ವರ್ತನೆ ಅವನ ಮಾನಸಿಕ ಪ್ರಪಂಚದಲ್ಲಿ ಕ್ರಾಂತಿಯ ಕಿಡಿಗಳನ್ನು ದುರಿಸಿತ್ತು. ಡಾಕ್ಟರ ಮನೆ ಬಿಟ್ಟವನೇ ನೇರವಾಗಿ ಕೀರ್ತಿಯ ಮನೆಗೆ ಹೋಗಿ, ಡಿಕ್ಕಿಯನ್ನು ಕೂಗಿ ಅವನಿಗೆ ಮರುದಿನ ಕಲ್ಪನಾ ರಿಹರ್ಸಲ್ಲಿ ಬರುವ ವಿಷಯ ತಿಳಿಸಿ ನೇರವಾಗಿ ಬ್ಯಾರಕ್ಸಿಗೆ ( Barracks ) ಬಂದುಬಿಟ್ಟ.

ಅಂದು ವಿಜಯನಿಗೆ ಕೀರ್ತಿಯ 'ಒಳಬಳಗ' ದ ಕಾರ್ಯಕಲಾಪ ಬೇಕೆನಿಸಲಿಲ್ಲ.

ರೂಮಿಗೆ ಬಂದು ಕುಳಿತೊಡನೆಯೇ ನಾನಾ ಯೋಚನೆಗಳು ಮುತ್ತ ತೊಡಗಿದವು. ತನ್ನ ಜೀವನವನ್ನೇ ಅಳೆದು ಸುರಿದು ನೋಡಿದ.

ಪಟ್ಟ ದಾರಿದ್ರ್ಯದ ಬಾಲ್ಯ ಜೀವನವನ್ನು ಅನುಭವಿಸಿದುದಾಗಿತ್ತು - ಕಾಲೇಜಿನಲ್ಲಿದ್ದಾಗಲೂ ಅಷ್ಟೇ ಕಾರ್ಪಣ್ಯ – ಆದರೆ ಸಬ್ಜೆಕ್ಟ್ ಸ್ಕಾಲರ್‌ಶಿಪ್ ( Subject Scholarship ) ತಕ್ಕಮಟ್ಟಿಗೆ ಖರ್ಚು ಪೂರೈಸುತ್ತಿತ್ತು – ಊಟಕ್ಕೆ ಯೋಚನೆಯಿರಲಿಲ್ಲ – ಆದರದು ನಾನಾ ಬಯಕೆಗಳು ಸುಳಿಯುವ ವಯಸ್ಸು. ಒಳ್ಳೆಯ ಸೂಟ್ ಹಾಕಿಕೊಳ್ಳಬೇಕೆನಿಸುತ್ತಿತ್ತು – ಗೆಳೆಯರಿಗೆ ತಿಂಡಿ ಕಾಫಿ ಕೊಡಿಸಿ ಸಿನೀಮಾ ತೋರಿಸಬೇಕೆನಿಸುತ್ತಿತ್ತು– ಒಳ್ಳೆಯ ಊರುಗಳಿಗೆ ಹೋಗಿ ಬರಬೇಕೆನಿಸುತ್ತಿತ್ತು. ಯಾವದಕ್ಕೂ ಮಾರ್ಗವಿಲ್ಲ – ಅನುಕೂಲವಿಲ್ಲ; ಅದೇ ಕಾರ್ಪಣ್ಯ – ಅದೇ ಧನ ದಾರಿದ್ರ್ಯ !

ಕಿಂಗ್ಸ್ ಕಮಿಷನ್ ದೊರೆತ ಮೇಲೆ ಒಮ್ಮೆಲೇ ಜೀವನ ಬದಲಾಯಿಸಿತು. ಕೈತುಂಬ ಸಂಬಳ – ಊಟ ಆಫೀಸರ್ಸ್ ಮೆಸ್ಸಿನಲ್ಲಾಗುತ್ತಿತ್ತು; ಮಿಲ್ಟ್ರಿಯವರೇ ಬಟ್ಟೆಬರೆ ಕೊಡುತ್ತಿದ್ದರು. ಸಂಬಳವನ್ನು ಹೇಗೆ ಖರ್ಚು ಮಾಡಬೇಕೆನ್ನುವುದೇ ಒಂದು ಸಮಸ್ಯೆಯಾಗಿತ್ತು. ನಿರ್ಗತಿಕರ ಕೈಯಲ್ಲಿ ಸಿಧಿಯನ್ನಿಟ್ಟಂತಾಗಿತ್ತು.

ಆ ಸಮಸ್ಯೆ ಬಹಳ ಕಾಲ ಉಳಿಯಲಿಲ್ಲ – ಜತೆಯ ಆಫೀಸರುಗಳು ಖರ್ಚಿನ ದಾರಿ ತೋರಿಸಿ ಕೊಟ್ಟರು. ಬರುತ್ತಿದ್ದ ಹಣ ಸಾಲದೆನಿಸುವಂತಾಯಿತು – ಆಗಲೂ ಒಂದು ಬಗೆಯ ಕಾರ್ಪಣ್ಯ.

ಊರೂರುಗಳ ಪ್ರವಾಸವೂ ಸಾಧಿಸಿತು. ಸೈನ್ಯದೊಂದಿಗೆ ಹಲವು ಊರುಗಳನ್ನು ಸುತ್ತಾಡಿದ್ದೂ ಆಯಿತು. ಗೆಳೆಯರ ಜತೆಯಲ್ಲಿ ಊರಿನ ವೇಶ್ಯಾವಾಟಗಳನ್ನು ಸಂದರ್ಶಿಸಿದ್ದೂ ಆಯಿತು – ರಜೆಯನ್ನೆಲ್ಲಾ ಒಮ್ಮೆ ಕಾಶ್ಮೀರದಲ್ಲಿ ' ದೋಣಿ ಮನೆ ' ಯಲ್ಲಿ ಕಳೆದುದೂ ಆಯಿತು. ಆಗಲೂ ಕಾರ್ಪಣ್ಯ – ಮನಸ್ಸಿಗೆ ಯಾವದೂ ಹಿತವನ್ನು ಕೊಡಲೊಲ್ಲದು. ಏನೋ ಬೇಕು, ಏನೋ ಸಾಲದು ಎನ್ನುವ ತೀರದ ದಾಹ! ಮುಗಿಯದ ಹಸಿವು! ಅಣಗದ ಬಯಕೆ !

ಕೀರ್ತಿಯ ' ನಾಟ್ಯಕಲೆ ' ಯೂ,ಆ ಹಸಿವನ್ನಣಗಿಸಿರಲಿಲ್ಲ. ಚಂದ್ರಮುಖಿ, ತಾರಾ, ಮೀರಾ, ಇನ್ನಿತರರ ಸಖ್ಯವಾಗಿತ್ತು. ಆದರದು ಕೃತಕ!

ಬಣ್ಣದ ಬಟ್ಟೆಗಳ ಬಾಳು ಅಲ್ಪಾಯು !! – ಅಲ್ಲಿಯೂ ಕಾರ್ಪಣ್ಯ ! ಅಲ್ಲಿಯೂ ಅತೃಪ್ತಿ !!

ಆದರೆ ಕಲ್ಪನಾ ಮನಸ್ಸಿನಲ್ಲಿ ಬಿರುಗಾಳಿ ಎಬ್ಬಿಸಿದ್ದಳು. ತಾರೆ ಮೀರೆಯರು ಜತೆಗಿದ್ದೂ ಅವರನ್ನು ಮರೆಯಲು ಸಾಧ್ಯವಾಗಿತ್ತು – ಆದರೆ ಕಲ್ಪನೆಯು ದೂರವಿದ್ದು ಅವಳನ್ನು ಮರೆಯಲು ಸಾಧ್ಯವಿರಲಿಲ್ಲ.

ಕಡು ನೋವಿನಿಂದ ಬೆರೆತ ಭಾವನೆ ವಿಜಯನ ಮನಸ್ಸನ್ನಾಕ್ರಮಿಸಿತ್ತು ಅದರ ಧಾಳಿಗೆ ಅವನು ಬಸವಳಿದು ಬೆಂಡಾಗಿದ್ದ. ಅವನಿಗೇನೋ ಬೇಕಾಗಿತ್ತು – ಏನೆಂದು ಹೇಳಲರಿಯ ! ಏನೆಂದು ಅವನೇ ಅರಿಯ !

ಕಲ್ಪನಾ ಬೆಳಿಗ್ಗೆ ಪಾಠಕ್ಕೆ ಕೀರ್ತಿಯ ನಾಟ್ಯಶಾಲೆಗೆ ಬರುವುದು ವಿಜಯನಿಗೆ ಗೊತ್ತಿತ್ತು. ಬೆಳಿಗ್ಗೆ ಹೋದರೆ ಅವಳನ್ನು ನೋಡಬಹುದು – ದೂರದಿಂದಾದರೂ ನೋಡಬಹುದು.

ಮಾರನೆಯ ಬೆಳಿಗ್ಗೆ ಕೀರ್ತಿಯ 'ನಾಟ್ಯಶಾಲೆ' ಗೆ ಹೋಗಲನುವಾದ. ಜೀಪ್ ನಡಿಸಿಕೊಂಡು ಕೀರ್ತಿಯ ಮನೆಗೆ ತಿರುಗುವ ಕೂಟಿನ ಬಳಿಗೂ ಬಂದ – ಮನಸ್ಸು ಥಟ್ಟನೆ ಹಿಂಜರಿಯಿತು. ಕಾರು ಕಬ್ಬನ್ ಪಾರ್ಕ್ ಬಳಿಗೆ ಓಡಿತು.

ವಿಜಯ 'ನಾಟ್ಯಶಾಲೆ' ಯ ಬಳಿಗೆ ನಾಲ್ಕೈದು ದಿನ ಸುಳಿಯಲಿಲ್ಲ. ಕೀರ್ತಿ ಮತ್ತು ಇತರ ಗೆಳೆಯರು 'ಇವನಿಗೇನು ಬಂತು' ಎಂದು ವಿಚಾರ ಮಾಡತೊಡಗಿದರು.

ಒಂದು ದಿನ 'ನಾಟ್ಯಶಾಲೆ' ಗೆ ಹೋಗಲು ವಿಜಯ ನಿರ್ಧರಿಸಿದ.

'ರಿಹರ್ಸಲ್' ನಡೆದಿತ್ತು. ಕಲ್ಪನೆಯೊಬ್ಬಳೇ ನರ್ತಿಸುತ್ತಿದ್ದಳು. ಉಳಿದವರು ಕುಳಿತು ನೋಡುತ್ತಿದ್ದರು. ವಿಜಯ ಬಂದ ಕೂಡಲೆ ಎಲ್ಲರೂ ಅವನನ್ನು ಮುತ್ತಿಕೊಂಡು ಅವನ ಯೋಗಕ್ಷೇಮ ವಿಚಾರಿಸಿದರು. ರಿಹರ್ಸಲ್ ಮುಗಿದ ಕೂಡಲೆ ವಿಜಯ ಮೆಲ್ಲನೆ ನುಸುಳಿಕೊಳ್ಳಲೆತ್ನಿಸಿದ. ಕಲ್ಪನಾ ಅವನ ಬಳಿಗೆ ಬಂದು

"ಆರೋಗ್ಯವೇ ಕ್ಯಾಪ್ಟನ್" ಎಂದಳು.

ವಿಜಯ ಕಕ್ಕಾಬಿಕ್ಕಿಯಾದ. ಕಲ್ಪನಾ ಮಾತನಾಡಿಸುತ್ತಿರುವಳೇ – ನಿಜವಾಗಿಯೂ ತನ್ನೆದುರಿಗಿದ್ದ ವ್ಯಕ್ತಿ ಕಲ್ಪನೆಯೇ ಎಂದು ವಿಚಾರಮಾಡುತ್ತ

" ಆರೋಗ್ಯವಾಗಿದ್ದೇನೆ. "

" ನಾಟ್ಯಶಾಲೆಗೆ ಈಚೆಗೆ ನೀವು ಬರಲಿಲ್ಲ. "

" ಹೌದು. ನಾಲ್ಕೈದು ದಿನಗಳಿಂದ ಇತ್ತ ಬರಲಾಗಲಿಲ್ಲ. "

" ಮಮ್ಮಿ ಡ್ಯಾಡಿ ಇಬ್ಬರೂ ನಿಮ್ಮನ್ನು ಕೇಳಿದರು. "

" ಅವರ ಕರುಣೆ........?

" ಡ್ಯಾಡಿ ಕಲಾಸಂಗ್ರಹ ( Art Collection ) ನೋಡುವುದಕ್ಕೆ ಬರುವುದಿಲ್ಲವೇ ? "

" ಅವಶ್ಯವಾಗಿ ಬರುತ್ತೇನೆ. "

" ಇವತ್ತು ಸಂಜೆಗೇ ಬನ್ನಿ. ತಮ್ಮ ಕಲಾಸಂಗ್ರಹವನ್ನು ಯಾರಾದರೂ ಮೆಚ್ಚಿಕೊಂಡರೆ ಡ್ಯಾಡಿ ತುಂಬ ಸಂತೋಷಪಟ್ಟುಕೊಳ್ಳುತ್ತಾರೆ. ಬರುತ್ತೀರಾ ? "

" ಖಂಡಿತ ಬರುತ್ತೇನೆ. " ಎಂದು ವಾಗ್ದಾನ ಮಾಡಿದ.

' ಮಮ್ಮಿ – ಡ್ಯಾಡಿ ಕೇಳಿದರು – ಡ್ಯಾಡಿ ತುಂಬ ಸಂತೋಷಪಟ್ಟುಕೊಳ್ಳುತ್ತಾರೆ ' ಎಂದು ಹೇಳಿದಳು. ಅವರ ಮನೆಗೆ ನಾನು ಹೋಗುವುದು ಕಲ್ಪನೆಗೆ ಬೇಕಿಲ್ಲವೇ – ನಾನು ಹೋದರೆ ಅವಳಿಗೆ ಸಂತೋಷವಾಗುವುದಿಲ್ಲವೇ ? ಎಂದು ವಿಜಯನ ಮನಸ್ಸು ವಿಚಾರ ಮಾಡಿತು.

ಎಷ್ಟುಹೊತ್ತಿಗೆ ಸಂಜೆ ಬಂದೀತೆಂದು ವಿಜಯ ಕಾಯುತ್ತಿದ್ದ. ಸಂಜೆಯ ವೇಳೆಗೆ ಆಡಂಬರವಿಲ್ಲದಂತೆ ಅಲಂಕಾರ ಮಾಡಿಕೊಂಡು ಡಾಕ್ಟರವರ ಮನೆಗೆ ಹೋದ.

ಡಾಕ್ಟರು ವಿಜಯನಿಗೆ ಸ್ವಾಗತ ಬಯಸಿದರು. ವಿಜಯನ ಧ್ವನಿ ಕೇಳಿ ಕಲ್ಪನೆಯೂ ರೂಮಿನಿಂದ ಹೊರಬಿದ್ದಳು. ವಿಜಯ ಸುತ್ತ ನೋಡಿ

" ತಾಯಿಯವರೆಲ್ಲಿ " ಎಂದು ಕೇಳಿದ.

" ಬರುತ್ತಾರೆ " ಎಂದು ಕಲ್ಪನಾ ಉತ್ತರಿಸಿದಳು.

ಡಾಕ್ಟರು ವಿಜಯನ ಕಡೆ ತಿರುಗಿ

" ಏಕೆ ಕ್ಯಾಪ್ಟನ್ – ನಮ್ಮನ್ನು ಮರೆತು ಬಿಟ್ಟಿರಿ. "

" ಏನೋ ಕೆಲಸ ಬಿತ್ತು, ಬರಲಾಗಲಿಲ್ಲ - ಕ್ಷಮಿಸಬೇಕು. "

" ನನ್ನ ಕಲಾಸಂಗ್ರಹ ನೋಡಲು ಬಯಸಿದಿರಿ........ "

" ಹೌದು - ಅದನ್ನು ನೋಡಲು ನಾನು ಬಹಳ ಕುತೂಹಲಿಯಾಗಿದ್ದೇನೆ. "

ಡಾಕ್ಟರು ಮಗಳ ಕಡೆಗೆ ತಿರುಗಿ

" ನನ್ನ ಮೇಜಿನ ಮೇಲೆ ಕೆಲವು ಆಲ್ಬಮ್ ( Album ) ಗಳಿವೆ. ತೆಗೆದುಕೊಂಡು ಬಾ ಡಾರ್ಲಿಂಗ್ " ಎಂದರು.

ಕಲ್ಪನಾ ತಂದುಕೊಟ್ಟ ಚಿತ್ರ ಸಂಗ್ರಹಗಳನ್ನು ಪಕ್ಕದಲ್ಲಿದ್ದ ಮೇಜಿನ ಮೇಲಿಟ್ಟು, ಅವುಗಳಲ್ಲಿ ಒಂದನ್ನಾಯ್ದುಕೊಂಡರು.

ಕಲ್ಯಾಣಮ್ಮನವರು ಹೊರಗೆ ಬಂದು, ಗಂಡನ ಕೈಯಲ್ಲಿ ಚಿತ್ರಸಂಗ್ರಹವಿದ್ದುದನ್ನು ನೋಡಿ

" ಸ್ವಲ್ಪ ತಡೆಯಿರಿ. ಕಾಫಿ ಬರುತ್ತದೆ. ಕಾಫಿ ಮುಗಿಸಿದ ಮೇಲೆ ಚಿತ್ರಸಂಗ್ರಹ ತೋರಿಸುವಿರಂತೆ " ಎಂದರು.

ಡಾಕ್ಟರು ಆಲ್ಬಮ್ ಮುಚ್ಚುತ್ತಾ ' ಆಜ್ಞೆ ' ಎಂದರು.

ವಿಜಯ ಬರುತ್ತಾನೆಂದೇ ಕಲ್ಯಾಣಮ್ಮನವರು ಕೆಲವು ತಿಂಡಿ ತಿನಿಸುಗಳನ್ನು ಮಾಡಿಸಿದ್ದರು. ವಿಜಯನನ್ನು ಉಪಚರಿಸಿ ಅವನು ಹೊಟ್ಟೆತುಂಬ ತಿನ್ನುವಂತೆ ಮಾಡಿದರು. ಕಾಫಿ ಮುಗಿಸಿದ ಮೇಲೆ ಡಾಕ್ಟರು ತಮ್ಮ ಸಂಗ್ರಹದಲ್ಲಿದ್ದ ಚಿತ್ರಗಳು ಒಂದೊಂದನ್ನೇ ತೆಗೆದು, ವಿಜಯನ ಕೈಯಲ್ಲಿಡುತ್ತ ಬಂದರು.

' ಇದು ಮೊಘಲರ ಕಾಲದ ಚಿತ್ರ – ಸುಮಾರು ಹದಿನಾರನೆಯ ಶತಮಾನವಿರಬಹುದು. ರಾಜಕುಮಾರಿ ಮತ್ತು ಅವಳ ಸಂಗಡಿಗರ ಅಂತಃಪುರದ ಒಂದು ನೋಟ. '

' ಇದೂ ಮೊಘಲರ ಕಾಲದ್ದೇ. ಸುಮಾರು ಹದಿನೆಂಟನೆಯ ಶತಮಾನಕ್ಕೆ ಸೇರಿದ್ದು. ಈ ವೇಳೆಗೆ ಪರಕೀಯರ ಪ್ರಭಾವ ನಮ್ಮ ಚಿತ್ರಕಲೆಯ ಮೇಲೂ ಆದದ್ದನ್ನು ನೀವು ನೋಡಬಹುದು. ನವಾಬ ಲೋಡು ದಿಂಬು ಬಿಟ್ಟು ಕುರ್ಚಿಯ ಮೇಲೆ ಕುಳಿತಿದ್ದಾನೆ. ಅವನ ಕೈಯಲ್ಲಿ ಫ್ರೆಂಚರ 'ವೈನ್ ಗ್ಲಾಸ್ ' ( Wine glass ) ಇದೆ. '

' ಇದು ಕಾಂಗ್ರಾ ಅಥವಾ ಪಹಡಿ ಸಂಪ್ರದಾಯದ್ದು. ಅಟ್ಟಿಸಿಕೊಂಡು ಬಂದ ಗೋಪಿಯರ ಕಾಟ ತಪ್ಪಿಸಿಕೊಳ್ಳಲು ಕೃಷ್ಣ ತಾಯಿಯ ಹಿಂದೆ ಅಡಗಿ

ಕೊಳ್ಳುತ್ತಿದ್ದಾನೆ. '

' ಇದೂ ರಜಪೂತ ಸಂಪ್ರದಾಯದ್ದೆ. ಆದರೆ ಇದರಲ್ಲಿ ಪಟ್ಟಣದ ನಾಗರಿಕತೆ ಕಂಡುಬರುತ್ತದೆ. '

ನಲವತ್ತು ಐವತ್ತು ಚಿತ್ರಗಳು ಕೈಯಿಂದ ಕೈಗೆ ಹಾದುಹೋದವು. ವಿಜಯ ವಿಸ್ಮಯಗೊಂಡು ಚಿತ್ರಗಳನ್ನು ನೋಡುತ್ತ ಕುಳಿತಿದ್ದ. ಗಂಟೆ ಎಂಟರ ಸಮೀಪಕ್ಕೆ ಬಂದಿತ್ತು.

ಡಾಕ್ಟರವರ ಅಪೂರ್ವ ಸಂಗ್ರಹ ನೋಡಿ ವಿಜಯನ ಕಣ್ಣು ಕೋರೈಸಿತ್ತು.

" ತಮ್ಮದು ಅಪರೂಪ ಸಂಗ್ರಹ ಸರ್. ಸಂಗ್ರಹವನ್ನಾದರೂ ಯಾರಾದರೂ ಮಾಡಬಹುದು. ಆದರೆ ಚಿತ್ರಗಳ ವಿವಿಧ ಸಂಪ್ರದಾಯಗಳ ಬಗ್ಗೆ ಎಷ್ಟು ತಿಳಿದುಕೊಂಡಿದ್ದೀರಿ ! ತಮ್ಮ ವೈದ್ಯಕೀಯ ವೃತ್ತಿಯ ಮಧ್ಯೆ ಇದಕ್ಕೆ ಬಿಡುವಾದುದಾದರೂ ಹೇಗೆ ? "

" ನೋಡಿ ಕ್ಯಾಪ್ಟನ್, ವೈದ್ಯನ ವೃತ್ತಿ ದುಃಖದ ವೃತ್ತಿ. ಬೆಳಿಗ್ಗೆಯಿಂದ ಸಂಜೆಯವರೆವಿಗೂ ನಾವು ರೋಗರುಜಿನ, ದುಃಖ, ನೋವು, ಸಾವುಗಳನ್ನೇ ನೋಡುತ್ತಿರುತ್ತೇವೆ. ಅವುಗಳನ್ನು ನೋಡಿ ನೋಡಿ ನಮ್ಮ ಮನಸ್ಸೂ ಕಲ್ಲಾಗುತ್ತ ಬರುತ್ತದೆ. ಕಾಲಕ್ರಮೇಣ ಈ ವೃತ್ತಿಗೆ ಅವಶ್ಯಕವಾದ ಕಾರುಣ್ಯವನ್ನೇ ಕಳೆದುಕೊಂಡು ನಾವು ಯಂತ್ರಗಳಾಗುತ್ತೇವೆ. ನಾವು – ಡಾಕ್ಟರುಗಳು – ನಮ್ಮ ಮಾನವತೆಯನ್ನು ಉಳಿಸಿಕೊಳ್ಳಬೇಕಾದರೆ – ದೇವರು ಮೆಚ್ಚುವಂತೆ ನಮ್ಮ ಕೆಲಸ ನಿರ್ವಹಿಸಬೇಕಾದರೆ- ನಮ್ಮ ಮನಸ್ಸಿಗೂ ಚಿಕಿತ್ಸೆ ಮಾಡಿಕೊಳ್ಳುತ್ತಾ ಹೋಗಬೇಕು, ಈ ಚಿಕಿತ್ಸೆ ನಮಗೆ ಮಾಡಬಲ್ಲವು ಲಲಿತ ಕಲೆಗಳು. ಸಂಗೀತ, ಸಾಹಿತ್ಯ, ಚಿತ್ರಕಲೆ, ಶಿಲ್ಪ, ನೃತ್ಯಗಳಲ್ಲಿ ಎಲ್ಲರಿಗಿಂತ ಡಾಕ್ಟರುಗಳು ವಿಶ್ವಾಸವಿಡುವುದು ಅಗತ್ಯವೆಂದು ನನ್ನ ಅಭಿಪ್ರಾಯ. ನನ್ನ ಶಕ್ತ್ಯಾನುಸಾರ ನಾನೀ ಪ್ರಯತ್ನ ಮಾಡಿ ಸಫಲನಾಗಿದ್ದೇನೆ. "

ವಿಜಯನಿಗೆ ಡಾಕ್ಟರ ಬಗ್ಗೆ ಗೌರವ ತುಂಬಿತು. ಮಾತರಿಯದ ಮೂಕನಂತೆ ಅವನು ಕುಳಿತುದನ್ನು ಕಂಡು ಕಲ್ಪನಾ

" ದಂತದ ಅಣುಚಿತ್ರಗಳನ್ನು ( Miniatures ) ತೋರಿಸುವುದಿಲ್ಲವೇ ಡ್ಯಾಡಿ ? "

ಎಂದು ಕೇಳಿದಳು.

" ಅವರಿಗೂ ಹೊತ್ತಾಯಿತಮ್ಮಾ. ಇನ್ನೊಂದು ದಿನ ತೋರಿಸುತ್ತೇನೆ. ಪುನಃ ಯಾವಾಗ ಬರುತ್ತೀರಿ ಕ್ಯಾಪ್ಟನ್. "

ವಿಜಯ ಅನುಮಾನಿಸತೊಡಗಿದ. ಕಲ್ಯಾಣಮ್ಮನವರು

" ಭಾನುವಾರ ಕಲ್ಪನೆಯ ಹುಟ್ಟಿದ ಹಬ್ಬ ಎನ್ನುವುದು ಮರೆತಿರೇನು ?"

ಎಂದರು. ಡಾಕ್ಟರು

" ವಯಸ್ಸಾಯಿತು. ಜ್ಞಾಪಕಶಕ್ತಿ ಕಡಿಮೆಯಾಗುತ್ತಿದೆ. ಭಾನುವಾರ ಇಲ್ಲಿಗೇ ಊಟಕ್ಕೆ ಬಂದು ಬಿಡಿ ಕ್ಯಾಪ್ಟನ್. ನೀವು ನನ್ನ ಮಗನ ಭೆಟ್ಟಿ ಯಾಗೇ ಇಲ್ಲ. ನೀವು ಬರುವ ಹೊತ್ತಿಗೆ ಸರಿಯಾಗಿ ಅವನಿಗೆ ಆಸ್ಪತ್ರೆ ಕೆಲಸ. ಭಾನುವಾರ ಅವನೂ ಪುರಸತ್ತಾಗಿರುತ್ತಾನೆ. "

" ಬರುವಿರಷ್ಟೆ " ಎಂದು ಕಲ್ಯಾಣಮ್ಮನವರು ಕೇಳಿದರು.

ವಿಜಯ ಕತ್ತೆತ್ತದೆಯೇ ಕಲ್ಪನೆಯ ಕಡೆ ದೃಷ್ಟಿ ಚೆಲ್ಲಿದ. ಅವನ ಕಣ್ಣು ಗಳಲ್ಲಿಯೂ ಅದೇ ಪ್ರಶ್ನೆ ನಿಂತಿತ್ತು.

" ಖಂಡಿತವಾಗಿ ಬರುತ್ತೇನಮ್ಮ. ಇಷ್ಟು ವಿಶ್ವಾಸದಿಂದ ನನ್ನನ್ನು ಕರೆ ಯುವವರು ಯಾರು " ಎಂದು ಹೇಳಿದ.

೯

ಭಾನುವಾರಕ್ಕೆ ಇನ್ನೂ ಮೂರು ದಿನ ಉಳಿದಿತ್ತು – ಮೂರು ದಿನ – ಮೂರು ಯುಗಗಳಂತಿರುವ ಈ ಮೂರು ದಿನಗಳನ್ನು ಕಳೆಯುವುದು ಹೇಗೆ?

ಮೂರೇ ದಿನಗಳು – ಮೂರೇ ದಿನಗಳಲ್ಲಿ ಭಾನುವಾರ ಓಡುತ್ತ ಬರು ತ್ತದೆ.

ಕಲ್ಪನೆಗೆ ಏನಾದರೂ 'ಉಡುಗೊರೆ' ಕೊಡಬೇಕು – ಉಡುಗೊರೆ ಕೊಡುವುದರಲ್ಲಿ ತಪ್ಪೇನಿದೆ ? ತಾನು ಕೇವಲ ಹೊರಗಿನವನು – ಕಲ್ಪನಾ ಮನೆಯ ಹೆಣ್ಣು ಮಗಳು. ಉಡುಗೊರೆ ಕೊಟ್ಟರೆ ಅಪಾರ್ಥಕ್ಕೆ ಅವಕಾಶ ವಾಗಬಹುದೇ ?

ತಾನು ಹೊರಗಿನವನೆಂದು ಡಾಕ್ಟರ ಮನೆಯವರು ಭಾವಿಸಿಲ್ಲವಲ್ಲ. ಹಾಗವರು ಭಾವಿಸಿದ್ದರೆ ತನ್ನನ್ನು ಊಟಕ್ಕೇಕೆ ಕರೆಯುತ್ತಿದ್ದರು. ಅವರ ಮನೆಯ ಕಡೆ ಸುಳಿಯದಿದ್ದ ತನ್ನನ್ನು 'ಚಿತ್ರ ಸಂಗ್ರಹ' ನೋಡಲಿಕ್ಕೆ ಬಾರೆಂದು ಏತಕ್ಕೆ ಕರೆಯುತ್ತಿದ್ದರು.

'ಉಡುಗೊರೆ' ಕೊಡುವುದರಲ್ಲಿ ಯಾವ ದೋಷವೂ ಇಲ್ಲ – ಡಾಕ್ಟರೂ ಅವರ ಮನೆಯವರೂ ಸುಸಂಸ್ಕೃತರು – ಅವರು ತನ್ನ ಉದ್ದೇಶವನ್ನು ತಪ್ಪು ತಿಳಿದುಕೊಳ್ಳುವುದಿಲ್ಲ ಎಂದು ವಿಜಯ ನಿರ್ಧರಿಸಿದ.

'ಏನು ಉಡುಗೊರೆ ಕೊಡುವುದು' ಎನ್ನುವ ಪ್ರಶ್ನೆ ತಲೆ ಹಾಕಿತು. ಕಲ್ಪನೆಗೆ ದೇವರು ಯಾವುದಕ್ಕೂ ಕಡಿಮೆ ಮಾಡಿರಲಿಲ್ಲ. ತಂದೆ ಚೆನ್ನಾಗಿ ಗಳಿಸಿದ್ದಾರೆ – ಅಣ್ಣ ಗಳಿಸುತ್ತಿದ್ದಾರೆ. ತಂದೆ, ಅಣ್ಣ ಕಲ್ಪನೆಯ ಸಕಲ ಇಷ್ಟಾರ್ಥವನ್ನು ಪೂರೈಸುತ್ತಿದ್ದರು.

ಕಲ್ಪನೆಗೆ ಕೊಡುವ ಉಡುಗೊರೆಯನ್ನು ನಿರ್ಧರಿಸಲಾರದೆ ವಿಜಯ ಚಿಂತಾಕ್ರಾಂತನಾದ. ಈ ವಿಷಯದಲ್ಲಿ ತಜ್ಞರಾದ ಸೋಹನ್‌ಸಿಂಗ್, ನಿಸ್ಸಾರ್ ಅವರ ಸಲಹೆ ಕೇಳಬಹುದಾಗಿತ್ತು. ಕಲ್ಪನೆಯ ಬಗ್ಗೆ, ತಾನು ಅವರ ಮನೆಗೆ ಹೋಗುವುದರ ಬಗ್ಗೆ ಗೆಳೆಯರು ಹಗುರವಾಗಿ ಮಾತನಾಡುವರೆಂಬ ಭಯ.

ಶನಿವಾರ ಸಂಜೆಯ ವರೆವಿಗೂ ವಿಜಯ ಯಾವ ನಿರ್ಧಾರಕ್ಕೂ ಬರಲಾಗಲಿಲ್ಲ. ಸಂಜೆ ನಾಲ್ಕಾರು ಅಂಗಡಿಗಳನ್ನು ಸುತ್ತಿ ಏನಾದರೂ ಕುತೂಹಲ ಕಾರಕವಾದ ಸಾಮಾನನ್ನು ಕೊಂಡು ತರಲು ನಿಶ್ಚಯಿಸಿದ.

ಕಮರ್ಷಿಯಲ್ ಸ್ಟ್ರೀಟಿನಲ್ಲಿದ್ದ 'ಬರ್ಮಾ ಕ್ಯೂರಿಯೊ ಎಂಪೋರಿಯಂ' – 'ಕಾಶ್ಮೀರ್ ಷಾಪ್ – 'ಗ್ರೀಸ್ ಷಾಪ್' – 'ಪರ್ಶಿಯನ್ ವೇರ್‌ಹೌಸ್' ಗಳನ್ನೂ ಶೋಧಿಸಿದ್ದಾಯಿತು. ಯಾವ ವಸ್ತುವೂ ಮನಸ್ಸಿಗೆ ಬರಲಿಲ್ಲ. ಕೊನೆಗೆ ಸಾತ್ ಪೇರೆಡ್ ಬೀದಿಯಲ್ಲಿದ್ದ ಚೆಲ್ಲಾರಾಮನ ಸಿಲ್ಕ್ ಅಂಗಡಿಗೆ ಬಂದ. ಬಗೆಬಗೆಯ ಅಮೌಲ್ಯ ಸಾಮಾನುಗಳು ಅಂಗಡಿಯಲ್ಲಿ ಪ್ರದರ್ಶಿತವಾಗಿದ್ದವು. ಸೀರೆಗಳು - ಚೋಲಿಗಳು - ಕುಪ್ಪಸದ ಕಣಗಳು - ಒಳಕುಸುರಿ ಮಾಡಿದ ಲೋಹದ ಸಾಮಾನುಗಳು - ಹ್ಯಾಂಡ್ ಬ್ಯಾಗುಗಳು - ವ್ಯಾನಿಟಿ ಕೇಸುಗಳು - ಶಾಲುಗಳು. ಗ್ಲಾಸ್ ಕೇಸಿನಲ್ಲಿ ಹರಡಿಟ್ಟಿದ್ದ ಒಂದು ಸೀರೆ

ವಿಜಯನ ಕಣ್ಣು ಕೋರೈಸಿತು. ನೋಡಿದವರ ಕಣ್ಣು ಕೋರೈಸಲೆಂದೇ ಅಂಗಡಿಯವರು ನಿಯೋಸೈಸ್ ದೀಪಾಲಂಕಾರ ಮಾಡಿ ಸೀರೆಯನ್ನು ಕಾಜಿನ ಬೀರುವಿನಲ್ಲಿ ಪ್ರದರ್ಶಿಸಿದ್ದರು. ಬಿಸ್ಕತ್ತಿನ ಬಣ್ಣ - ಅಚ್ಚ ಜರತಾರಿಯ ಆರಂ ಗುಲ ಅಂಚು - ಎರಡೂವರೆ ಅಡಿಯ ಸೆರಗು. ಅಂಚಿಗೆ, ಸೆರಗಿಗೆ ಕಲಾ ಪೂರ್ಣವಾದ ಅಜಂತೆಯ ರೇಖಾ ಚಿತ್ರಗಳನ್ನು ಅಳವಡಿಸಿಕೊಳ್ಳಲಾಗಿತ್ತು. ಒಡಲಿನ ತುಂಬ ಮೂರು ಮೊಗ್ಗೆ ಕೂಡಿಸಿದ ಹೂವುಗಳು.

ಕಲಾವಿದೆಯಾದ ಕಲ್ಪನೆಗೆ ಒಪ್ಪುವ ಸೀರೆಯಾಗಿತ್ತು. 'ನಾಟ್ಯ ಪ್ರದರ್ಶನ' ಕ್ಕೆ ಅವಳು ಉಪಯೋಗಿಸಿಕೊಳ್ಳುವುದಕ್ಕೂ ಸೀರೆ ಅನುಕೂಲ ವಾಗಿತ್ತು, ಅದನ್ನೇ ಕೊಳ್ಳುವುದೆಂದು ಅರ್ಧ ಮನಸ್ಸು ಮಾಡಿ ಸೀರೆಯ ಬೆಲೆ ಕೇಳಿದ. 'ನಾಲ್ಕು ನೂರ ಎಂಭತ್ತು ಸರ್. ಮೊದಲು ಇದರ ಬೆಲೆ ಆರು ನೂರಿತ್ತು. ಶೇಕಡ ಇಪ್ಪತ್ತೈದರಷ್ಟು ಬೆಲೆ ಇಳಿಸಿದ್ದೇವೆ' ಎಂದು ಅಂಗಡಿಯವನು ಹೇಳಿದ. ಕಲ್ಪನೆಗಾಗಿ ನಾಲ್ಕನೂರು ಎಂಭತ್ತು ವ್ಯಯ ಮಾಡುವುದು ವಿಜಯನಿಗೆ ದೊಡ್ಡ ವಿಷಯವೆನಿಸಲಿಲ್ಲ.

"ಆದರೆ – ಇಷ್ಟು ಭಾರಿ 'ಉಡುಗೊರೆ' ಕೊಟ್ಟರೆ ಖಂಡಿತವಾಗಿ ಅಪಾರ್ಥಕ್ಕೆ ಅವಕಾಶವಾಗುತ್ತದೆ. ಕಲ್ಪನೆಯ ಮನಸ್ಸೂ ನನಗೆ ಗೊತ್ತಿಲ್ಲ. ಸ್ವತಂತ್ರ ವಾತಾವರಣದಲ್ಲಿ, ತಂದೆ ತಾಯಿಯ ಪ್ರೀತಿಯ ಮಗಳಾಗಿ ಬೆಳೆದ ಹುಡುಗಿ. ಅವಳ ನಡೆನುಡಿಯಲ್ಲಿ ಸ್ವಾತಂತ್ರ್ಯವಿದೆಯೇ ವಿನಾ ಸ್ವಚ್ಛಂದತೆ ಯಿಲ್ಲ. ಭಾರಿ ಉಡುಗೊರೆ ಕೊಟ್ಟಲ್ಲಿ ನನ್ನ ಉದ್ದೇಶ ಸ್ಪಷ್ಟವಾಗುತ್ತದೆ. ಇದೇ ಕಾರಣವಾಗಿ ಅವರು ನನ್ನನ್ನು ದೂರ ಇಟ್ಟರೂ ಇಡಬಹುದು."

ಎಂಬ ಸಂಶಯ ವಿಜಯನನ್ನು ಬಾಧಿಸತೊಡಗಿತು.

ಉಡುಗೊರೆಯ ಪ್ರಶ್ನೆ ಇತ್ಯರ್ಥವಾಗದೆ ವಿಜಯನಿಗೆ ಬೇಸರ ಬಂದಿತ್ತು. ಅಂಗಡಿಯಲ್ಲಿದ್ದ ಗಾಜಿನ ಬೀರುಗಳನ್ನು ನೋಡುತ್ತಿದ್ದಂತೆ ಒಂದು ಕಪಾಟು ಅವನ ಮನಸ್ಸನ್ನಾಕರ್ಷಿಸಿತು.

"ಇದನ್ನು ಸ್ವಲ್ಪ ತೋರಿಸಿ" ಎಂದು ಕೇಳಿದ.

'ಇವನು ವ್ಯಾಪಾರ ಮಾಡುವುದಕ್ಕೆ ಬಂದಿಲ್ಲ. ವೃಥಾ ಸಾಮಾನು ಗಳನ್ನು ನೋಡಿ ನೋಡಿ ತನ್ನ ಚಾಪಲ್ಯ ತೀರಿಸಿಕೊಳ್ಳುತ್ತಿದ್ದಾನೆ.' ಎಂಬ ಭಾವನೆ ಅಂಗಡಿಯವನ ಮುಖದಲ್ಲಿ ಒಡೆದುಕಾಣುತ್ತಿತ್ತು. ವಿಜಯನಿಗೆ

ಇಲ್ಲವೆನ್ನಲು ಧೈರ್ಯವಿಲ್ಲ. ವಿಜಯನ ಖಾಕಿ ದಿರ್ಸು, ತೋಳಿನ ಮೇಲಿದ್ದ ಕ್ಯಾಪ್ಟನ್ ಸ್ಥಾನದ ಸಂಕೇತ ಅಂಗಡಿಯವನನ್ನು ಅಧೀರನನ್ನಾಗಿ ಮಾಡಿದ್ದವು.

ಕಪಾಟಿನ ಬೀಗ ತೆಗೆದು ಅದರಲ್ಲಿದ್ದ 'ಹ್ಯಾಂಡ್‌ಬ್ಯಾಗ್' ಗಳನ್ನು ವಿಜಯನಿಗೆ ತೋರಿಸುತ್ತ

" ಇವು ಶಾಂತಿನಿಕೇತನದಲ್ಲಿ ಮಾಡಿದವು ಸರ್. ವಿಲಾಯತಿಗೂ ತುಂಬ ಹೋಗುತ್ತಿವೆ – ಈಗಿನ ಫ್ಯಾಷನೇಬಲ್ ಲೇಡೀಸ್ ಎಲ್ಲಾ ಇದನ್ನೇ ಬಹಳ ಮೆಚ್ಚಿಕೊಳ್ಳುತ್ತಾರೆ " ಎಂದು ಹೇಳಿದ.

ಹ್ಯಾಂಡ್ ಬ್ಯಾಗುಗಳಲ್ಲಿ ಆರಿಸಿ ಒಂದನ್ನು ಕೈಗೆತ್ತಿಕೊಂಡು ವಿಜಯ ಪರಾಮರ್ಶಿಸಿದ. ಒಂದು ಕಡೆ ಪುಲಿಕೇಶಿಯ ರಾಜಸಭೆಗೆ ಇರಾಣದ ರಾಯಭಾರಿಗಳು ಬಂದು ಕಾಣಿಕೆ ಅರ್ಪಿಸುವ ಚಿತ್ರ – ಇನ್ನೊಂದು ಕಡೆ ಭಗವಾನ್ ಬುದ್ಧ ತನ್ನ ಶಿಷ್ಯ-ಶಿಷ್ಯೆಯರಿಗೆ ಉಪದೇಶ ಮಾಡುತ್ತಿರುವ ಚಿತ್ರ. ಎರಡೂ ಅಜಂತೆಯ ಸಂಪ್ರದಾಯದಿಂದ ಎತ್ತಿಕೊಂಡುದಾಗಿದ್ದವು. ಒಂದರಲ್ಲಿ ಲೌಕಿಕ ಚಕ್ರವರ್ತಿಯ ದರ್ಬಾರು–ಇನ್ನೊಂದರಲ್ಲಿ ಆಧ್ಯಾತ್ಮ ಚಕ್ರವರ್ತಿಯ ದರ್ಬಾರು. ಬ್ಯಾಗಿನ ಉಳಿದ ಎರಡು ಕಡೆ ಎರಡು ನೃತ್ಯ ಭಂಗಿಗಳು.

ವಿಜಯನಿಗಿನ್ನು ಅನುಮಾನ ಉಳಿಯಲಿಲ್ಲ. ಬ್ಯಾಗಿನ ಖರೀದಿ ಅರವತ್ತುನಾಲ್ಕು ರೂಪಾಯಿ ಕೊಟ್ಟು ಅದನ್ನು ಕಟ್ಟಿಸಿ ಕೈಗೆ ತೆಗೆದುಕೊಂಡ.

ವಿಜಯ ಮನಸ್ಸಿನಿಂದ ದೊಡ್ಡ ಭಾರ ಇಳುಹಿದಂತಾಗಿತ್ತು.

ಕಲ್ಪನೆಯ ಹುಟ್ಟಿದ ಹಬ್ಬಕ್ಕೆ ವಿಜಯನನ್ನುಳಿದು ಬೇರೆ ಯಾರಿಗೂ ಆಮಂತ್ರಣ ಹೋಗಿರಲಿಲ್ಲ. ಕೀರ್ತಿಯನ್ನೂ ಅವನ ಮಂಡಳಿಯ ಕೆಲವು ಕಲಾವಿದರನ್ನೂ ಸ್ವಾಗತಿಸಬೇಕೆಂದು ಡಾಕ್ಟರ ಉದ್ದೇಶವಾಗಿತ್ತು. ಕಲ್ಪನೆಯೇ ಅದಕ್ಕೆ ಅಡ್ಡಿ ಬಂದಳು.

ವಿಜಯನನ್ನು ಡಾಕ್ಟರೂ, ಶ್ರೀಧರ ಇಬ್ಬರೂ ಸ್ವಾಗತಿಸಿದರು. ವಿಜಯ ತನ್ನ ಕೈಯಲ್ಲಿದ್ದ ಪ್ಯಾಕೆಟ್ಟನ್ನು ಡಾಕ್ಟರ ಕೈಗೆ ಕೊಡುತ್ತಾ

" ಮಿಸ್. ಕಲ್ಪನಾದೇವಿಗೆ ಸಣ್ಣ ಉಡುಗೊರೆಯನ್ನು ತಂದಿದ್ದೇನೆ. ದಯೆಯಿಟ್ಟು ಅವರಿಗೆ ಕೊಟ್ಟುಬಿಡಿ. "

" ಅವಳಿಗೆ ನೀವೇ ಕೊಡಿ "

ಎಂದು ಡಾಕ್ಟರು ಸೂಚಿಸಿದರು.

ಕಲ್ಪನಾ ಅಂದೇ ತೈಲಾಭ್ಯಂಜನ ಮಾಡಿ, ತನ್ನ ವಿಶಾಲವಾದ ಕೇಶ ರಾಶಿಗೆ ಎಣ್ಣೆಗಂಟು ಹಾಕಿಕೊಂಡು, ಹೊಸ ಜಾರ್ಜೆಟ್ ಧರಿಸಿ ಬಂದಳು.

ವಿಜಯ ಎದ್ದು ನಿಂತು

" ವಿಷ್ ಯು ಎ ಹ್ಯಾಪಿ ಬರ್ತ್‌ಡೇ ( Wish you a happy birth-day ) "

ಎಂದು ಹೇಳಿ, ಕೈಯ್ಯಲ್ಲಿದ್ದ ಪ್ಯಾಕೆಟ್ಟನ್ನು ಅವಳ ಕೈಯಲ್ಲಿಟ್ಟ. ಅವಳು ಪ್ಯಾಕೆಟ್ ಒಡೆದು ನೋಡಿ ಸಂತೋಷಗೊಂಡು ತಂದೆಗೆ ತೋರಿಸುತ್ತ

" ಎಷ್ಟು ಚೆನ್ನಾಗಿದೆ ನೋಡಿ ಡ್ಯಾಡಿ " ಎಂದಳು.

ಡಾಕ್ಟರು ಬ್ಯಾಗನ್ನು ತೆಗೆದುಕೊಂಡು ನೋಡಿ ಮೆಚ್ಚುಗೆ ಸೂಚಿಸುತ್ತ

" ಎಲ್ಲಾ ಅಜಂತೆಯ ಚಿತ್ರಗಳಿವೆ. ತುಂಬ ಚೆನ್ನಾಗಿದೆ ಡಾರ್ಲಿಂಗ್ "

ಎಂದು ಮಗನ ಕೈಗೆ ಬ್ಯಾಗ್ ಕೊಟ್ಟರು.

ಕಲ್ಪನಾ ವಿಜಯನ ಕಡೆ ತಿರುಗಿ

" ಥ್ಯಾಂಕ್ ಯು ಫಾರ್ ದಿ ಬ್ಯೂಟಿಫುಲ್ ಗಿಫ್ಟ್ " ಎಂದಳು.

ವಿಜಯನಿಗೆ ಅದಕ್ಕಿಂತ ಹೆಚ್ಚಿನ ಸನ್ಮಾನ ಬೇಕಾಗಿರಲಿಲ್ಲ.

ಸಂಜೆಯವರೆವಿಗೂ ವಿಜಯ ಡಾಕ್ಟರ ಮನೆಯಲ್ಲಿಯೇ ಕಳೆದ. ಶ್ರೀಧರನ ಶಿಶುಸದೃಶ ಹೃದಯ ನೋಡಿ ' ತಂದೆಗೆ ತಕ್ಕ ಮಗ ' ಎಂದು ಕೊಂಡ. ಮಧ್ಯಾಹ್ನ ಸೊಗಸಾದ ಊಟವಾಯಿತು. ಡಾಕ್ಟರು ತಮ್ಮ ಸಂಗ್ರಹದಲ್ಲಿದ್ದ ಇತರ ವಸ್ತುಗಳನ್ನು ತೋರಿಸಿ ವಿವರಿಸಿದರು.

ವಿಜಯ ಹೊರಗಿನವನು ಎಂಬ ಭಾವನೆ ಸ್ವಲ್ಪವೂ ಬರದಂತೆ ಡಾಕ್ಟರೂ ಅವರ ಮನೆಯವರೂ ತೋರಿದ ಆತ್ಮೀಯತೆಯಿಂದ ವಿಜಯನ ಮನಸ್ಸು ಅರಳಿತು.

ಸಂಜೆ ವಿಜಯ ಹೊರಟು ನಿಂತಾಗ, ಮನೆಮಂದಿಯೆಲ್ಲಾ ಅವನನ್ನು ಬೀಳ್ಕೊಡಲು ಕಾರಿನ ಬಳಿ ಬಂದರು.

" ಆಗಾಗ್ಗೆ ಬರುತ್ತಿರಿ. ನಾವು ಕರೆಯುವುದಕ್ಕೆ ಕಾಯಬೇಡಿ. ಇದು ನಿಮ್ಮ ಮನೆಯೆಂದು ತಿಳಿದುಕೊಳ್ಳಿ. "

ಎಂದು ಡಾಕ್ಟರು ಹೇಳಿದರು.

ತನ್ನ ಮನಸ್ಸಿನಲ್ಲಾಗುತ್ತಿದ್ದ ಪರಿವರ್ತನೆ ಕಂಡು ವಿಜಯನಿಗೇ ಆಶ್ಚರ್ಯವಾಯಿತು.

'ಇದು ಯಾವ ಜನ್ಮದ ಋಣಾನುಬಂಧ. ನನಗೆ ತೀರ ಅಪರಿಚಿತರಾದ ಈ ಜನ ಏಕೆ ನನ್ನ ಬಗ್ಗೆ ಇಷ್ಟು ವಿಶ್ವಾಸ ತೋರಿಸುತ್ತಿದ್ದಾರೆ.' ಎಂದುಕೊಂಡ. ಅವನ ಹೃದಯ ಕೃತಜ್ಞತೆಯಿಂದ ತುಂಬಿತ್ತು. ಎಂದೂ ದೇವರನ್ನು ನೆನೆಯದಿದ್ದ ವಿಜಯ 'ಭಗವಂತ - ಈ ಸಂಸಾರ ಚೆನ್ನಾಗಿಡು - ಇವರನ್ನು ನಿತ್ಯ ಸುಖಿಗಳನ್ನಾಗಿ ಮಾಡು' ಎಂದು ಪ್ರಾರ್ಥಿಸಿದ.

## ೧೦

'ಕೀರ್ತಿ ಮತ್ತು ಮಂಡಳಿ'ಯ ನಾಲ್ಕು ಪ್ರದರ್ಶನಗಳಿಗೆ ಜೀವಾನಂದಂ ಮದರಾಸಿನಲ್ಲಿ ಕಾಂಟ್ರ್ಯಾಕ್ಟ ಕುದುರಿಸಿಕೊಂಡು ಬಂದಿದ್ದರು. ಈ ಬಾರಿ ಮದರಾಸಿನ ಮೇಲೆ ದಾಳಿಯನ್ನೇ ನಡಸಿ ಅಲ್ಲಿನ ಕಲಾಭಿಮಾನಿಗಳ ಮೆಚ್ಚುಗೆ ಪಡೆಯಬೇಕೆಂದು ಕೀರ್ತಿ ನಿರ್ಧರಿಸಿದ್ದ.

'ನಾಟ್ಯಶಾಲೆ.' ಯಲ್ಲಿ ಬಿರುಸಿನಿಂದ ಪ್ರ್ಯಾಕ್ಟೀಸ್ ಆರಂಭವಾಯಿತು. ಪ್ರತಿದಿನ ಆರು, ಎಂಟು ಗಂಟೆಗಳು ಕೀರ್ತಿ ಪ್ರ್ಯಾಕ್ಟೀಸ್ ಮಾಡಿಕೊಳ್ಳುತ್ತಿದ್ದ. ಉಳಿದವರೂ ಅಷ್ಟೇ ಮೈಮುರಿಯಬೇಕಾಗಿತ್ತು. ವಾದ್ಯಮೇಳವನ್ನೂ ಸುಧಾರಿಸಿ ಗೋಟುವಾದ್ಯ, ಸಿತಾರ್, ದಿಲ್‌ರುಬಾ, ಕೋಲ್ ವಾದ್ಯಗಳನ್ನೂ ಕೂಡಿಸಿದ.

ಕಲ್ಪನಾ ಪ್ರ್ಯಾಕ್ಟೀಸಿಗೆ ಆಗಾಗ್ಗೆ ಬರುತ್ತಿದ್ದಳು. ಆದರೆ ಪ್ರತಿನಿತ್ಯ ಬಂದು ನಾಲ್ಕಾರು ಗಂಟೆ ಪ್ರಾಕ್ಟೀಸ್ ತೆಗೆದುಕೊಳ್ಳಲು ಅವಳಿಗೆ ಸಾಧ್ಯವಾಗಿರಲಿಲ್ಲ. ಪರೀಕ್ಷೆ ಹತ್ತಿರಕ್ಕೆ ಬಂದಿತ್ತು.

ಕಲ್ಪನೆಯನ್ನು ಸಹ-ನಟಿ ಮಾಡಿಕೊಳ್ಳದಿದ್ದರೆ ಮದರಾಸಿನ ಪ್ರದರ್ಶನಗಳು ಆಭಾಸದ ಮೊಟ್ಟೆಗಳಾಗುತ್ತವೆಯೆಂಬುದನ್ನು ಜೀವಾನಂದಂ ಖಚಿತವಾಗಿ ತಿಳಿಸಿದ್ದರು. ಆ ವಿಷಯ ಪೂರ್ವಾನುಭವದಿಂದ ಕೀರ್ತಿಗೆ ಮನದಟ್ಟಾಗಿತ್ತು.

ಮಂಡಳಿಯಲ್ಲಿ ಕಲ್ಪನೆಗೆ ಇದ್ದಕಿದ್ದಂತೆ ಬಹು ಪ್ರಾಧಾನ್ಯ ಬಂದಿತು. ಕಲ್ಪನೆಯ ಲಯಜ್ಞಾನ, ಅಭಿನಯದ ಸೌಷ್ಠವತೆ, ಅಂಗಶುದ್ಧಿಗಳಿಂದ ಅವಳು ಮದರಾಸಿನ ಮೇಲೆ ಪ್ರಭಾವ ಬೀರುತ್ತಾಳೆಂದು ಎಲ್ಲರೂ ದೃಢವಾಗಿ ನಂಬಿದರು.

ಸ್ವಲ್ಪಕಾಲ ದೂರ ಸರಿದಿದ್ದ ಆನಂದರಾಯರೂ ಬಿಡುವುಮಾಡಿಕೊಂಡು ಬರಲಾರಂಭಿಸಿದರು. ಕಲ್ಪನೆಯ ' ರಿಹರ್ಸಲ್ ' ನೋಡುವುದೇ ಅವರಿಗೊಂದು ಉದ್ಯಮವಾಯಿತು. ಆಗಾಗ್ಗೆ ಕಲ್ಪನೆಯನ್ನು ಮಾತನಾಡಿಸಿ ಎರಡು ಮೆಚ್ಚುಗೆಯ ಮಾತು ಆಡದಿದ್ದರೆ ರಾಯರಿಗೆ ತೃಪ್ತಿಯಾಗುತ್ತಿರಲಿಲ್ಲ.

" ನೀವು ಹೇಳುವುದು ಕೇಳಿದರೆ ನಾನು ಪಾವಲೋವ, ಐಸಡೋರಾ, ನಿಜನ್ಸ್ಕಿ ಮೊದಲಾದವರಿಗಿಂತಲೂ ಶ್ರೇಷ್ಠಳೆಂದು ತಿಳಿಯಬೇಕಾಗುತ್ತದೆ. ನನ್ನನ್ನು ಇಷ್ಟು ಅಟ್ಟಕ್ಕೇರಿಸಬೇಡಿ ರಾಯರೇ – ನಾನು ಕೇವಲ ವಿದ್ಯಾರ್ಥಿ. ಪಾವಲೋವ ಮೊದಲಾದವರು ನಾಟ್ಯಕಲೆಯ ಉಪಾಸನಾ ಮೂರ್ತಿಗಳು. "

ಎಂದು ಹೇಳುತ್ತಿದ್ದಳು. ವಿದ್ಯೆ, ವಿನಯ ಎರಡೂ ಹಾಸುಹೊಕ್ಕಾಗಿ ಹೊಂದಿಕೊಂಡು ಕಲ್ಪನೆಯ ಘನತೆಯನ್ನು ಮತ್ತಷ್ಟು ಮೇಲಕ್ಕೇರಿಸಿತ್ತು.

ಮದರಾಸಿನ ಪ್ರದರ್ಶನಕ್ಕಾಗಿಯೇ ಒಂದು ನೃತ್ಯ-ನಾಟಕವನ್ನು ಕೀರ್ತಿ ಕೂಡಿಸಿದ್ದ. ಅದರ ಸಿದ್ಧತೆಗೆ ವಿಶೇಷ ಪ್ರಯತ್ನ ನಡೆದಿತ್ತು.

ಶ್ರೀಮದ್ಭಾಗವತದಲ್ಲಿ ಸಣ್ಣ ಪ್ರಕರಣವೊಂದನ್ನೆತ್ತಿಕೊಂಡು ಜೀವಾನಂದಂ ನೃತ್ಯ ನಾಟಕ ಬರೆದಿದ್ದರು.

**ದೃಶ್ಯ ೧** :— ಗೋಕುಲದಲ್ಲಿ ಕಥೆ ಆರಂಭವಾಗುತ್ತದೆ. ಶ್ರೀಕೃಷ್ಣ ಗೋಕುಲದಲ್ಲಿ ರಾಧೆ, ಮಿತ್ರವಿಂದೆ, ಮದವಂತಿ, ಮಂಜುಳಿಕಾ, ಮಾಲಿನಿ ಮತ್ತಿತರ ಗೋಪಕನ್ಯೆಯರೊಡನೆ ರಾಸಕ್ರೀಡೆಯಲ್ಲಿ ಮೈಮರೆತಿರುತ್ತಾನೆ. ಅದೇ ಸಮಯಕ್ಕೆ ರಾಜಧಾನಿಯಿಂದ ಅಕ್ರೂರ ಅವನನ್ನು. ಕರೆದೊಯ್ಯಲು ಬರುತ್ತಾನೆ. ಕೃಷ್ಣ ಹೊರಡಲು ಸಿದ್ಧನಾದುದನ್ನು ಕಂಡು ಗೋಪಕನ್ಯೆಯರಿಗೆ ಅಪರಿಮಿತ ದುಃಖವಾಗುತ್ತದೆ. ' ಕಂಸ ಮಹಾ ಕ್ರೂರಿ. ಅವನು ನಿನ್ನನ್ನು ಕೊಲ್ಲುವುದಕ್ಕೇ ಕರೆಕಳಿಸಿದ್ದಾನೆ – ಹೋಗಬೇಡ ಕೃಷ್ಣ ' ಎಂದು ಗೋಪಕನ್ಯೆಯರು ಅಂಗಲಾಚುತ್ತಾರೆ. ರಾಧೆಯೊಬ್ಬಳೇ ಅಧೀರಳಾಗದಿರುವುದು. ರಾಧೆಯ ಅನಾಸಕ್ತಿ ಕಂಡು ಅವಳ ಗೆಳತಿಯರು ಮುನಿದು ' ನಿನಗೆ ಕೃಷ್ಣನ

ಮೇಲೆ ಸ್ವಲ್ಪವೂ ಅನುರಾಗವಿಲ್ಲ. ಅವನು ಮೃತ್ಯುಸಮ್ಮುಖಕ್ಕೆ ಹೋಗುತ್ತಿರುವುದನ್ನು ಕಂಡೂ ಸಮಾಧಾನಚಿತ್ತಳಾಗಿರುವೆ' ಎಂದು ಆಕ್ಷೇಪಿಸುತ್ತಾರೆ. ರಾಧೆ ಅವರಿಗೆ ಉತ್ತರ ಕೊಡಲೆತ್ನಿಸುವುದಿಲ್ಲ. ಅವರ ಮೌಢ್ಯಕ್ಕೆ ನಕ್ಕು ಸುಮ್ಮನಾಗುತ್ತಾಳೆ.

ಅಕ್ರೂರ, ಕೃಷ್ಣನೊಂದಿಗೆ ರಥದಲ್ಲಿ ಕುಳಿತು ಹೊರಡಲನುವಾಗುತ್ತಾನೆ. ಅಕ್ರೂರನನ್ನು ಶಪಿಸಿದವರು ಕೆಲವರು – ಕೃಷ್ಣನಲ್ಲಿ ಮೊರೆಯಿಟ್ಟವರು ಕೆಲವರು – ರಥದ ಚಕ್ರಗಳಿಗೆ ಅಡ್ಡಲಾಗಿ ಮಲಗಿದವರು ಕೆಲವರು – ರಥದ ಕುದುರೆಗಳ ಕಡಿವಾಣ ಹಿಡಿದು ಅದು ಮುಂದಡಿಯಿಡದಂತೆ ತಡೆದವರು ಕೆಲವರು.

'ಹಟ ಮಾಡಬೇಡಿ – ನಾನು ಹೋಗಲೇ ಬೇಕಾಗಿದೆ. ಅದು ಅನಿವಾರ್ಯ.' ಎಂದು ಕೃಷ್ಣ ಹೇಳುತ್ತಾನೆ.

'ಯಾವಾಗ ಹಿಂದಿರುಗುವೆ ಕೃಷ್ಣ' ಎಂದು ಗೋಪಕನ್ಯೆಯರು ಕೇಳುತ್ತಾರೆ.

"ಬೇಗನೇ ಬರುತ್ತೇನೆ."

'ಸುಳ್ಳು ಹೇಳಿ ನಮ್ಮಿಂದ ಪಾರಾಗಲೂ ಹವಣಿಸುತ್ತಿರುವೆ. ಬೇಗ ಎಂದರೆ ಯಾವಾಗಲೆಂದು ಖಂಡಿತವಾಗಿ ಹೇಳು.'

'ಇಂದೇ ಬರಬಹುದು – ನಾಳೆಯೇ ಬರಬಹುದು. ಯಾರು ಹಗಲಿರುಳೆನ್ನದೆ ನನ್ನ ಧ್ಯಾನದಲ್ಲಿ ಲೀನರಾಗಿ, ತ್ರಿಕರಣ ಪೂರ್ವಕವಾಗಿ ನನ್ನ ಬರುವನ್ನು ಬಯಸುತ್ತಿರುತ್ತಾರೋ ಅವರ ಬಳಿಗೆ ಬರುತ್ತೇನೆ.'

ಎಂದು ಆಶ್ವಾಸನವಿತ್ತು ಹೊರಡುತ್ತಾನೆ.

**ದೃಶ್ಯ ೨** :— ಶುಕ್ಲ ಪಕ್ಷ ಆರಂಭವಾಗುತ್ತದೆ. ವಸಂತಕಾಲ. ಗಿಡ ಬಳ್ಳಿಗಳು ಚಿಗುರಿವೆ. ಮೃಗ ಪಕ್ಷಿಗಳು ಕೂಡ ವಸಂತನ ಕೂರಾಂಬಿಗೆ ಪಕ್ಕಾಗಿವೆ. ನಿಸರ್ಗದ ತುಂಬೆಲ್ಲ ಹ್ಲಾದ, ಶೃಂಗಾರ ತುಂಬಿದೆ. ವಿರಹಿಣಿಯರಾದ ಗೋಪಕನ್ಯೆಯರಿಗೆ ವಸಂತಕಾಲ - ಬೆಳುದಿಂಗಳು - ನಿಸರ್ಗದ ರಸವರ್ಷ ಹೃದಯಶಲ್ಯವಾಗಿದೆ. 'ಬರುತ್ತೇನೆಂದು ಮಾತು ಕೊಟ್ಟರೂ ಕೃಷ್ಣ ಬರಲಿಲ್ಲ. ಅವನು ಶುದ್ಧ ಮೋಸಗಾರ' ಎಂದು ಗೋಪಕನ್ಯೆಯರು ಕೃಷ್ಣನನ್ನು ಆಕ್ಷೇಪಿಸುತ್ತಾರೆ.

**ದೃಶ್ಯ ३** :— ಮಧ್ಯರಾತ್ರಿ ಕಳೆದಿದೆ. ಆಗಸದಲ್ಲಿ ಕೆಲವು ನಕ್ಷತ್ರಗಳು ಮೂಡಿವೆ. ಗಭೀರ ಮೌನ ನಿಶಿಯನ್ನಾವರಿಸಿದೆ. ಕೃಷ್ಣ ಮೆಲ್ಲಡಿಯಿಡುತ್ತ ಬರುತ್ತಾನೆ. ಮನೆ ಮನೆ ನೋಡುತ್ತಾನೆ – ಎಲ್ಲರೂ ಮಲಗಿ ನಿದ್ರಿಸುತ್ತಿದ್ದಾರೆ. ಎಲ್ಲಿಯೂ ಹಣತೆಯ ಬೆಳಕಿಲ್ಲ. ಮಿತ್ರವಿಂದೆ, ಮಾಲನಿ, ಮಂಜುಳಿಕಾ, ಮದವಂತಿ ಎಲ್ಲರೂ ಮಲಗಿ ನಿದ್ರಿಸುತ್ತಿದ್ದಾರೆ. ‘ ಇವರ ಪ್ರೇಮ ಎಷ್ಟು ಕ್ಷಣಿಕ - ಎಷ್ಟು ಕ್ಷುಲ್ಲ ’ ಎಂದು ಕೃಷ್ಣ ಯೋಚಿಸುತ್ತಾನೆ. ಅನತಿ ದೂರದಿಂದ ತಂಬೂರಿ ರವ ಕೇಳಿಬರುತ್ತದೆ - ಯಾರೋ ಹಾಡುತ್ತಿದ್ದಾರೆ – ಕುಣಿಯುತ್ತಿದ್ದಾರೆ - ಕೃಷ್ಣ ಅತ್ತ ತೆರಳಿ ಇಣಿಕಿ ನೋಡುತ್ತಾನೆ – ರಾಧೆ; ಆ ನಿಶೀಥ ಸಮಯವಲ್ಲಿ ಕೃಷ್ಣ ಧ್ಯಾನದಲ್ಲಿ ಪರವಶಳಾಗಿದ್ದಾಳೆ ಮಹಾಭಕ್ತೆ. ‘ ರಾಧೇ ’ ಎಂದು ಕೃಷ್ಣ ಕರೆಯುತ್ತಾನೆ - ರಾಧೆಯ ಪಂಚ ಪ್ರಾಣಗಳೂ ಧಾವಿಸಿ ಬಂದು ಭಗವಂತ ಪಾದಪದ್ಮಗಳ ಮೇಲೆ ಬೀಳುತ್ತವೆ. ಕೃಷ್ಣ ಪ್ರೇಯಸಿಯನ್ನು ಹಿಡಿದೆತ್ತಿ ‘ ನೀನೇ ನಿಜವಾದ ಪ್ರೇಮಿ. ಇತರರು ಡಾಂಭಿಕರು ’ ಎನ್ನುತ್ತಾನೆ.

**ದೃಶ್ಯ ४** :— ಗೋಪಕನ್ಯೆಯರಿಗೆ ಕೃಷ್ಣನ ಮೇಲೆ ಸಹಿಸಲಾಗದಷ್ಟು ಕೋಪ ಬಂದಿದೆ. ಒಬ್ಬೊಬ್ಬರು ಒಂದೊಂದು ಬಗೆಯಲ್ಲಿ ಕೃಷ್ಣನ ಭರ್ತ್ಸನೆಗೆ ತೊಡಗಿದ್ದಾರೆ. ಅಲ್ಲಿಗೆ ಬಂದ ರಾಧೆ ಕೃಷ್ಣ ಪಕ್ಷ ವಹಿಸಿ ಮಾತನಾಡುತ್ತಾಳೆ.

‘ ಅವನು ಶುದ್ಧ ಮೋಸಗಾರ - ನಮ್ಮನ್ನು ನಂಬಿಸಿ ವಂಚಿಸಿದ. ’

‘ ಅವನು ಮೋಸಗಾರನಲ್ಲ - ನಿಮ್ಮನ್ನು ವಂಚಿಸಿಲ್ಲ. ’

‘ ಬರುತ್ತೇನೆಂದು ಹೇಳಿದವನು ಬಂದನೇ ? ’

‘ ಅವನು ಹೇಳಿದ್ದ ಸಂದೇಶ ಮರೆತಿರಲಿಲ್ಲ – ಯಾರು ಸದಾಕಾಲದಲ್ಲಿಯೂ ನನ್ನ ಧ್ಯಾನದಲ್ಲಿರುವರೋ ಅವರ ಬಳಿಗೆ ಬರುತ್ತೇನೆ - ಎಂದಿದ್ದ. ನೀವು ಅವನ ಧ್ಯಾನದಲ್ಲಿದ್ದಿರಾ ? ’

ಗೋಪಕನ್ಯೆಯರು ಒಬ್ಬರ ಮುಖ ಒಬ್ಬರು ನೋಡಿಕೊಂಡು ‘ ಇಲ್ಲ - ನಾನು ಮಲಗಿದ್ದೆ - ನಾನು ಮಲಗಿದೆ - ನನಗೆ ನಿದ್ರೆ ಬಂದು ಬಿಟ್ಟಿತು - ಮಧ್ಯರಾತ್ರಿಯವರೆಗೂ ಜಾಗರಣೆ ಮಾಡಿದೆ, ಅನಂತರ ನಿದ್ರೆ ಆವರಿಸಿತು ’ ಎನ್ನುತ್ತಾರೆ. ರಾಧೆ ಅವರ ಮಾತಿಗೆ ನಗುತ್ತಾಳೆ.

‘ ನೀನು ಎಚ್ಚರವಾಗಿದ್ದೆಯಾ ? ’ ಎಂದು ರಾಧೆಯನ್ನು ಕೇಳುತ್ತಾರೆ.

' ಎಚ್ಚರವಾಗಿಯೂ ಇದ್ದೆ - ಶ್ರೀಕೃಷ್ಣ ಬಂದೂ ಇದ್ದ. '

ಎನ್ನುತ್ತಾಳೆ. ಗೋಪಕನ್ಯೆಯರು ಅವಳ ಮಾತನ್ನು ನಂಬುವುದಿಲ್ಲ. ' ಸುಳ್ಳು ಹೇಳುತ್ತಿರುವೆ ' ಎಂದು ನಿಂದಿಸುತ್ತಾರೆ. ಕೆಲವರು ಅವಳ ಮೇಲೆ ಕೈಮಾಡಲೆತ್ನಿಸುತ್ತಾರೆ.

ರಾಧೆ ಕೃಷ್ಣನಲ್ಲಿ ಮೊರೆಯಿಟ್ಟು ಗೋಪಕನ್ಯೆಯರಿಗೆ ಸತ್ಯ ಸಂಗತಿಯನ್ನ ರುಹಬೇಕೆಂದು ಪ್ರಾರ್ಥಿಸುತ್ತಾಳೆ.

ನೀಲ ನಭವನ್ನು ಭೇದಿಸಿಕೊಂಡು ನೀಲಮೇಘಶಾಮ ಕೊಳಲೂದುತ್ತ ಅವತರಿಸುತ್ತಾನೆ. ರಾಧೆಯನ್ನಪ್ಪಿ ' ಅವಳ ಮಾತು ಸತ್ಯ - ನೀವೆಲ್ಲರೂ ಮಲಗಿ ನಿದ್ರಿಸುತ್ತಿದ್ದಾಗ ರಾಧೆಯೊಬ್ಬಳೇ ಮಿಣುಕು ದೀಪ ಉರಿಸಿಕೊಂಡು ನನ್ನ ಧ್ಯಾನದಲ್ಲಿ ಆಸಕ್ತಳಾಗಿದ್ದಳು ' ಎಂದು ಹೇಳುತ್ತಾನೆ.

ಗೋಪಕನ್ಯೆಯರು ತಮ್ಮ ಅಪರಾಧ ಒಪ್ಪಿಕೊಂಡು ಕ್ಷಮಾಯಾಚನೆ ಮಾಡುತ್ತಾರೆ. ರಾಧಾ-ಮಾಧವರು ಅವರನ್ನು ಸಂತೈಸುತ್ತಾರೆ. ಎಲ್ಲರೂ ರಾಸನೃತ್ಯ ಮಾಡಿ ರಾಧಾಮಾಧವರ ಅನಾದೃಶ ಪ್ರೇಮಕ್ಕೆ ತಮ್ಮ ಭಕ್ತಿಯ ಪೂಜೆ ಸಲ್ಲಿಸುತ್ತಾರೆ.

ನೃತ್ಯ ನಾಟಕವನ್ನು ರಜಪೂತ ಚಿತ್ರಕಲಾ ಸಂಪ್ರದಾಯಕ್ಕನುಸಾರ ವಾಗಿ ಕೂಡಿಸಲು ನಿರ್ಧರವಾಗಿತ್ತು. ಕಾಂಗ್ರಾ ಕಲಮಿನ(Kangra Kalam) ಚಿತ್ರಗಳನ್ನು ಆಧಾರವಾಗಿಟ್ಟುಕೊಂಡು ದರ್ಜಿಗಳು ವೇಷಭೂಷಣಗಳನ್ನು ಸಿದ್ಧಗೊಳಿಸುತ್ತಿದ್ದರು.

' ರಾಧಾ-ಮಾಧವ ' ನೃತ್ಯ ನಾಟಕದಲ್ಲಿ ಕೃಷ್ಣನಿಗಿಂತಲೂ ರಾಧೆಗೆ ಪ್ರಾಧಾನ್ಯವಿತ್ತು. ನೃತ್ಯ ಭಾಗದಲ್ಲಿಯೆ ರಾಧೆಯ ಪಾತ್ರಕ್ಕೇ ಕೆಲಸ ಹೆಚ್ಚು. ಈ ಪಾತ್ರ ತಮ್ಮ ಕೈಜಾರಿ ಕಲ್ಪನೆಯ ಪಾಲಾಯಿತಲ್ಲಾ ಎಂದು ತಾರಾ, ಮೀರಾ, ಚಂದ್ರಮುಖಿ ಈರ್ಷೆಯಿಂದ ಕಿಚ್ಚು ಸುರಿಸಿದರು.

ಪರೀಕ್ಷೆ ಮುಗಿದ ಕೂಡಲೆ ಕಲ್ಪನಾ ಹಗಲಿರುಳು ತನ್ನ ಪಾತ್ರಕ್ಕೆ ವಿನಿ ಯೋಗಿಸಬೇಕಾಯಿತು. ನೃತ್ಯಭಾಗಗಳನ್ನು ಅಭ್ಯಾಸ ಮಾಡಿ ಮಾಡಿ ಅವಳು ದಣಿದು, ಬೆಂಡಾಗುತ್ತಿದ್ದಳು. ಆದರೂ ಮನಸ್ಸಿನಲ್ಲಿ ಅಪೂರ್ವ ಉತ್ಸಾಹ. ತನ್ನ ಪಾತ್ರ ಚೆನ್ನಾಗಿ ಮಾಡಿ, ನೃತ್ಯ ನಾಟಕವನ್ನು ಯಶಸ್ವಿಯಾಗಿಸ ಬೇಕೆಂಬ ಶ್ರದ್ಧೆ ಅವಳನ್ನು ಆವರಿಸಿತ್ತು.

ಮಂಡಳಿ ಮದರಾಸಿಗೆ ಹೋಗುವ ದಿನವೂ ನಿಶ್ಚಯವಾಯಿತು. ಮದರಾಸಿಗೆ ಹೊರಡುವವರ ಒಂದು ಪಟ್ಟಿ ಮಾಡಿ ಸೆಕೆಂಡ್ ಕ್ಲಾಸ್ ರಿಸರ್ವೇಷನ್ ತೆಗೆದುಕೊಂಡರು. ತಮ್ಮ ಜತೆಯಲ್ಲಿ ಕರುಣೆಯೂ ಬರಬೇಕೆಂದು ಜೀವಾನಂದಂ ಇಚ್ಛಿಸಿದರು. 'ಮನೆಯಲ್ಲಿ ಯಾರೂ ಇಲ್ಲದಿದ್ದರೆ ಹೇಗೆ? ನೃತ್ಯನಾಟಕಕ್ಕೆ ನೀವು ತರಿಸಿದ ಸಾಮಾನುಗಳು ಯಥಾಯಥಾ ಬಿದ್ದಿವೆ. ಇವು ಕಾಣೆಯಾದರೆ ಅಂಗಡಿಯವರಿಗೆ ಉತ್ತರ ಹೇಳುವವರು ಯಾರು' ಎಂದು ಕರುಣಾ ಮನೆಯಲ್ಲಿಯೇ ನಿಂತುಬಿಟ್ಟಳು.

ಒಂದು ದಿನ ಸಂಜೆ ನಾಟ್ಯಶಾಲೆಯಲ್ಲಿ ವಿಜಯನೇ ಕಲ್ಪನೆಯನ್ನು ಮಾತನಾಡಿಸಿಕೊಂಡು ಬಂದ.

"ಶುಕ್ರವಾರ ಬೆಳಿಗ್ಗೆ ಮದರಾಸಿಗೆ ಪ್ರಯಾಣ ಮಾಡುವಿರಂತೆ!"

"ಹಾಗೇನು – ಕೀರ್ತಿಯವರು ನಮಗಿನ್ನೂ ಆ ವಿಷಯ ತಿಳಿಸಿಲ್ಲ."

"ಇಂದು ತಿಳಿಸಬಹುದು."

"ನನ್ನ ಪಾತ್ರಕ್ಕೆ ಯಶಸ್ಸು ಸಿಗಲಿ ಎಂದು ನೀವು ಹಾರೈಸುವುದಿಲ್ಲವೇ?"

"ನನ್ನ ಹಾರಯಿಕೆ ಹೇಳಲೆಂದೇ ಬಂದೆ. ಮಂಡಳಿಯ ಪ್ರದರ್ಶನದ ಜೀವ ಜೀವಾಳ 'ರಾಧಾ-ಮಾಧವ' ನೃತ್ಯನಾಟಕ – ಅದರ ಅಂತರಾತ್ಮ ನೀವು. ಪ್ರದರ್ಶನ ಪರಮೋತ್ಕೃಷ್ಟವಾಗುತ್ತದೆಯೆನ್ನುವುದರಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ."

"ಥ್ಯಾಂಕ್ಸ್ - ತುಂಬ ಥ್ಯಾಂಕ್ಸ್ (Thanks)"

"ಶುಕ್ರವಾರ ನೀವು ಪ್ರಯಾಣ ಮಾಡಿದರೆ ಮುಂದಿನ ಬುಧವಾರ, ಗುರುವಾರ ನೀವು ಹಿಂದಿರುಗುವಿರಲ್ಲವೇ?"

"ಅಲ್ಲಿನ ಪ್ರದರ್ಶನಗಳು ಮುಗಿದ ಕೂಡಲೆ ಹೊರಟು ಬರುತ್ತೇವೆ."

"ಮದರಾಸಿನ ಜನ ನಿಜವಾದ ಕಲಾಭಿಮಾನಿಗಳು. ಯೋಗ್ಯತೆಯನ್ನು ಆದರಿಸುತ್ತಾರೆ - ಪುರಸ್ಕರಿಸುತ್ತಾರೆ. ಪ್ರತಿಭೆಯಿಂದ ನೀವು ಅವರ ಹೃದಯವನ್ನು ಸೆರೆ ಹಿಡಿಯಬಲ್ಲಿರೆಂದು ನಂಬಿಕೆ ನನಗಿದೆ."

"ಇದೇನು ಹೀಗೆ ಹೇಳುತ್ತಿರುವಿರಿ ಕ್ಯಾಪ್ಟನ್. ಕೀರ್ತಿಯವರ ಮುಂದೆ ನಾನೆಷ್ಟರವಳು."

"ಒಂದೇ ರಂಗದ ಮೇಲೆ ಇಬ್ಬರೂ ನರ್ತಿಸುವಿರಲ್ಲಾ! ನಿಮ್ಮಿಬ್ಬರ

ಯೋಗ್ಯತಾ ಪರೀಕ್ಷೆ ಮದರಾಸಿನಲ್ಲಿ ನಡೆದು ಹೋಗುತ್ತದೆ. "

" ಯಾರು ಏನೇ ಹೇಳಿದರೂ ಕೀರ್ತಿಯವರ ಕಲಾ ನೈಪುಣ್ಯದ ಬಗ್ಗೆ ನಾನು ಅಭಿಪ್ರಾಯ ಬದಲಿಸಲು ಸಾಧ್ಯವಿಲ್ಲ. "

" ಒಳ್ಳೆಯದು – ಹಾಗೇ ಆಗಲಿ. "

ಎಂದು ವಿಜಯ ಒಪ್ಪಿಕೊಂಡ.

ಶುಕ್ರವಾರ ಮಂಡಳಿ ಮದರಾಸಿಗೆ ಪ್ರಯಾಣ ಮಾಡಿತು. ಶನಿವಾರ ಸಂಜೆ ' ಮ್ಯೂಸಿಯಂ ಥಿಯೇಟರಿ ' ನಲ್ಲಿ ಪ್ರದರ್ಶನವಿತ್ತು.

ಭಾನುವಾರ ಮದರಾಸಿಗೆ ಹೋಗಿ ಕೀರ್ತಿಯವರ ಪ್ರದರ್ಶನಗಳನ್ನು ನೋಡಿ ಬರುವುದೆಂದು ಕ್ಯಾಪ್ಟನ್ ನಿಸ್ಸಾರ್, ಕ್ಯಾಪ್ಟನ್ ಸೋಹನ್‌ಸಿಂಗ್, ನಿಶ್ಚಯಿಸಿದರು. ' ರಾಧಾಮಾಧವ ' ನೃತ್ಯನಾಟಕ ನೋಡಬೇಕೆಂಬ ಆಸೆ ಎಲ್ಲರಿಗಿಂತ ವಿಜಯನಿಗೆ ಹೆಚ್ಚಾಗಿತ್ತು. ಆದರೂ ಅವನು ಮನಸ್ಸು ಬಿಗಿ ಹಿಡಿದು ನಿಸ್ಸಾರ್ ಕರೆದಾಗ ' ಬರಲು ಸಾಧ್ಯವಿಲ್ಲ ' ಎಂದು ನಿರಾಕರಿಸಿಬಿಟ್ಟ.

ಪ್ರದರ್ಶನಗಳು ನಿರೀಕ್ಷೆಗೂ ಮಿಗಿಲಾಗಿ ಯಶಸ್ವಿಯಾದವು. ಪ್ರತಿನಿತ್ಯ ಜನ ಕಿಕ್ಕಿರಿದು ತುಂಬುತ್ತಿದ್ದರು. ಟಿಕೇಟುಗಳ ' ಕಾಳಸಂತೆ ' ಮಾರಾಟ ಆರಂಭವಾಯಿತು. ನಾಲ್ಕು ದಿನಕ್ಕೆ ಕಂಟ್ರ್ಯಾಕ್ಟ್ ತೆಗೆದುಕೊಂಡಿದ್ದ ನಂಬಿಯಾರ್ ಮತ್ತೆ ನಾಲ್ಕು ದಿನಗಳ ಕಂಟ್ರ್ಯಾಕ್ಟ್ ಹಿಡಿದ.

ಮದರಾಸಿಗೆ ಮದರಾಸೇ ಕಲ್ಪನೆಯ ಕೀರ್ತಿಗಾನದಲ್ಲಿ ಮುಳುಗಿತು. ಯಾರ ಬಾಯಲ್ಲಿ ನೋಡಿದರೂ ಕಲ್ಪನೆಯ ರಾಧಾ ಪಾತ್ರ ನಿರ್ವಹಣೆಯ ವಿಷಯ. ಟ್ರಾಂ, ಬಸ್, ಹೋಟಲುಗಳು, ಬೀಚಗಳಲ್ಲೆಲ್ಲಾ ಅದೇ ಸುದ್ದಿ. ಪತ್ರಿಕೆಗಳೂ ಮುಕ್ತಕಂಠದಿಂದ ಕಲ್ಪನೆಯನ್ನು ಹೊಗಳಿದವು – ಕೀರ್ತಿಯ ಹೆಸರು ಹಿಂಬದಿಗೆ ಹೋಯಿತು. ಕೀರ್ತಿಯ ಬುದ್ಧಿ ಕೆಟ್ಟು ಹೋದೀತೆಂದು ಹೆದರಿ ಜೀವಾನಂದಂ ಕೆಲವು ಪತ್ರಿಕಾಕರ್ತರನ್ನು ಗೋಗರೆದುಕೊಂಡು ಕೀರ್ತಿಯನ್ನು ಹೊಗಳಿಸಿದರು. ಆದರೆ ಯಾರೂ ಕಲ್ಪನೆಯನ್ನು ತೆಗಳುವ ಗೋಜಿಗೆ ಹೋಗಲಿಲ್ಲ.

ಕಲ್ಪನೆಯ ಬಿಗುಮಾನಕ್ಕೇ ಅಸಂತುಷ್ಟರಾಗಿದ್ದ ತಾರಾ, ಮೀರಾ, ಚಂದ್ರಮುಖಿಯರು, ಅವಳ ಕೀರ್ತಿ ಕಥನ ಕೇಳಿ ಮತ್ತಷ್ಟು ಕೆರಳಿದರು. ಹೇಗಾದರೂ ಮಾಡಿ ಕಲ್ಪನೆಯನ್ನು ತಮ್ಮ ದಾರಿಗೆ ಎಳೆದುಕೊಳ್ಳಬೇಕೆಂಬ

ಸೀಚ ಹಟ ಅವರ ಹೃದಯದಲ್ಲಿ ಮನೆ ಮಾಡಿತು.

ಮಂಡಳಿಯೆಲ್ಲಾ 'ಕಾರ್ಲಟನ್ ಹೋಟೇಲಿ' ನಲ್ಲಿ ಇಳಿದಿದ್ದರೂ ಕಲ್ಪನಾ ಎಲ್ಲರಿಂದ ದೂರ ಇರುತ್ತಿದ್ದಳು. ಹೋಟೇಲಿನಲ್ಲಿ ಅವಳಿಗೆ ಪ್ರತ್ಯೇಕ ಕೋಣೆ. ತಾರಾ, ಮೀರಾ ಒಂದು ರೂಮಿನಲ್ಲಿರುತ್ತಿದ್ದರು. ಚಂದ್ರಮುಖಿ, ಕೋಕಿಲ ಒಂದು ರೂಮಿನಲ್ಲಿಯೂ, ಕೀರ್ತಿ, ಜೀವಾನಂದಂ ಒಂದು ರೂಮಿನಲ್ಲಿಯೂ ಇರುತ್ತಿದ್ದರು. ವಾದ್ಯಗಾರರಿಗೆ, ಸಂಗೀತಗಾರರಿಗೆ ವಿಶಾಲವಾದ ಒಂದು ಹಜಾರ ಕೊಡಲಾಗಿತ್ತು.

ಒಂದು ರಾತ್ರಿ ನರ್ತಕಿಯರೆಲ್ಲಾ ತಾರಾದೇವಿಯ ರೂಮಿನಲ್ಲಿ ಸೇರಿದ್ದಾರೆ. ಪಾನ ಸಮಾರಾಧನೆ ನಡೆದಿದೆ. ಎಲ್ಲರೂ ಮಾತನಾಡಿಕೊಂಡು ಮೆಲ್ಲನೆ ಕಲ್ಪನೆಯನ್ನು ಕರೆದುಕೊಂಡು ಬಾರೆಂದು ಮೀರೆಯನ್ನು ಕಳುಹಿಸಿದರು.

ಮೀರಾ ಬಂದು ಮೆಲ್ಲನೆ ಕಲ್ಪನೆಯ ರೂಮಿನ ಕದ ತಟ್ಟಿದಳು.

"ಯಾರು?" ಎಂದಳು ಕಲ್ಪನಾ ಒಳಗಿನಿಂದ.

"ನಾನು - ಮೀರಾ"

ಕಲ್ಪನೆ ಬಾಗಿಲು ತೆಗೆದುಕೊಂಡು ಹೊರಗೆ ಬಂದು

"ಏನು ಬೇಕಾಗಿತ್ತು" ಎಂದು ಕೇಳಿದಳು.

"ಚಂದ್ರಮುಖಿ ಹೊಟ್ಟೆಯ ನೋವಿನಿಂದ ಬಾಧೆ ಪಡುತ್ತಿದ್ದಾಳೆ. ನಿಮ್ಮನ್ನು ಕರೆದುಕೊಂಡು ಬಾರೆಂದು ತಾರಾ ಹೇಳಿದಳು."

ಅವಳ ಮಾತು ನಿಜವೆಂದು ನಂಬಿ ಕಲ್ಪನಾ ಅವಳೊಂದಿಗೆ ಹೋದಳು. ರೂಮಿನೊಳಗೆ ಕಲ್ಪನೆಯನ್ನು ಕರೆದೊಯ್ದು ಮೀರಾ ಮಾಯವಾದಳು. ಚಂದ್ರಮುಖಿ ಬಾಗಿಲಿಗೆ ಅಡ್ಡವಾಗಿ ನಿಂತಳು. ತಾರಾ ಕೈಯಲ್ಲಿ ಮದ್ಯ ತುಂಬಿದ ಗ್ಲಾಸು ಹಿಡಿದು ತಂದು

"ಇದನ್ನು ತೆಗೆದುಕೋ ಕಲ್ಪನಾ. ಮೈಗೊಳ್ಳಿಯದು – Be a Sport"

ಎಂದು ಕಲ್ಪನೆಯ ಬಾಯಬಳಿ ಹಿಡಿದಳು. ಕಲ್ಪನಾ ಕೋಪದಿಂದ ಕೈಕೊಡವಿದ ರಭಸಕ್ಕೆ ಗ್ಲಾಸು ನಾಲ್ಕು ಮಾರು ದೂರ ಹೋಗಿ ಬಿದ್ದಿತು.

"ನಾವು ಕೊಟ್ಟರಾಗದು. ನಿನಗೆ ಕ್ಯಾಪ್ಟನ್ ವಿಜಯನೇ ಕೊಡಬೇಕೇನೋ."

ಎಂದು ತಾರಾ ಅಣಕವಾಡಿದಳು. ಈ ವೇಳೆಗೆ ಚಂದ್ರಮುಖಿ, ನಿಸ್ಸಾರ್, ಸೋಹನ್‌ಸಿಂಗ್‌ರೊಂದಿಗೆ ಪ್ರವೇಶಿಸಿದಳು. ಅವರನ್ನು ನೋಡಿದ ಮೇಲೆ ಕಲ್ಪನೆಯ ಜಂಘಾಬಲವೇ ಉಡುಗಿ ಹೋಯಿತು. ಇಬ್ಬರು ಕ್ಯಾಪ್ಟನ್ನರೂ ಕಂಠಪೂರ್ತಿ ಕುಡಿದಿದ್ದರು. ಅವರ ರಕ್ತವರ್ಣದ ನೇತ್ರಗಳು ಕಿಡಿ ಕಾರುತ್ತಿದ್ದವು.

ಅಂಜಿ ಒಂದೆಡೆ ನಿಂತಿದ್ದ ಕಲ್ಪನೆಯನ್ನು ನೋಡಿ ಸೋಹನ್‌ಸಿಂಗ್ ಸಮೀಪ ಬರಲೆತ್ನಿಸಿದ. ಕಲ್ಪನೆಯ ಕಣ್ಣುಗಳಲ್ಲಿ ಪ್ರವಾಹ ಹೊರಟು ಬಿಟ್ಟಿತು.

" ಎಲ್ಲಾ ಸೋಗು – ಅವಳು ಮೀನಿನಂತೆ ಕುಡಿಯುತ್ತಾಳೆ. ( She drinks like a fish ) "

ಎಂದು ತಾರಾ ಟೀಕೆ ಮಾಡಿದಳು. ಅವಳ ಕುಹಕ ನುಡಿ ಸೋಹನ್ ಸಿಂಗನನ್ನು ಮತ್ತಷ್ಟು ಹುರುಪುಗೊಳಿಸಿತು. ಕಲ್ಪನೆಯ ಬಳಿಗೆ ಧಾವಿಸಲೆತ್ನಿಸಿದ. ಕಲ್ಪನೆ ಅವನಿಂದ ದೂರವಾಗಿ ಬೇರೊಂದು ಮೂಲೆಯನ್ನಾಶ್ರಯಿಸಿ

" ನನ್ನನ್ನು ಬಿಟ್ಟುಬಿಡಿ – ಬಿಟ್ಟುಬಿಡಿ "

ಎಂದು ಚೀರಿದಳು. ಸೋಹನ್‌ಸಿಂಗ್ ಅವಳ ಬಳಿಗೆ ಹೋಗಲೆತ್ನಿಸಿದ. ನಿಸ್ಸಾರ್ ಅವನ ದಾರಿಗೆ ಅಡ್ಡಲಾಗಿ ನಿಂತು ಮೀರನ ಕಡೆ ತಿರುಗಿ

" ಬಾಗಿಲು ತೆಗೆದು ಬಿಡು – ಅವರು ಹೋಗಲಿ " ಎಂದ.

ಮೀರಾ ಅನುಮಾನಿಸಲು ಸೋಹನ್‌ಸಿಂಗನನ್ನು ಒತ್ತಟ್ಟಿಗೆ ತಳ್ಳಿ ತಾನೇ ಬಾಗಿಲು ತೆಗೆದು

" ಕ್ಷಮಿಸಿ – ಕಲ್ಪನಾದೇವಿ. We have behaved like brutes "

ಎಂದ. ಕಲ್ಪನೆ ಒಂದೇಪೆಟ್ಟಿಗೆ ಹಾರಿ ಅಲ್ಲಿಂದ ತನ್ನ ರೂಮಿಗೆ ಬಂದು ಕಿಟಕಿ, ಬಾಗಿಲುಗಳ ಚಿಲಕ ಭದ್ರಪಡಿಸಿಕೊಂಡು ಮಲಗಿದಳು.

ಅಂದೇ ರಾತ್ರಿ ಅವಳಿಗೆ ಪೂರಾ ಜ್ವರ ಬಂದು ಬಿಟ್ಟಿತು; ರಾತ್ರಿ ಅರೆಕ್ಷಣ ಕಣ್ಣು ಮುಚ್ಚಲಿಲ್ಲ – ದೀಪವನ್ನು ಹೊತ್ತಿಸಿಕೊಂಡು, ಹಾಸಿಗೆಯ ಮೇಲೆ ಜಾಗರಣೆ ಮಾಡುತ್ತ ಕುಳಿತಳು. ಬೆಳಗಾದರೆ ಸಾಕಲ್ಲ ಎಂದು ಅವಳ ಮನಸ್ಸು ತವಕಪಡುತ್ತಿತ್ತು. ಸುಮಾರು ಐದು ಗಂಟೆಯ ವೇಳೆಗೆ ಮೈ ಚೆನ್ನಾಗಿ ಬೆವರಿತು. ಮುಖ ತೊಳೆದುಕೊಂಡು, ತನ್ನ ಬಟ್ಟೆಬರೆಗಳನ್ನು ಕಟ್ಟಿಟ್ಟು ಬೆಳಕು ಹರಿಯುವುದನ್ನೇ ಕಾಯುತ್ತ ಕುಳಿತಳು.

ಆರು ಗಂಟೆಯ ವೇಳೆಗೆ ಹೊಟೇಲಿನ ‘ ಬಾಯ್ ’ ಬೆಡ್ ಕಾಫಿ ತೆಗೆದು ಕೊಂಡು ಬಂದು ಬಾಗಿಲು ತಟ್ಟಿದ. ಆಗಲೂ ಬಾಗಿಲು ತೆಗೆಯುವುದಕ್ಕೆ ಕಲ್ಪನೆಗೆ ಧೈರ್ಯವಿಲ್ಲ. ಬಾಯ್ ಧ್ವನಿ ಆಲಿಸಿ ಕೇಳಿ, ಚೆನ್ನಾಗಿ ಬೆಳಗಾ ಗಿದೆಯೆನ್ನುವುದನ್ನು ಅವನಿಂದ ತಿಳಿದುಕೊಂಡು ಬಾಗಿಲು ತೆಗೆದಳು.

“ ಕೀರ್ತಿಯವರು ಎದ್ದಿದ್ದಾರೆಯೇ ? ” ಎಂದು ಕೇಳಿದಳು.

“ ಇನ್ನೂ ಇಲ್ಲ ಮಿಸ್. ”

“ ಈ ಕೂಡಲೇ ಅವರನ್ನು ಎಬ್ಬಿಸಿ ಜೀವಾನಂದಂ ಅವರೊಂದಿಗೆ ಇಲ್ಲಿಗೆ ಬರಬೇಕೆಂದು ತಿಳಿಸು. ”

ಕಾಫಿ ಟ್ರೇಯ ಕಡೆ ಕಲ್ಪನಾ ಕಣ್ಣು ಹೊರಳಿಸಲಿಲ್ಲ. ಮತ್ತೆ ಬಾಗಿಲು ಹಾಕಿಕೊಂಡು ಕುಳಿತಳು.

ಸುಮಾರು ಅರ್ಧ ಗಂಟೆ ಕಳೆದಿರಬಹುದು. ಕೀರ್ತಿ, ಜೀವಾನಂದಂ ಬಾಗಿಲು ತಟ್ಟಿದರು. ಅವರ ಧ್ವನಿಯ ಗುರುತು ಹಿಡಿದು ಕಲ್ಪನಾ ಬಾಗಿಲು ತೆಗೆದಳು.

ಕೀರ್ತಿ, ಜೀವಾನಂದಂ ರೂಮು ಪ್ರವೇಶಿಸಿದೊಡನೆಯೇ ಅವರ ಕಣ್ಣು ಸೆಳೆದುದು ಕಲ್ಪನೆಯ ಹೋಲ್ಡ್ ಆಲ್ ಮತ್ತು ಸೂಟ್ ಕೇಸ್. ಕೀರ್ತಿ ಕಲ್ಪನೆಯನ್ನು ನೋಡಿದ. ಅವಳು ಬಟ್ಟೆ ಬದಲಾಯಿಸಿ ಎಲ್ಲಿಗೋ ಹೊರ ಡಲು ಸಿದ್ಧವಾಗಿದ್ದುದನ್ನು ಗ್ರಹಿಸಿ

“ ಇದೇನು ಕಲ್ಪನಾದೇವಿ, ಇಷ್ಟು ಬೇಗ ಎಲ್ಲಿಗೆ ಹೊರಟಿರಿ ? ”

“ ಊರಿಗೆ ಹೊರಟಿದ್ದೇನೆ. ”

“ ಊರಿಗೆ........ ! ”

ಕೀರ್ತಿಯ ಎದೆ ಬಿಚ್ಚಿ ಹೋಯಿತು. ಜೀವಾನಂದಂ ಅವಳ ಮಾತನ್ನು ಲಘುವಾಗಿ ಪರಿಗಣಿಸಿ

“ ನಮ್ಮ ಕ್ಯಾಂಪು ಇನ್ನೂ ಮುಗಿದಿಲ್ಲ ಮಿಸ್. ಕಲ್ಪನಾ ” ಎಂದ.

“ ನಿಮ್ಮ ಕ್ಯಾಂಪು ಯಾವಾಗ ಬೇಕಾದರೂ ಮುಗಿಸಿಕೊಳ್ಳಿ. ನನ್ನನ್ನು ಈಗಲೇ ಊರಿಗೆ ಕಳಿಸಿ ಬಿಡಿ. ”

“ ಏನಿಷ್ಟು ಅವಸರ ? ”

ಕಲ್ಪನೆಗೆ ತಾಳ್ಮೆ ಉಳಿಯಲಿಲ್ಲ. ಅವಳ ಕಣ್ಣುಗಳಿಂದ ಪ್ರವಾಹ ಹೊರಟಿತು.

" ನಾನು ಇಲ್ಲಿರಲಾರೆ – ನನ್ನನ್ನು ಕಳಿಸಿಬಿಡಿ " ಎಂದಳು.

" ಏನಾಯಿತು . ಮಿಸ್. ಕಲ್ಪನಾ. ಮೈಯಲ್ಲಿ ಆರೋಗ್ಯವಿಲ್ಲವೇ? ನಾವು ಕ್ಯಾಂಪು ಮುಗಿಸುವ ಮುನ್ನ ನೀವು ಹೊರಟುಹೋಗುವುದು ಸ್ವಲ್ಪವೂ ಚೆನ್ನಾಗಿಲ್ಲ. ನಿಮ್ಮ ' ರಾಧಾಮಾಧವ ' ಮದರಾಸಿನ ಅಚ್ಚುಮೆಚ್ಚಾಗಿದೆ. ಇನ್ನೂ ಮೂರು ದಿವಸಗಳು ತಾನೇ – ಅನಂತರ ಎಲ್ಲರೂ ಹೊರಟುಬಿಡೋಣ. "

" ನನ್ನ ಮರ್ಯಾದೆ ಕಳೆದುಕೊಳ್ಳಲು ನಾನು ಸಿದ್ಧಳಾಗಿಲ್ಲ. ನನ್ನ ಈ ಕೂಡಲೇ ಕಳಿಸಿಬಿಡಿ. "

" ಮರ್ಯಾದೆ ಹೋಗುವ ಪ್ರಸಂಗವೇನಾಯಿತು? "

ಅಳುವಿನ ಮಧ್ಯೆ – ತಡೆತಡೆದು – ಕಲ್ಪನಾ ರಾತ್ರಿ ನಡೆದ ಪ್ರಸಂಗವನ್ನು ವಿವರಿಸಿದಳು. ಕೀರ್ತಿ, ಜೀವಾನಂದಂ ಇಬ್ಬರೂ ಸ್ತಬ್ಧರಾಗಿ ಬಿಟ್ಟರು. ಇಬ್ಬರ ಬಾಯಲ್ಲಿಯೂ ದ್ರವವಿರಲಿಲ್ಲ.

" ನನ್ನ ಪ್ರಯಾಣಕ್ಕೆ ನೀವು ಅಡ್ಡಬಂದರೆ ನಾನು ಪೋಲೀಸಿಗೆ ದೂರು ಕೊಡಬೇಕಾಗುತ್ತದೆ. "

" ಎಲ್ಲವನ್ನೂ ನಾನು ವಿಚಾರ ಮಾಡುತ್ತೇನೆ. ತಪ್ಪಿತಸ್ಥರನ್ನು ಶಿಕ್ಷಿಸುತ್ತೇನೆ. ನಿಸ್ಸಾರ್ ಮತ್ತು ಸಿಂಗ್‌ರನ್ನು ಈ ಕೂಡಲೆ ಇಲ್ಲಿಂದ ಆಚೆಗೆ ಕಳಿಸುತ್ತೇನೆ. ನಿಮ್ಮ ರಕ್ಷಣೆಗೆ ಬೇಕಾದ ವ್ಯವಸ್ಥೆ ಮಾಡುತ್ತೇನೆ. ದಯೆಯಿಟ್ಟು ಸೀಸನ್ ಮುಗಿಸಿಕೊಂಡು ಹೋಗಿ. ಮೊದಲೇ ಮದರಾಸಿಗೂ ನನಗೂ ಋಣಾನುಬಂಧವಿಲ್ಲ. ನೀವೂ ಹೊರಟು ಹೋದರೆ ನನ್ನ ಪರಿಸ್ಥಿತಿ ತೀರ ಕೆಡುತ್ತದೆ. "

ಎಂದು ಕೀರ್ತಿ ಗೋಗರೆದ. ಜೀವಾನಂದಂ ಹಲವು ಮಾತುಗಳಿಂದ ಕಲ್ಪನೆಯನ್ನು ಸಮಾಧಾನಪಡಿಸಲೆತ್ನಿಸಿದರು.

ಕಲ್ಪನೆಯದು ಒಂದೇ ಮಾತು – ಒಂದೇ ಹಟ. ನಾನು ಈಗ ಹೊರಡಲೇ ಬೇಕು ' ಎಂದು ಖಂಡಿತವಾಗಿ ಹೇಳಿಬಿಟ್ಟಳು.

ಕೀರ್ತಿ, ಜೀವಾನಂದಂ ಅವರಿಗೆ ಬೇರೆ ಮಾರ್ಗವೇ ತೋರಲಿಲ್ಲ. ಕಲ್ಪನೆಯ ಕೋರಿಕೆಯಂತೆ ಡಾ. ಶ್ರೀಧರರಿಗೆ ಎಕ್ಸ್‌ಪ್ರೆಸ್ ಟೆಲಿಗ್ರಾಮ್ ಕೊಟ್ಟು ಕಲ್ಪನೆಯನ್ನು ರೈಲು ಹತ್ತಿಸಿದರು.



## ೧೧

ಕೀರ್ತಿಗೆ ಉಭಯ ಸಂಕಟಕ್ಕಿಟ್ಟುಕೊಂಡಿತು. ಪ್ರದರ್ಶನಗಳನ್ನು ನಿಲ್ಲಿಸುವುದಕ್ಕೆ ಸಾಧ್ಯವಿರಲಿಲ್ಲ; ಅವುಗಳನ್ನು ಮುಂದುವರಿಸಲೂ ಸಾಧ್ಯವಿರಲಿಲ್ಲ. ಒಬ್ಬಳು ನರ್ತಕಿ ಹೊರಟು ಹೋದಳೆಂದು ಅಂತರ – ರಾಷ್ಟ್ರೀಯ ವಿಖ್ಯಾತಿ ಪಡೆದ ಕೀರ್ತಿ ಪ್ರದರ್ಶನ ನಿಲ್ಲಿಸಿದ ಎಂಬ ಕೆಟ್ಟ ಹೆಸರು ಶಾಶ್ವತವಾಗಿ ನಿಲ್ಲುತ್ತದೆ; ಚಂದ್ರಮುಖಿಯನ್ನೋ ತಾರಾದೇವಿಯನ್ನೋ ನಾಯಕಿಯನ್ನಾಗಿ ಮಾಡಿಕೊಂಡು ಪ್ರದರ್ಶನ ಮುಂದುವರಿಸಿದರೆ ಜನ ಅತೃಪ್ತರಾಗುತ್ತಾರೆ. ಜತೆಗೆ ಕಂಟ್ರ್ಯಾಕ್ಟರ್ ನಂಬಿಯಾರ್ ಭಯ ಬೇರೆ! ಜೀವಾನಂದಂ, ಕೀರ್ತಿ ಅಳೆದೂ ಸುರಿದೂ ಕೊನೆಗೆ ನಂಬಿಯಾರ್ ಹೇಳಿದಂತೆ ಮಾಡುವುದೆಂದು ನಿಶ್ಚಯಿಸಿದರು.

ಕಲ್ಪನಾ ಹೊರಟು ಹೋದುದನ್ನು ಕೇಳಿ ನಂಬಿಯಾರ್ ಕೆರಳಿ ಕೆಂಡವಾಗಿ ಬಿಟ್ಟ. ಈ ಕಂಟ್ರ್ಯಾಕ್ಟು ಹಿಡಿದು ತಾನು ಮುಳುಗಿ ಹೋದೆನೆಂದು ಹಾರಾಡಿದ. ಉಳಿದಿದ್ದ ಮೂರು ಪ್ರದರ್ಶನಗಳಿಗೆ ಕೀರ್ತಿಯಿಂದ ಆದಷ್ಟು ರಿಯಾಯಿತಿ ದೊರಕಿಸಿಕೊಂಡು ತನ್ನ ಸಮ್ಮತಿ ಸೂಚಿಸಿದ.

'ಕಲ್ಪನಾ ಅನಾರೋಗ್ಯದಿಂದ ಊರಿಗೆ ಹೊರಟು ಹೋದುದರಿಂದ ನಾಯಕಿಯ ಪಾತ್ರವನ್ನು ಚಂದ್ರಮುಖಿ ಅಭಿನಯಿಸುತ್ತಾಳೆ' ಎಂದು ಸಾಕಷ್ಟು ಜಾಹೀರು ಮಾಡಿದ್ದರೂ, ಅದನ್ನರಿಯದೆ ಕಲ್ಪನೆಯ ನೃತ್ಯ ನೋಡಲು ಬಂದವರೇ ಹೆಚ್ಚು ಮಂದಿ. ಮೊದಲನೆಯ ದಿನ ಹೆಚ್ಚು ಪೋಲಿಸರ ಸಹಾಯ ತೆಗೆದುಕೊಂಡು ಪ್ರದರ್ಶನ ನಡೆಸಬೇಕಾಯಿತು. ಉಳಿದೆರಡು ದಿನಗಳಲ್ಲಿಯೂ ವರಮಾನ ತೀರ ಕೆಳಮಟ್ಟಕ್ಕೆ ಬಂದುಬಿಟ್ಟಿತು.

ನಾಲ್ಕನೆಯ ದಿನ ಬೆಳಿಗ್ಗೆಯೇ ಹೊರಟು ಕೀರ್ತಿ ಮತ್ತು ಮಂಡಳಿ ಕೆಟ್ಟ ಮುಖ ಹಾಕಿಕೊಂಡು ಊರು ಸೇರಿದರು.

ಕೀರ್ತಿ ಊರಿಗೆ ಹಿಂದಿರುಗುವ ವಿಷಯವನ್ನು ಕರುಣೆಯಿಂದ ತಿಳಿದು ಕೊಂಡ ವಿಜಯ ಅವನು ಬಂದ ಮಾರನೆಯ ಬೆಳಿಗ್ಗೆ 'ನಾಟ್ಯಶಾಲೆ' ಗೆ ಹೋದ. ಅಂದು ರಿಹರ್ಸಲ್ಲೂ ಇರಲಿಲ್ಲ – ಕಲ್ಪನೆಯೂ ಕಂಡು ಬರಲಿಲ್ಲ. ನಾಟ್ಯಶಾಲೆಯ ವಾತಾವರಣವೇಕೊ ಗಂಭೀರವಾಗಿದ್ದಿತು. ಯಾರೂ ಸರಿ ಯಾಗಿ ಮಾತನಾಡಲೊಲ್ಲರು. ಎಲ್ಲರ ಮನಸ್ಸಿಗೂ ಬೇಸರ. 'ಮದರಾಸ ಪ್ರವಾಸ ಹೇಗಾಯಿತು' ಎಂದು ಕೇಳಿದ್ದಕ್ಕೆ 'ಸಾಧಾರಣವಾಗಿ ಆಯಿತು' ಎಂದಷ್ಟೇ ಕೀರ್ತಿ ಉತ್ತರಿಸಿದ್ದ.

ಕಲ್ಪನೆಯನ್ನು ಕಾಣಲಿಲ್ಲವೆಂದು ವಿಜಯನ ಮನಸ್ಸು ತವಕಪಡಲಾ ರಂಭಿಸಿತು. ನಾಟ್ಯಶಾಲೆ ಬಿಟ್ಟವನೇ ನೇರವಾಗಿ ಡಾಕ್ಟರ ಮನೆಗೆ ಬಂದ.

ಡಾಕ್ಟರ ನಡೆವಳಿಕೆಯಲ್ಲಿಯೂ ವಿಜಯನಿಗೆ ಏನೋ ಒಂದು ಬಗೆಯ ಬಿಗುಮಾನ ಕಂಡುಬಂದಿತು. ಮೊದಲಿನ ಹಾರ್ದಿಕತೆ, ವಿಶ್ವಾಸ ಮಾಯ ವಾಗಿದ್ದವು. ಅಲ್ಲಿಯೂ ಕಲ್ಪನೆಯ ಸುಳಿವಿಲ್ಲ. ಡಾಕ್ಟರ ಜತೆಯಲ್ಲಿ ನಾಲ್ಕೈದು ನಿಮಿಷ ಸಂಭಾಷಣೆ ಸಾಗಿಸಲು ವಿಜಯ ಪರಮ ಪ್ರಯತ್ನ ಮಾಡ ಬೇಕಾಯಿತು. ಮನಸ್ಸು ತಡೆಯಲಾಗದೆ

"ಕಲ್ಪನಾದೇವಿಯವರೆಲ್ಲಿ ?" ಎಂದು ಕೇಳಿದ.

ಡಾಕ್ಟರು ಕ್ಷಣಕಾಲ ವಿಚಾರಪರವಶರಾಗಿ

"ಆವಳಿಗೆ ಮೈಯಲ್ಲಿ ಸರಿಯಿಲ್ಲ. ಮಲಗಿದ್ದಾಳೆ" ಎಂದರು.

"ಮೈಯಲ್ಲಿ ಸರಿಯಿಲ್ಲವೇ ? ಏನಾಗಿದೆ."

"ಜ್ವರ ಬರುತ್ತಿತ್ತು. ನರದೌರ್ಬಲ್ಯವೆಂದು ಕಾಣುತ್ತದೆ."

"ನರದೌರ್ಬಲ್ಯ ! ............ ಅವರನ್ನು ನಾನು ನೋಡಬಹುದೇ ?"

ಡಾಕ್ಟರು ಅನುಮಾನಿಸಿ 'ಬನ್ನಿ' ಎಂದು ಒಳಕ್ಕೆ ಕರೆದುಕೊಂಡು ಹೋದರು.

ಹಾಸಿಗೆಯ ಮೇಲೆ, ಮಗಳ ಪಕ್ಕದಲ್ಲಿ ಕುಳಿತಿದ್ದ ಕಲ್ಯಾಣಮ್ಮನವರು ಒಳಗೆದ್ದು ಹೋದರು. 'ಕಲ್ಯಾಣಮ್ಮನವರು ತನ್ನನ್ನು ಏಕೆ ಮಾತನಾಡಿಸ ಲಿಲ್ಲ' ಎಂದು ವಿಜಯ ಯೋಚಿಸಿದ.

ವಿಜಯ ಕಲ್ಪನೆಯ ಮಂಚದ ಬಳಿ ಹೋಗಿ ನಿಂತು

"ಜ್ವರ ಬಂದಿತಂತೆ – ಏನಾಯಿತು ಕಲ್ಪನಾದೇವಿ – ಮದರಾಸಿನಲ್ಲಿ ತುಂಬ ಆಯಾಸವಾಯಿತೇ ?" ಎಂದು ಕೇಳಿದ.

ಕಲ್ಪನೆಯ ಬಾಯಲ್ಲಿ ಮಾತು ಹೊರಡಲಿಲ್ಲ. ಕಣ್ಣುಗಳಿಂದ ಹನಿಗ ಳುದುರಿದವು. ವಿಜಯನ ಮನಸ್ಸಿನಲ್ಲಿ ಭಯ ಮೂಡಿತು. ಆರ್ತನಾಗಿ ಡಾಕ್ಟರ ಕಡೆ ತಿರುಗಿ

"ಏನಾಯಿತು ಸರ್. ಕಲ್ಪನಾದೇವಿ ಏಕೆ ದುಃಖಪಡುತ್ತಿದ್ದಾರೆ" ಎಂದು ಕೇಳಿದ.

"ನಿಮಗೊಂದೂ ಗೊತ್ತಿಲ್ಲವೇ ಕ್ಯಾಪ್ಟನ್."

"ಇಲ್ಲ ಸರ್."

"ನಿಮ್ಮ ಮಿತ್ರರು ಕ್ಯಾಪ್ಟನ್ ಸೋಹನ್‌ಸಿಂಗ್, ಕ್ಯಾಪ್ಟನ್ ನಿಸ್ಸಾರ್ ಏನೂ ಹೇಳಲಿಲ್ಲವೇ ?"

"ರಜೆಯ ಮೇಲೆ ಹೋಗಿರುವ ಅವರಿಬ್ಬರೂ ಹಿಂದಕ್ಕೆ ಬಂದಿಲ್ಲ ಸರ್. ಈ ಬೆಳಿಗ್ಗೆ ನಾನು 'ನಾಟ್ಯಶಾಲೆ' ಗೆ ಹೋದೆ. ಅಲ್ಲಿ ಕಲ್ಪನಾದೇವಿಯವ ರನ್ನು ಕಾಣಲಿಲ್ಲ. ಮದರಾಸಿನ ಸುದ್ದಿ ತಿಳಿದುಕೊಂಡು ಹೋಗೋಣವೆಂದು ಇಲ್ಲಿಗೆ ಬಂದೆ."

ಡಾಕ್ಟರು ಸಾವಕಾಶವಾಗಿ ಮದರಾಸಿನ ಪ್ರಕರಣ ವಿವರಿಸಿದರು. ವಿಜಯ ಸ್ತಬ್ಧನಾಗಿ ಬಿಟ್ಟ.

ಉಕ್ಕಿ ಬರುತ್ತಿದ್ದ ದುಃಖಾಶ್ರುಗಳನ್ನು ತಡೆದುಕೊಂಡು ಕಲ್ಪನಾ

"ಡ್ಯಾಡಿ – ನಾಟ್ಯಕ್ಕೆ 'ದಾಸೀ ಆಟ' ವೆಂದು ಹೆಸರು ಬಂದಿದೆ. ಆ ಹೆಸರು ಉಳಿಸಿಕೊಳ್ಳಲು ಕೀರ್ತಿಯವರ ಮಂಡಳಿಯವರು ಪ್ರಯತ್ನ ಮಾಡು ತ್ತಿದ್ದಾರೆ. ಈ ಅನುಭವದಿಂದ ನನಗೆ ವಿವೇಕ ಬಂದಂತಾಯಿತು. ನಾಟ್ಯ ಕಲೆಗೇ ಕೈಮುಗಿದು ಬಿಡುತ್ತೇನೆ" ಎಂದಳು.

"ನಾಟ್ಯಕಲೆಯನ್ನು ನಾಲ್ಕು ಜನ ಅಯೋಗ್ಯರು ದುರುಪಯೋಗ ಪಡಿಸಿಕೊಂಡರೆ ಕಲೆಯನ್ನು ದೂಷಿಸುವುದು ನ್ಯಾಯವಲ್ಲ ಡಾರ್ಲಿಂಗ್. ಮೊದಲು ಈ ಪ್ರಕರಣ ಮರೆಯಲು ನೀನು ಪ್ರಯತ್ನಿಸಬೇಕು. ಮಿಕ್ಕ ವಿಷಯಗಳನ್ನು ಯೋಚನೆ ಮಾಡುವುದಕ್ಕೆ ಸಾಕಷ್ಟು ಕಾಲಾವಕಾಶವಿದೆ."

" ಮಾನವ ವರ್ಗದ ಬಗ್ಗೆಯೇ ನನಗೆ ಭಯ ಹುಟ್ಟಿದೆ ಡ್ಯಾಡಿ. ಈ ಲೋಕದಲ್ಲಿ ಕೆಟ್ಟವರೂ ಇರುತ್ತಾರೆಂದು ನನಗೆ ತಿಳಿದೇ ಇರಲಿಲ್ಲ" ಎಂದು ವಿಜಯನ ಕಡೆ ತಿರುಗಿ

" ನೋಡಿ ಕ್ಯಾಪ್ಟನ್. ಡ್ಯಾಡಿ, ಮಮ್ಮಿ ಇಬ್ಬರೂ ಸುಂದರ ವಾತಾವ ರಣದಲ್ಲಿ, ಸುಂದರ ವಿಚಾರಗಳನ್ನೇ ನನಗೆ ಪರಿಚಯ ಮಾಡಿ ಕೊಡುತ್ತಾ ನನ್ನನ್ನು ಬೆಳಸಿದರು. ಜಗತ್ತಿನಲ್ಲಿರುವ ಎಲ್ಲ ಪುರುಷರೂ ಡ್ಯಾಡಿಯ ಹಾಗೇ ಇರುತ್ತಾರೆ, ಎಲ್ಲ ಸ್ತ್ರೀಯರೂ ಮಮ್ಮಿಯ ಹಾಗೇ ಇರುತ್ತಾರೆ ಎಂದು ಕೊಂಡಿದ್ದೆ. ನನ್ನ ಅಭಿಪ್ರಾಯ ಬದಲಾಯಿಸುವ ಪರಿಸ್ಥಿತಿ ಮದರಾಸಿನಲ್ಲಿ ಒದಗಿತು. ಅಂದು ರಾತ್ರಿ ನಿಮ್ಮ ಸ್ನೇಹಿತರು ಕ್ಯಾಪ್ಟನ್ ನಿಸ್ಸಾರ್ ನನ್ನ ನೆರವಿಗೆ ಬರದಿದ್ದರೆ ನನ್ನ ಗತಿ ಏನಾಗುತ್ತಿತ್ತೋ ? "

ವಿಜಯ ಭೂಮಿಗಿಳಿದು ಹೋಗಿಬಿಟ್ಟಿದ್ದ. ಅವನ ಭೀಮಕಾಯ ಕುಬ್ಜಾವತಾರ ತಾಳಿಬಿಟ್ಟಿತ್ತು.

ಕಲ್ಪನಾ ಮಾತು ಮುಂದುವರಿಸಿ

" ನನಗೆ ಮಿಲ್ಟ್ರಿಯವರೆಂದರೆ ಮೊದಲಿನಿಂದಲೂ ಭಯ. ಅದಕ್ಕೇ ನಾಟ್ಯಶಾಲೆಯಲ್ಲಿ ನಾನು ಯಾರೊಂದಿಗೂ ಮಾತನಾಡುತ್ತಲೇ ಇರಲಿಲ್ಲ. ಅವರಿಗೆ ತಾಯಿ, ತಂಗಿಯರಿರುವುದಿಲ್ಲವೇ ? ಅವರ ತಾಯಿ, ತಂಗಿಯರನ್ನು ಯಾರಾದರೂ ಅಪಮಾನಗೊಳಿಸಿದರೆ ಅವರ ಮನಸ್ಸಿಗೆ ವ್ಯಥೆಯಾಗುವು ದಿಲ್ಲವೇ – ಮಿಲ್ಟ್ರಿ ಸೇರಿದಾಕ್ಷಣ ಮನುಷ್ಯತ್ವವನ್ನೇ ಕಳೆದುಕೊಳ್ಳಬೇಕೇ ? "

" ಮಿಲ್ಟ್ರಿಗೆ ಸೇರಿದವರೆಲ್ಲಾ ಕೆಟ್ಟವರಾಗಿರುವುದಿಲ್ಲ ಕಲ್ಪು. ಕ್ಯಾಪ್ಟನ್ ನಿಸ್ಸಾರ್ ಕೂಡ ಮಿಲ್ಟ್ರಿಯ ಅಧಿಕಾರಿಯಲ್ಲವೇ ? "

ಎಂದು ಡಾಕ್ಟರು ಪ್ರತಿವಾದ ಹೂಡಿದರು.

ವಿಜಯ ಧೈರ್ಯ ತಂದುಕೊಂಡು

" ಡಾಕ್ಟರ್ ಸಾಹೇಬರು ಹೇಳುತ್ತಿರುವುದು ಸತ್ಯ ಕಲ್ಪನಾದೇವಿ. ಮಿಲ್ಟ್ರಿಯಲ್ಲಿಯೂ ಯೋಗ್ಯರಿದ್ದಾರೆ – ಧರ್ಮಕ್ಕೆ ತಲೆ ಬಾಗುವವರಿದ್ದಾರೆ. ಮದರಾಸಿನಲ್ಲಿ ನಡೆದ ಪ್ರಕರಣ ನನ್ನ ಮನಸ್ಸಿಗೆ ತುಂಬ ನೋವನ್ನುಂಟು ಮಾಡಿದೆ. ಇದೊಂದು ಕೆಟ್ಟ ಕನಸು ಎಂದುಕೊಂಡು ಮರೆಯಲು ಪ್ರಯತ್ನ ಮಾಡಿ. ಇದಕ್ಕಾಗಿ ನೀವು ' ನಾಟ್ಯಕಲೆ ' ಯನ್ನಾಗಲಿ ಮಾನವ ವರ್ಗ

ವನ್ನಾಗಲಿ ದ್ವೇಷಿಸಲಾರಂಭಿಸಬೇಡಿ. ನನ್ನ ಇಬ್ಬರು ಮಿತ್ರರ ಪರವಾಗಿ ಕ್ಷಮೆ ಬೇಡುತ್ತೇನೆ – ನಿಮಗೆ ಬೇಸರವಾಗುವ ಹಾಗಿದ್ದರೆ ನಾನೂ ಇನ್ನು ಬರುವುದಿಲ್ಲ. ದೇವರು ನಿಮಗೆ ಆರೋಗ್ಯವನ್ನೂ ಶಾಂತಿಯನ್ನೂ ಕೊಡಲಿ."

ಎಂದು ಹೇಳಿದವನೇ ಅಲ್ಲಿ ನಿಲ್ಲದೆ ಹೊರಗೆ ಬಂದ. ಡಾಕ್ಟರು ಅವನ ಹಿಂದೆಯೇ ಬಂದು, ಅವನನ್ನು ಕಾಂಪೌಂಡಿನಲ್ಲಿ ಹಿಡಿದು ನಿಲ್ಲಿಸಿ

" ಕ್ಯಾಪ್ಟನ್ – ನನಗೊಂದು ಉಪಕಾರ ಮಾಡಿ " ಎಂದರು.

" ನಿಮಗೆ ನಾನೇನು ಉಪಕಾರ ಮಾಡಬಲ್ಲೆ ಸರ್ – ಸಾಕಷ್ಟು ಅಪ ಕಾರ ಮಾಡಿರುವೆನಲ್ಲಾ ! "

" ಮದರಾಸಿನ ಪ್ರಕರಣ ಕಲ್ಪನೆಯ ನರಗಳನ್ನು ಹಿಡಿದಲುಗಿಸಿವೆ ಕ್ಯಾಪ್ಟನ್ – ನಾಲ್ಕು ದಿವಸ ಕಳೆದರೆ ಅವಳ ಮನಃಸ್ಥಿತಿ ಸುಧಾರಿಸುತ್ತಿದೆ. ಈ ಮಧ್ಯೆ ನೀವು ನಿಮ್ಮ ಗೆಳೆಯರ ಮೇಲೆ ಯುದ್ಧಕ್ಕೆ ಹೊರಡಬಾರದೆಂದು ಪ್ರಾರ್ಥಿಸಿಕೊಳ್ಳುತ್ತೇನೆ. ನನಗೆ ಮಾತು ಕೊಡುವಿರಾ ? "

" ಆಗಲಿ ಸರ್. ನಿಮ್ಮ ಚಿತ್ತ. "

" ಇನ್ನೊಂದು ಮಾತು – ನೀವು ಪ್ರತಿನಿತ್ಯ ಇಲ್ಲಿಗೆ ಬಂದು ಕಲ್ಪನೆಯ ಯೋಗಕ್ಷೇಮ ವಿಚಾರಿಸಿಕೊಳ್ಳಬೇಕು. ನೀವು ಬಾರದೆ ನಿಂತರೆ ಅವಳ ಮನಸ್ಸಿನ ಸಂಶಯ, ಕ್ಲೇಶ. ಶಾಶ್ವತವಾಗಿ ನಿಂತು ಅವಳ ಜೀವನವನ್ನೇ ಹಾಳು ಮಾಡಿ ಬಿಡುತ್ತವೆ. "

" ತಾಯಿಯವರಿಗೂ ಬೇಸರವಾಗಿದೆ. ನಾನು ಬಂದು ನಿಮ್ಮಂಥ ಸಜ್ಜನರ ಮನಸ್ಸಿಗೇಕೆ ನೋವು ತರಲಿ ಸರ್. "

" ಇದರಲ್ಲಿ ನಿಮ್ಮದೇನು ತಪ್ಪಿದೆ ಕ್ಯಾಪ್ಟನ್. ನೀವು ಬನ್ನಿ – ಭಗ ವಂತನ ದಯೆಯಿಂದ ಎಲ್ಲವೂ ಸರಿ ಹೋಗುತ್ತದೆ. "

ಎಂದು ಡಾಕ್ಟರು ಹೇಳಿದರು.

## ೧೨

ನಾಲ್ಕೈದು ದಿನಗಳ ತರುವಾಯ ಸೋಹನ್‌ಸಿಂಗ್ ನಿಸ್ಸಾರ್ ಊರಿಗೆ ಹಿಂದಿರುಗಿದರು. ಅವರನ್ನು ಮಾತನಾಡಿಸುವ ಗೋಜಿಗೆ ವಿಜಯ ಹೋಗ

ಲಿಲ್ಲ; ಸೋಹನ್‌ಸಿಂಗನೇ ಮಾತನಾಡಿಸಿಕೊಂಡು ಬಂದರೂ ವಿಜಯ ನೇರ ವಾಗಿ ಉತ್ತರ ಕೊಡಲಿಲ್ಲ. ನಿಸ್ಸಾರ್, ಸೋಹನ್‌ಸಿಂಗ್ ಊಟಕ್ಕೆ ಹೋಗುವ ಮೊದಲೋ ಅವರು ಊಟ ಮುಗಿಸಿಕೊಂಡು ಬಂದ ಮೇಲೋ ವಿಜಯ ಊಟಕ್ಕೆ ಹೋಗುತ್ತಿದ್ದ. 'ಆಫೀಸರ್ಸ್ ಮೆಸ್' (Officers Mess) ನಲ್ಲಿಯೂ ಅವರ ಭೇಟಿಯಾಗುವುದು ದುಸ್ತರವಾಯಿತು.

ಒಂದು ವಾರ ಈ ಒಳಗುದಿ ಸಾಗಿತು. ಅದೇ ಸಂಜೆ ಹೊರಗೆ ಹೊರ ಟಿದ್ದ ವಿಜಯನನ್ನು ತೋಳು ಹಿಡಿದು ನಿಸ್ಸಾರ ನಿಲ್ಲಿಸಿ

"ವಿಜಯ – ನಿನ್ನಲ್ಲಿ ಸ್ವಲ್ಪ ಮಾತನಾಡಬೇಕಾಗಿದೆ" ಎಂದ.

"ನನಗೆ ಪುರಸತ್ತಿಲ್ಲ ನಿಸ್ಸಾರ್."

"ಇವತ್ತು ಪುರಸತ್ತು ಮಾಡಿಕೊಳ್ಳಲೇ ಬೇಕು. ನಾನು ನಿನ್ನ ಬಿಡುವ ಹಾಗಿಲ್ಲ."

"ಏನು ವಿಷಯ ಬೇಗ ಹೇಳಿ ಮುಗಿಸು."

"ಇಷ್ಟು ಬೇಗ ಹೇಳುವುದಕ್ಕಾಗುವುದಿಲ್ಲ. ನಡೆ. ಎಲ್ಲಿಗಾದರೂ ಹೋಗಿ ಸ್ವಲ್ಪ ಹೊತ್ತು ಕೂಡೋಣ."

ವಿಜಯ ವಿಮನಸ್ಕನಾಗಿ ಒಪ್ಪಿಕೊಂಡ.

ಇಬ್ಬರೂ ಜೀಪಿನಲ್ಲಿ ಬಂದು ಕಬ್ಬನ್ ಪಾರ್ಕಿನಲ್ಲಿ ಕಾರು ನಿಲ್ಲಿಸಿ ಹಸಿರು ಹಾಸಿನ ಮೇಲೆ ಕುಳಿತರು. ನಿಸ್ಸಾರ್ ಬಲವಂತ ಮಾಡಿ ವಿಜಯನಿಗೊಂದು ಸಿಗರೇಟ್ ಇತ್ತು ಅದಕ್ಕೆ ತಾನೇ ಕಡ್ಡಿ ಕೊರೆದು ಹಚ್ಚಿ, ತನ್ನ ಸಿಗರೇಟೂ ಹಚ್ಚಿಸಿಕೊಂಡು,

"ನಿನಗೇನಾಗಿದೆ ದೋಸ್ತ" ಎಂದು ಕೇಳಿದ.

"ಆರೋಗ್ಯವಾಗಿದ್ದೇನಲ್ಲಾ! ನನಗೇನಾಗಿದೆ!"

"ಮಾತು ಹಾರಿಸಿದರೆ ಪ್ರಯೋಜನವಿಲ್ಲ. ಮನಸ್ಸಿನಲ್ಲಿ ಏನಿದೆ ಹೇಳು ವಿಜಯ."

"ಎಲ್ಲಾ ಗೊತ್ತಿರುವ ವಿಷಯವೇ! ಅದನ್ನಾಡಿ ಏನು ಪ್ರಯೋಜನ ನಿಸ್ಸಾರ್."

"ಕಲ್ಪನಾದೇವಿ ಹೇಗಿದ್ದಾರೆ?"

" ಹಾಸಿಗೆ ಹಿಡಿದು ಮಲಗಿ ಬಿಟ್ಟಿದ್ದಾರೆ. ತುಂಬ ಹೆದರಿದ್ದಾರೆ. ನರ ದೌರ್ಬಲ್ಯವೆಂದು ಡಾಕ್ಟರು ಹೇಳಿದರು. "

" ನಡೆದ ವಿಷಯ ನಿನಗೆ ಗೊತ್ತಾಗಿದೆಯೋ ಇಲ್ಲವೋ ? "

" ಗೊತ್ತಾಗಿದೆ ನಿಸ್ಸಾರ್. ಪುನಃ ಆ ಪ್ರಸ್ತಾಪ ಮಾಡಬೇಡ. "

" ನಿನಗೆ ಗೊತ್ತಿಲ್ಲದಿರುವುದೂ ಒಂದೆರಡು ವಿಷಯಗಳಿವೆ – ದಯೆಯಿಟ್ಟು ನನಗಾಗಿ ಕೇಳು. "

" ನೀನಂದು ಮಹೋಪಕಾರ ಮಾಡಿದೆ ನಿಸ್ಸಾರ್ – ಅದಕ್ಕೆ ನಾನು ತುಂಬ ಋಣಿಯಾಗಿದ್ದೇನೆ. "

" ನನ್ನ ಉಪಕಾರದ ಮಾತು ಹಾಗಿರಲಿ – ಈಗ ನಿನ್ನಿಂದ ನನಗೆ ಉಪಕಾರವಾಗಬೇಕಾಗಿದೆ. "

" ನನ್ನಿಂದೇನು ಉಪಕಾರ ? "

" ನಾನು ಹೇಳುವುದನ್ನು ಶಾಂತಚಿತ್ತನಾಗಿ ಕೇಳುವುದು. "

" ಕೇಳುತ್ತೇನೆ ಹೇಳು. "

" ಆ ರಾತ್ರಿ ಕೀರ್ತಿಯವರ ರೂಮಿನಲ್ಲಿ ನಾವೆಲ್ಲಾ ಸೇರಿದ್ದೆವು. ಕೀರ್ತಿ ಜೀವಾನಂದಂ ಶಕ್ತಿಮೀರಿ ಸೇವಿಸಿ ಹಾಸಿಗೆಯ ಮೇಲೆ ಉರುಳಿದರು. ನಾನು ಸ್ವಲ್ಪ ಹತೋಟಿಯಲ್ಲಿಯೇ ಇದ್ದೆ. ಸೋಹನ್ ಬೊಗಳೆ ನಿನಗೆ ಗೊತ್ತೇಯಿದೆಯಲ್ಲ – ಎಷ್ಟು ತೆಗೆದುಕೊಂಡರೂ ನನಗೇನೂ ಆಗುವುದಿಲ್ಲ ಎನ್ನುತ್ತಲೇ ಕಂಠಪೂರ್ತಿ ಹೊಡೆದ. ಆ ಹೊತ್ತಿಗೆ ಸರಿಯಾಗಿ ಮಿಸ್. ಮೀರಾ ಬಂದು ನಮ್ಮನ್ನು ಕರೆದಳು........ ಉಳಿದ ಮಿಕ್ಕ ವಿಷಯ ನಿನಗೆ ಗೊತ್ತೇಯಿದೆ. "

" ಸರಿ. "

" ಉಳಿದದ್ದು ಕೇಳು. ಬೆಳಿಗ್ಗೆ ನಾನೂ ಸೋಹನ್ ಏಳುವ ಹೊತ್ತಿಗೆ ಹತ್ತು ಗಂಟೆಯಾಗಿತ್ತು. ಕಲ್ಪನಾದೇವಿ ಹೊರಟು ಹೋದರೆಂದು ತಿಳಿಯಿತು. ರಾತ್ರಿ ನಡೆದುದು ಒಂದೂ ಸೋಹನ್‌ನಿಗೆ ನೆನಪೇ ಇಲ್ಲ. ನಾನು ಎಲ್ಲವನ್ನೂ ಆದ್ಯಂತವಾಗಿ ವಿವರಿಸಿದಾಗ ಅವನು ಭೂಮಿಗಿಳಿದು ಹೋದ. ಹಣೆಹಣೆ ಚಚ್ಚಿಕೊಂಡು ' ನಿಸ್ಸಾರ್ – ನಾನು ಮಹಾ ನೀಚ – ಕುಡುಕ – ಮಿತ್ರಘಾತಕ – ಈ ಹಾಳು ಮುಖ ವಿಜಯನಿಗೆ ಹೇಗೆ ತೋರಿಸಲಿ – ನಾನಿನ್ನು ಬದುಕಿರಬಾರದು – ಈ ಹಾಳು ಕುಡಿತ ನನ್ನಿಂದ ಇನ್ನೂ ಏನೇನು

ಮಾಡಬಾರದ ಕೆಲಸ ಮಾಡಿಸುತ್ತೋ' ಎಂದು ಹೇಳಿ ಬೆಲ್ಟಿನಿಂದ ರಿವಾಲ್ವರ್ ಕೈಗೆತ್ತಿಕೊಂಡ. ಪಕ್ಕದಲ್ಲಿದ್ದ ಜೀವಾನಂದಂ ಅವರ ವಾಕಿಂಗ್ ಸ್ಟಿಕ್ ತೆಗೆದು ಕೊಂಡು ನಾನು ಬಲವಾಗಿ ಸೋಹನನ ಕೈಮೇಲೆ ಹೊಡೆದು ರಿವಾಲ್ವರ್ ಕೆಳಗೆ ಬೀಳಿಸಿ ಕೈಗೆ ತೆಗೆದುಕೊಂಡೆ. ನಮ್ಮಿಬ್ಬರಿಗೂ ಸಣ್ಣ ಯುದ್ಧವೇ ಆಯಿತು. ಸೋಹನನನ್ನು ಸಮಾಧಾನ ಮಾಡಬೇಕಾದರೆ ನನಗೆ ಸಾಕು ಸಾಕಾಯಿತು. ಅದಕ್ಕೇ ನಾನೂ ಅವನೂ ಕೂಡಲೆ ಊರಿಗೆ ಬರಲಿಲ್ಲ. ಅವನನ್ನು ಪಾಂಡೀಚೇರಿಗೆ ಕರೆದೊಯ್ದೆ – ಇಬ್ಬರೂ ಅರವಿಂದರ ಆಶ್ರಮ ದಲ್ಲಿಯೇ ಇದ್ದೆವು. ಶ್ರೀಮಾತೆಯವರ ಆಶೀರ್ವಾದ ಪಡೆದುಕೊಂಡು ಇತ್ತ ಬಂದೆವು. ಸೋಹನ್ ಈ ವಿಷಯ ತುಂಬ ಮನಸ್ಸಿಗೆ ಹಚ್ಚಿಕೊಂಡಿದ್ದಾನೆ. ನೀನೂ ಕಲ್ಪನಾದೇವಿ ದೊಡ್ಡ ಮನಸ್ಸು ಮಾಡಿ ಅವನನ್ನು ಕ್ಷಮಿಸಬೇಕು."

"ನಿಜ ಹೇಳುತ್ತಿರುವೆಯಾ ನಿಸ್ಸಾರ್ ?"

"ಖುದಾ ಮೇಲೆ ಆಣೆ ಮಾಡಿ ಹೇಳುತ್ತೇನೆ ವಿಜಯ – ನನ್ನ ಮಾತಿ ನಲ್ಲಿ ಎಳ್ಳಷ್ಟೂ ಸುಳ್ಳು ಬೆರೆತಿಲ್ಲ."

"ಕೀರ್ತಿಯ ನಾಟ್ಯಶಾಲೆಗೆ ಬರುವ ಚಿಟ್ಟೆಗಳಂತ ಕಲ್ಪನಾ, ಅಲ್ಲ ನಿಸ್ಸಾರ್. ಆಕೆ ತುಂಬ ಮರ್ಯಾದಸ್ಥೆ – ದೇವರಂಥ ತಂದೆ ತಾಯಿಗಳ ಮಡಿಲಲ್ಲಿ ಬೆಳೆದ ಮಗು. ಈ ಸುದ್ದಿ ಕಲ್ಪನಾದೇವಿಯ ತಂದೆ ನನಗೆ ಹೇಳಿ ದರು – ಕತ್ತೆತ್ತಿ ಅವರನ್ನೂ ಅವರ ಪತ್ನಿಯನ್ನೂ ನೋಡುವ ಧೈರ್ಯ ನನ ಗಾಗಲಿಲ್ಲ ನಿಸ್ಸಾರ್. ನನ್ನ ಹೃದಯದ ದೇವಿಗೆ ನನ್ನ ಪ್ರಾಣಮಿತ್ರರಿಂದ ಅಪಮಾನವಾಯಿತಲ್ಲಾ ಎಂದು ಮರುಗುದೆ."

"ನಿನ್ನನ್ನು ನಾನು ಆಕ್ಷೇಪಿಸುವುದಿಲ್ಲ ದೋಸ್ತ್. ಅಪರಾಧವಾಗಿದೆ ಯೆನ್ನುವುದರಲ್ಲಿ ಸಂಶಯವಿಲ್ಲ. ಅದನ್ನು ನೀನೂ - ನಾನೂ ಸರಿಪಡಿಸ ಬೇಕು. ಕಲ್ಪನಾದೇವಿಯ ಕಾಲು ಹಿಡಿದುಕೊಂಡು ಕ್ಷಮಾ ಯಾಚನೆ ಮಾಡಲು ಸಿದ್ಧನಾಗಿದ್ದಾನೆ ಸೋಹನ್. ಅವನು ಬಹಾದ್ದೂರ್ – ಅವನ ಧೈರ್ಯ, ಪರಾಕ್ರಮ, ತ್ಯಾಗಬುದ್ಧಿ ಬೇರೆ ಯಾರಿಗೂ ಬರಲು ಸಾಧ್ಯವಿಲ್ಲ. ಆದರೆ ಸ್ವಲ್ಪ ವ್ಯಸನಿ - ದುಡುಕು ಸ್ವಭಾವ - ದಡ್ಡ. ಸೋಹನ್ ಅವಿವೇ ಕಿಯೇ ವಿನಾ ಕೆಟ್ಟವನಲ್ಲ ವಿಜಯ್. ನಡೆ ಹೋಗೋಣ - ಇವತ್ತಾದರೂ ಮೂವ್ವರೂ ಕುಳಿತು ಒಟ್ಟಿಗೆ ಊಟ ಮಾಡೋಣ."

ಎಂದು ವಿಜಯನನ್ನೆಬ್ಬಿಸಿಕೊಂಡು ಹೋದ.

ಮರಣಶಿಕ್ಷೆ ನಿರೀಕ್ಷಿಸುವ ಖೈದಿಯಂತೆ ಸೋಹನ್‌ಸಿಂಗ್, ತನ್ನ ಗೆಳೆಯರ ದಾರಿ ನೋಡುತ್ತಿದ್ದ. ನಿಸ್ಸಾರ್ ವಿಜಯನ ಕೈ ಹಿಡಿದೆಳೆದು ಸೋಹನ್ ಸಿಂಗನ ಕೈಯಲ್ಲಿಟ್ಟ. ಸೋಹನ್ ವಿಜಯನನ್ನಪ್ಪಿ ಅವನ ಭುಜದ ಮೇಲೆ ಮಕ್ಕಳಂತೆ ಅಳುತ್ತ

" ನನ್ನನ್ನು ಕ್ಷಮಿಸು ವಿಜಯ್. ಮಹಾಪರಾಧ ಮಾಡಿದೆ. "

ಎಂದು ಬೇಡಿಕೊಂಡ.



೧೩

ಕಲ್ಪನೆಯ ಆರೋಗ್ಯ ಸಂಪೂರ್ಣವಾಗಿ ಸುಧಾರಿಸಿತು. ನಾಟ್ಯಾಭ್ಯಾಸ ಮಾಡಬೇಕೆಂಬ ಆಕಾಂಕ್ಷೆಯೂ ಅವಳಲ್ಲಿ ಮರುಕಳಿಸಿತು. ಅತ್ತಿಗೆಯ್ಯ ನೆರವು ಪಡೆದು ರಿಹರ್ಸಲ್ ಮಾಡುತ್ತಿರುವ ಹೊತ್ತಿಗೆ ಸರಿಯಾಗಿ ವಿಜಯ ಬಂದ. ಡಾಕ್ಟರು ಅವನನ್ನು ಒಳಗೇ ಕರೆದೊಯ್ದು ಕುಳ್ಳಿರಿಸಿದರು.

ಕಲ್ಪನಾ ರಿಹರ್ಸಲ್ ಮುಗಿಸಿಕೊಂಡು ವಿಜಯನಿದ್ದಲ್ಲಿಗೆ ಬಂದು

" ಕಲಿತುದನ್ನು ಮರೆಯಬಾರದೆಂದು ಅಭ್ಯಾಸ ಮಾಡಿಕೊಳ್ಳುತ್ತಿದ್ದೆ " ಎಂದಳು.

ವಿಜಯ ನಸುನಗುತ್ತ

" ನಾಟ್ಯಕಲೆಗೆ ಕೈಮುಗಿದು ಬಿಡುತ್ತೇನೆಂದಿರಿ. "

" ಡ್ಯಾಡಿ ನನ್ನ ಬಿಡಬೇಕಲ್ಲ. "

" ಅವರ ಬಲವಂತಕ್ಕೆ ಅಭ್ಯಾಸ ಮಾಡಿಕೊಳ್ಳುತ್ತಿರುವಿರಾ ? "

" ಹಾಗೇನಿಲ್ಲ – ನನಗೂ ಅಭ್ಯಾಸ ಮಾಡಿಕೊಳ್ಳಬೇಕೆನಿಸಿತು. "

" ನೀವೇ ಏಕೆ ಒಂದು ಮಂಡಳಿ ಕೂಡಿಸಿ ಪ್ರದರ್ಶನಗಳನ್ನು ಕೊಡಬಾರದು ಕಲ್ಪನಾದೇವಿ. "

" ವರ್ಷ - ಎರಡು ವರ್ಷ ತಪ್ಪೋ ನೆಪ್ಪೋ ಕಲಿತವರೆಲ್ಲಾ ಪ್ರದರ್ಶನ ಕೊಡಲಾರಂಭಿಸಿರುವುದರಿಂದಲೇ ನಾಟ್ಯಕಲೆ ಇಷ್ಟು ಕೀಳು ಮಟ್ಟಕ್ಕಿಳಿದಿರು

ವುದು. ನಾನು ಬಹಳ ಕಲಿಯಬೇಕು – ಬಹಳ ಸಾಧಿಸಬೇಕು ಕ್ಯಾಪ್ಟನ್."

"ಮದರಾಸಿನಲ್ಲಿ ನಡೆದುದಕ್ಕೆ ಕೀರ್ತಿಯವರೇನೂ ಜವಾಬ್ದಾರರಲ್ಲವಲ್ಲ. ಅವರಲ್ಲಿಯೇ ಏಕೆ ಶಿಷ್ಯ ಮುಂದುವರಿಸಬಾರದು."

"ಆ ಸಹವಾಸ ನೆನಸಿಕೊಂಡರೆ ನನ್ನ ಮೈಮೇಲೆ ಮುಳ್ಳೇಳುತ್ತದೆ. ಪ್ರಾಣ ಹೋದರೂ ನಾನವರ ನಾಟ್ಯಶಾಲೆಗೆ ಕಾಲಿಡುವುದಿಲ್ಲ– ಸಂಪ್ರದಾಯ ಬದ್ಧವಾಗಿ ಕಲಿಸುವವರು ಯಾರೂ ಸಿಕ್ಕುವುದಿಲ್ಲವೇ ?"

"ಆ ಪ್ರಪಂಚದ ಪರಿಚಯ ನನಗಿಲ್ಲ ಕಲ್ಪನಾದೇವಿ. ವಿಚಾರಿಸಿ ತಿಳಿಸುತ್ತೇನೆ."

"ಆನಂದರಾಯರು ಕಲಾಭಿಮಾನಿಗಳು. ಅವರಿಗೆ ಗೊತ್ತಿರುತ್ತದೆ. ಅವರನ್ನು ಇತ್ತ ಬರಮಾಡುವಿರಾ ?"

"ಅಗತ್ಯವಾಗಿ ಆಗಲಿ" ಎಂದು ಹೇಳಿದ.

ಎಲ್ಲರೂ ಡ್ರಾಯಿಂಗ್ ರೂಮಿಗೆ ಬಂದು ಕುಳಿತರು. ಕಲ್ಯಾಣಮ್ಮನವರೂ ಬಂದರು. ಆ ಸಮಯ ಸಾಧಿಸಿ ವಿಜಯ ಸೋಹನ್‌ಸಿಂಗನ ಕ್ಷಮಾ ಯಾಚನೆಯ ವಿಷಯ ತಿಳಿಸಿದ.

"ನಾನು ಹೇಳಲಿಲ್ಲವೇ ಡಾರ್ಲಿಂಗ್ - ಮಿಲ್ಟ್ರಿಯಲ್ಲಿಯೂ ಒಳ್ಳೆಯವರಿದ್ದಾರೆ."

ಎಂದು ಡಾಕ್ಟರು ಧ್ವನಿಗೂಡಿಸಿದರು.

"ಹೋಗಲಿ ಬಿಡಿ. ಕಳೆದು ಹೋದ ಮಾತು ಈಗೇತಕ್ಕೆ ? ನನಗೆ ಯಾರ ಮೇಲೂ ದ್ವೇಷವಿಲ್ಲ."

ಎಂದು ಕಲ್ಪನಾ ಹೇಳಿದಳು.

ಮಾರನೆಯ ದಿನವೇ ವಿಜಯ ಆನಂದರಾಯರನ್ನು ಡಾಕ್ಟರ್ ಮನೆಗೆ ಕರೆದುಕೊಂಡು ಬಂದ.

ಆನಂದರಾಯರು ರಾಮಸ್ವಾಮಪ್ಪ, ಜಯಮ್ಮನ ವಿಷಯ ತಿಳಿಸಿ

"ಅವರಲ್ಲಿ ಕಲಿತರೆ ನಿಮಗೆ ಸಂಪ್ರದಾಯಬದ್ಧವಾದ ವಿದ್ಯೆ ಬರುತ್ತದೆ ನೋಡಿ – ಆದರೆ ಅವರು ಪಾಠಕ್ಕೆ ಇಲ್ಲಿಯವರೆಗೆ ಬರುತ್ತಾರೋ ಇಲ್ಲವೋ ?"

ಎಂದು ಅನುಮಾನ ವ್ಯಕ್ತಗೊಳಿಸಿದರು.

"ಅವರು ಬಂದು ಹೋಗುವುದಕ್ಕೆ ನಾನು ಕಾರಿನ ವ್ಯವಸ್ಥೆ ಮಾಡು

ತ್ತೀನೆ ಆನಂದರಾಯರೇ. ತಿಂಗಳಿಗೆ ಅವರಿಗೆಷ್ಟು ಕೊಡಬೇಕು. "

ಎಂದು ಡಾಕ್ಟರು ಕೇಳಿದರು.

" ಅವರು ತುಂಬ ಬಡವರು ಸರ್. ನೀವು ಏನು ಕೊಟ್ಟರೂ ತೆಗೆದು ಕೊಳ್ಳುತ್ತಾರೆ. "

" ಕಲಾವಿದರು ಬಡತನದಲ್ಲಿದ್ದಾರೆಂದು ಅವರನ್ನು ಸುಲಿಯುವುದು ಯಾವ ನ್ಯಾಯ ರಾಯರೇ. ನಾನು ಕೊಡುವ ಪ್ರತಿಫಲ ಅವರ ವಿದ್ಯೆಗೇ ವಿನಾ ಅವರ ಬಡತನಕ್ಕಲ್ಲ. ತಿಂಗಳಿಗೆ ನೂರು ರೂಪಾಯಿ ಕೊಟ್ಟರೆ ಕಡಿಮೆ ಯಾಗಬಹುದೋ ? "

" ಇಲ್ಲ ಸರ್. ಅವರು ಸಂತೋಷವಾಗಿ ಒಪ್ಪಿಕೊಳ್ಳುತ್ತಾರೆ. "

" ಹಾಗೇ ಮೃದಂಗಕ್ಕೆ ಒಬ್ಬರನ್ನು ಗೊತ್ತು ಮಾಡಬೇಕು ರಾಯರೇ. ರಾಮಸ್ವಾಮಪ್ಪನವರೇ ಒಬ್ಬರನ್ನು ಗೊತ್ತುಮಾಡಿದರೆ ಒಳ್ಳೆಯದು. ಮೃದಂಗ ದವರಿಗೆ ತಿಂಗಳಿಗೆ ಐವತ್ತು ರೂಪಾಯಿ ಗೊತ್ತು ಮಾಡಿ ಬಿಡಿ. ಒಳ್ಳೆಯ ದಿವಸ ನೋಡಿ ಪಾಠ ಆರಂಭಿಸಲಿ. "

ಎಂದು ಹೇಳಿದರು.

ಕೀರ್ತಿಯಿಂದ ರಾಮಸ್ವಾಮಪ್ಪನಿಗಾಗಿದ್ದ ಅನ್ಯಾಯ ಸರಿಪಡಿಸಲು ಈ ಅವಕಾಶ ಸಿಕ್ಕಿದುದಕ್ಕೆ ಅನಂದರಾಯರು ಸಂತೋಷಪಟ್ಟುಕೊಂಡರು.

ಆನಂದರಾಯರು ರಾಮಸ್ವಾಮಪ್ಪನನ್ನು ಒಪ್ಪಿಸಿಕೊಂಡು ಬಂದು

" ಭಾನುವಾರ ದಿನ ಚೆನ್ನಾಗಿದೆ. ಅವತ್ತು ಪಾಠ ಆರಂಭಿಸಬಹುದು " ಎಂದು ಹೇಳಿದರು.

ಭಾನುವಾರ ಡಾಕ್ಟರ ಮನೆಯಲ್ಲಿ ಪೂಜೆ ಪುರಸ್ಕಾರಾದಿಗಳಾದವು. ಪುರೋಹಿತರೊಬ್ಬರನ್ನು ಬರಮಾಡಿಕೊಂಡು ಅವರ ಕೈಯಲ್ಲಿ ರುದ್ರಾಭಿಷೇಕ, ನವಗ್ರಹ ಪೂಜೆಗಳನ್ನು ಕಲ್ಯಾಣಮ್ಮನವರು ಮಾಡಿಸಿದರು.

ವಿಜಯ, ಆನಂದರಾಯರು ಇಬ್ಬರೂ ಅಂದು ಡಾಕ್ಟರ ಮನೆಯಲ್ಲಿಯೇ ಊಟ ಮಾಡಬೇಕಾಯಿತು. ಸಂಜೆ ಗೋಧೂಳಿ ಲಗ್ನದಲ್ಲಿ ರಾಮಸ್ವಾಮಪ್ಪ ಪಾಠವನ್ನುಪಕ್ರಮಿಸಿದರು.

## ೧೪

ರಾಮಸ್ವಾಮಪ್ಪ ಕಲ್ಪನೆಗೆ ಪಾಠ ಹೇಳುತ್ತಿರುವ ಸಂಗತಿ ಕೀರ್ತಿಯ ಕಿವಿ ಮುಟ್ಟಲು ತಡವಾಗಲಿಲ್ಲ. ಅವನ ಹೊಲಸು ಬಾಯಿ ಊರಗಲವಾಯಿತು.

ರಾಮಸ್ವಾಮಪ್ಪನಿಗೆ ಈ ಪಾಠ ಸಿಕ್ಕಲು ಆನಂದರಾಯರು ಕಾರಣವೆಂಬುದು ತಿಳಿದ ಮೇಲಂತೂ ಕೀರ್ತಿ ಇಂಗು ತಿಂದ ಕಪಿಯಾದ. ಸಿಕ್ಕಿದವರೆದುರಿಗೆ ಕಲ್ಪನೆಯನ್ನು ನಿಂದಿಸುವುದು ಅವನ ಚಾಳಿಯಾಯಿತು. ಸೋಹನ್‌ಸಿಂಗ್ ಸೋದರಿಯರಿಗೂ, ಚಂದ್ರಮುಖಿಗೂ ಇಷ್ಟೇ ಬೇಕಾಗಿತ್ತು. ಅವರ ಬಾಯಿಗೂ ತಡೆಯಿಲ್ಲವಾಯಿತು.

ವಿಜಯನೆದುರಿಗೆ ಬಾಯಿ ಬಿಡಲು ಯಾರಿಗೂ ಧೈರ್ಯವಾಗಲಿಲ್ಲ.

ಒಂದು ದಿನ ಕೀರ್ತಿಯ ಮನೆಯಲ್ಲಿ ಎಲ್ಲರೂ ಕುಳಿತಿದ್ದಾಗ ತಾರಾದೇವಿ ಮೆಲ್ಲಗೆ ಕಲ್ಪನೆಯ ಮಾತು ತೆಗೆದಳು.

" ಓ ! ಅವಳ ಹೆಸರೇಕೆತ್ತುವೆ ತಾರಾ. ಅವಿವೇಕಿ ನನ್ನ ಮೇಲೇ ಸ್ಪರ್ಧೆಗೆ ನಿಂತಿದ್ದಾಳೆ. ರಾಮಸ್ವಾಮಪ್ಪನಲ್ಲಿ ಪಾಠ ! ಅವರ ವಿದ್ಯೆ ನಮ್ಮ ಅಜ್ಜನ ಕಾಲದ್ದು !! ಆ ನಾಟ್ಯ ಕಲಿತು ಅವಳು ಪ್ರದರ್ಶನ ಕೊಡುವಳೇನೋ ? "

" ನಾವೂ ಟಿಕೆಟ್ ಕೊಂಡು ಪ್ರದರ್ಶನ ನೋಡುವುದಕ್ಕೆ ಹೋಗೋಣ ಕೀರ್ತಿಯವರೇ. "

" ಏಕೆ ! ರಂಗದ ಮೇಲೆ ಬೀಳುವ ಕಲ್ಲಿನೇಟಿಗೆ ನೀವೂ ಸಿಕ್ಕಬೇಕೆಂತಲೋ ? "

ಇದೇ ಧಾಟಿಯಲ್ಲಿ ಮಾತು ಮುಂದುವರಿದಿರಲು ಸೋಹನ್‌ಸಿಂಗ್ ಮಧ್ಯೆ ಬಾಯಿ ಹಾಕಿ

" ನಿಮ್ಮಂಥ ನುರಿತ ಕಲಾವಿದರು ಕಲ್ಪನಾದೇವಿಯ ಸ್ಪರ್ಧೆಗೆ ಹೆದರಬಾರದು ಕೀರ್ತಿಯವರೇ " ಎಂದ.

" ಹೆದರುವುದು – ನಾನೇ ಹೆದರುವುದು ? ವಿಲಾಯತಿಯಲ್ಲಿ ಉದಯಶಂಕರ್ ಗಳಿಸಿಕೊಂಡಿದ್ದ ಯಶಸ್ಸನ್ನು ಅಳಿಸಿಬಂದಿರುವವನು ಈ ಹುಡುಗಿಯ

ಸ್ಪರ್ಧೆಗೆ ಹೆದರುತ್ತೀನೆಯೇ ? ”

“ ಹಾಗಾದರೆ ಪದೇಪದೇ ಅವರ ಮಾತೇಕೆ ಆಡುವಿರಿ. ನಿಮ್ಮ ಮಂಡಳಿಯವರೂ ಬೇರೆಯವರನ್ನು ನಿಂದಿಸುವುದು ತರವಲ್ಲ. ”

“ ನೀವೂ ಕಲ್ಪನೆಯ ಪಕ್ಷ ಹಿಡಿದಿರುವಂತೆ ಕಾಣುತ್ತದೆ ಸೋಹನ್ ಸಿಂಗಜೀ. ”

“ ನಾನು ಯಾರ ಪಕ್ಷವನ್ನೂ ವಹಿಸಿಲ್ಲ. ಯಾವ ಗೋಜಿಗೂ ಹೋಗದಿರುವ ಹೆಣ್ಣುಮಗಳನ್ನು ನೀವು ನಿಂದಿಸುವುದನ್ನು ಕೇಳಲಾರೆ. ”

“ ಹೋಗಲಿ ಬಿಡಿ ಸೋಹನ್‌ಸಿಂಗ್, ಯಾವುದೋ ಮಾತು ಕಟ್ಟಿಕೊಂಡು ನಾವೇಕೆ ಜಗಳ ಕಾಯಬೇಕು. ” ಎಂದು ಕೀರ್ತಿ ಸೂಚಿಸಿದ.

ಸೋಹನ್‌ಸಿಂಗ್ ಹಾಕಿದ ನಿರ್ಬಂಧ ಕೀರ್ತಿಯನ್ನು ಮತ್ತಷ್ಟು ಕೆರಳಿಸಿತು. ಕಲ್ಪನೆಯ ಬಗ್ಗೆ ಅವನ ಅಪಪ್ರಚಾರ ಮತ್ತಷ್ಟು ಸೂಕ್ಷ್ಮ ಮಾರ್ಗವನ್ನನುಸರಿಸಿತು.

ವಿಜಯನ ಕಿವಿಗೆ ಒಂದೊಂದು ಮಾತು ಆಗಾಗ್ಗೆ ಬೀಳುತ್ತಿತ್ತು. ಅವುಗಳನ್ನು ಕಲ್ಪನೆಗೆ ತಿಳಿಸಿ ಅವಳ ಮನಸ್ಸಿಗೆ ವೃಥಾ ನೋವುಂಟು ಮಾಡಲು ಅವನು ಇಷ್ಟಪಡಲಿಲ್ಲ.

ಕೀರ್ತಿ ಮತ್ತೆ ಅಖಿಲ ಭಾರತ ಪ್ರವಾಸ ಏರ್ಪಡಿಸಿಕೊಂಡು ಮಂಡಳಿಯೊಂದಿಗೆ ಹೊರಟ. ಅವನ ಅಪಪ್ರಚಾರಕ್ಕೆ ತಾತ್ಕಾಲಿಕ ವಿರಾಮ ದೊರೆತಂತಾಯಿತು.

ಕಲ್ಪನೆಯ ಶ್ರದ್ಧೆ ಕಂಡು ರಾಮಸ್ವಾಮಪ್ಪನ ಉತ್ಸಾಹವಿಮ್ಮಡಿಸಿತು. ಪಾಠಗಳಲ್ಲಿ ಅವಳು ತೋರುತ್ತಿದ್ದ ಪ್ರಗತಿ ಕಂಡು ಆನಂದರಾಯರಿಗೆ

“ ಈ ತಾಯಿಗೆ ನಾಟ್ಯದೇವಿ ಒಲಿದಿದ್ದಾಳೆ ಸ್ವಾಮಿ ” ಎಂದು ತಿಳಿಸಿದ.

ಜುಲೈ ತಿಂಗಳು ಬಂದಿತು. ಕಲ್ಪನೆಯ ಕಾಲೇಜ್ ಬಾಗಿಲು ತೆಗೆಯಿತು. ‘ ಕಾಲೇಜಿಗೆ ಹೋಗಲೇ ’ ಎಂದು ಕಲ್ಪನಾ ಯೋಚಿಸಿ ‘ ಕಾಲೇಜ್ ಕಟ್ಟಿಕೊಂಡರೆ ನಾಟ್ಯಾಭ್ಯಾಸ ನಿಂತು ಹೋಗುತ್ತದೆ ’ ಎಂದುಕೊಂಡು ಕಾಲೇಜಿಗೆ ಶರಣು ಹೊಡೆದು ಬಿಟ್ಟಳು.

ರಾಮಸ್ವಾಮಪ್ಪ, ಜಯಮ್ಮ ತಮ್ಮ ಭಂಡಾರದಿಂದ ಅಪರೂಪ ವರ್ಣಗಳು, ಜಾವಡಿಗಳು, ಪದಗಳನ್ನು ತೆಗೆಯತೊಡಗಿದರು. ಅಗಸ್ತ್ಯಸಮುದ್ರಾ

ಪ್ರೋಕ್ಷನ ತೆಗೆದುಕೊಂಡಂತೆ ಕಲ್ಪನಾ ಅವುಗಳನ್ನು ಜೀರ್ಣಿಸಿಕೊಳ್ಳತೊಡಗಿದಳು.

ಐದು ತಿಂಗಳು ಕಳೆಯಿತು. ಒಂದು ದಿನ ರಾಮಸ್ವಾಮಪ್ಪ
"ಅಮ್ಮಯ್ಯ – ನೀವೇಕೆ ಒಂದು ಪ್ರದರ್ಶನ ಕೊಡಬಾರದು?"
ಎಂದು ಕೇಳಿದ. ಕಲ್ಪನೆಗೆ ಪ್ರಶ್ನೆ ಸೋಜಿಗವುಂಟು ಮಾಡಿತು.

"ನನಗೇನು ಬರುತ್ತದೆ ಗುರುಗಳೇ. ಪ್ರದರ್ಶನ ಕೊಡುವಷ್ಟು ನಾನು ಪಂಡಿತೆಯಾಗಿ ಬಿಟ್ಟಿನೇ?"

"ಪ್ರದರ್ಶನ ಕೊಟ್ಟು ನೋಡಿ – ಆಗ ನಿಮಗೇ ತಿಳಿಯುತ್ತದೆ."

"ಅದಕ್ಕೆ ತುಂಬ ಸಲಕರಣೆ ಬೇಕು. ಮಂಡಳಿ ಬೇಕು - ನಾಟ್ಯ ರೂಪಕಗಳನ್ನು ಕೂಡಿಸಬೇಕು."

"ಅವುಗಳೆಲ್ಲಾ ಈ ಕಾಲದ ಥಳಕಾಯಿತು ತಾಯಿ. ನಿಮ್ಮದೇ ತನಿ ಕಛೇರಿ ( Solo Performance ) ಯಾಗಲಿ. ಮಧ್ಯೆಮಧ್ಯೆ ನಿಮಗೆ ಸ್ವಲ್ಪ ವಿರಾಮ ಕೊಡುವುದಕ್ಕೆ ನಮ್ಮಕ್ಕನ ಶಿಷ್ಯೆಯರು ಭಾಮ, ಚಿನ್ನ ಕೆಲವು ಅಭಿನಯ ಹಿಡಿಯಲಿ. ಅವರಿಗೂ ಚೆನ್ನಾಗಿ ಪಾಠವಾಗಿದೆ."

"ನಾಟ್ಯಮೇಳಕ್ಕೇನು ಮಾಡಲಿ ಗುರುಗಳೇ."

"ಹೆಚ್ಚು ವಾದ್ಯಗಳ ಗಲಾಟೆ ಭರತನಾಟ್ಯಕ್ಕಲ್ಲ ತಾಯೀ. ವೆಂಕಟರಾಮಯ್ಯನವರ ಪಿಟೀಲು, ರಾಜಾಚಾರಿ ಮೃದಂಗ, ನನ್ನ ಕಂಜೀರ, ಇವುಗಳ ಜತೆಗೆ ವೀಣೆ, ಗೋಟುವಾದ್ಯ ಕೂಡಿಸಿಕೊಂಡರೆ ಆಯಿತು. ಅದರ ಜವಾಬ್ದಾರಿ ನನಗಿರಲಿ. ವ್ಯವಸ್ಥೆ ವಿಷಯ ಆನಂದರಾಯರು ನೋಡಿಕೊಳ್ಳುತ್ತಾರೆ."

ಕಲ್ಪನಾ ಎದ್ದು ಹೋಗಿ ತಂದೆಯವರನ್ನು ಕರೆದುಕೊಂಡು ಬಂದಳು. ರಾಮಸ್ವಾಮಪ್ಪ ಅವರಿಗೆ ಪ್ರದರ್ಶನದ ವಿಷಯ ವಿವರಿಸಿದ.

"ಪ್ರದರ್ಶನ ತಡವಾಗಿಯಾದರೂ ಚಿಂತೆಯಿಲ್ಲ ರಾಮಸ್ವಾಮಪ್ಪನವರೇ. ಆಭಾಸವಾಗಬಾರದು."

"ಇಲ್ಲ ಸ್ವಾಮಿ. ನನಗೆ ಧೈರ್ಯವಿಲ್ಲದಿದ್ದರೆ ಈ ವಿಷಯ ನಾನೇ ಪ್ರಸ್ತಾಪಿಸುತ್ತಿದ್ದೆನೇ?" ಎಂದು ಹೇಳಿದ.

ಡಾಕ್ಟರು 'ವಿಚಾರ ಮಾಡಿ ತಿಳಿಸುತ್ತೇನೆ' ಎಂದು ಹೇಳಿದರು. ಮಾರನೆಯ ದಿನ ಆನಂದರಾಯರು, ವಿಜಯ ಇಬ್ಬರಲ್ಲಿಯೂ ವಿಷಯ ಪ್ರಸ್ತಾಪಿಸಿದರು. ಇಬ್ಬರೂ ರಾಮಸ್ವಾಮಪ್ಪನ ಸಲಹೆಗೆ ಸಂಪೂರ್ಣ ಅನುಮೋದನೆಯನ್ನಿತ್ತರು.

ಕ್ರಿಸ್‌ಮಸ್ ರಜಾ ಕಾಲದಲ್ಲಿ ಟೌನ್ ಹಾಲಿನಲ್ಲಿ ಪ್ರದರ್ಶನ ಕೊಡತಕ್ಕದೆಂದು ನಿರ್ಧಾರವಾಯಿತು.

ಆನಂದರಾಯರು ಥಿಯೇಟರು, ಪ್ರಸಾರ ಭಾಗ ವಹಿಸಿಕೊಂಡರು. ರಾಮಸ್ವಾಮಪ್ಪ ವಾದ್ಯಮೇಳ ಕೂಡಿಸಲು ಒಪ್ಪಿಕೊಂಡ. ಕಲ್ಪನಾ, ಸುಂದರಿ ವಸ್ತ್ರಭೂಷಣಗಳನ್ನು ಹೊಂದಿಸತೊಡಗಿದರು.

೧೫

ಡಿಸೆಂಬರ್ ಇಪ್ಪತ್ತಾರಕ್ಕೆ ಪ್ರದರ್ಶನ ನಿಶ್ಚಯವಾಯಿತು.

ಕಲ್ಪನೆಯ ಸಲಹೆಯಂತೆ ಆನಂದರಾಯರು ಸುಂದರವಾಗಿ 'ಕಾರ್ಯಕ್ರಮ' ಅಚ್ಚು ಹಾಕಿಸಿದ್ದರು. ಅದರಲ್ಲಿ ಪ್ರಧಾನಸ್ಥಾನದಲ್ಲಿ ರಾಮಸ್ವಾಮಪ್ಪನ ಭಾವಚಿತ್ರ. 'ನಾಟ್ಯಾಚಾರ್ಯ ರಾಮಸ್ವಾಮಪ್ಪನವರ ಶಿಷ್ಯೆಯಾದ ಕಲ್ಪನಾದೇವಿಯ ಭರತನಾಟ್ಯ ಪ್ರದರ್ಶನ' ಎಂದು ಉಲ್ಲೇಖಿಸಲಾಗಿತ್ತು. ಕುಂಜುಮಣಿ, ಕೀರ್ತಿಗೆ ಕೃತಜ್ಞತೆ ಸೂಚಿಸಲಾಗಿತ್ತು.

ರಾಮಸ್ವಾಮಪ್ಪನ ಆನಂದಕ್ಕೆ ಮೇರೆಯೇ ಇರಲಿಲ್ಲ.

ಪ್ರದರ್ಶನ ಗಂಭೀರವಾಗಿ, ಯಾವ ಆಡಂಬರವೂ ಇಲ್ಲದೆ ಸಾಗಿತು. ಭರತನಾಟ್ಯದ ಎಲ್ಲಾ ಅಂಗಗಳಿಗೂ ಸ್ಥಾನ ಕೊಡಲಾಗಿತ್ತು. ವರ್ಣ, ಸ್ವರಜತಿ, ತಿಲ್ಲಾನ, ಪದ, ಜಾವಡಿ, ಅಷ್ಟಪದಿಗಳ ಪ್ರದರ್ಶನವಾಯಿತು.

ಸಾವಿರಾರು ರೂಪಾಯಿ ವರಮಾನ ಬರದಿದ್ದರೂ ಸಭಾಮಂದಿರ ತುಂಬಿತ್ತು. ಖರ್ಚು ಕಳೆದು ಉಳಿದ ನಾಲ್ಕುನೂರು ರೂಪಾಯಿಗಳನ್ನು ಕಲ್ಪನಾ ಗುರುಗಳಿಗೊಪ್ಪಿಸಿ ನಮಸ್ಕರಿಸಿದಳು.

ಪತ್ರಿಕೆಗಳು ಕಲ್ಪನಾದೇವಿಯ ಪ್ರದರ್ಶನವನ್ನು ಮುಕ್ತಕಂಠದಿಂದ ಹೊಗಳಿದವು. 'ಕಲಾವಿದ' ಪತ್ರಿಕೆಯಲ್ಲಿ ಪ್ರಕಟವಾದ ವಿಮರ್ಶೆ ಕಲ್ಪನೆಗೆ ಹೆಚ್ಚಿನ ಸಂತೋಷವನ್ನುಂಟು ಮಾಡಿತು.

ಸಂಪಾದಕರು ಪ್ರದರ್ಶನದ ಪ್ರತಿಯೊಂದು ವಿಷಯವನ್ನೂ ವರ್ಣಿಸಿ "ಓರಿಯೆಂಟಲ್ ಡ್ಯಾನ್ಸ್ (Oriental Dance) ಎನ್ನುವ ಹೆಸರಿಟ್ಟು ನಾಟ್ಯ ಮಂಡಳಿಯವರು ತೋರಿಸುತ್ತಿದ್ದ ಕಲಬೆರಿಕೆ ನಾಟ್ಯ ನೋಡಿ ನೋಡಿ ನಮಗೆ ಬೇಸರವಾಗಿತ್ತು. ಭಾರತೀಯ ಕಲೆಗಳಲ್ಲಿ ಶ್ರೇಷ್ಠ ಕಲೆಯಾದ ನಾಟ್ಯಕಲೆಗೆ ಬಂದಿರುವ ದುರ್ಗತಿ ಯಾವದಕ್ಕೂ ಬಂದಿಲ್ಲ ವೆನ್ನಬಹುದು. ಶುದ್ಧ ಸಂಪ್ರದಾಯದ ರೀತಿಯಲ್ಲಿ ಕಲಾಪ್ರದರ್ಶನ ಮಾಡ ಬಲ್ಲ ಪ್ರತಿಭಾಶಾಲಿಗಳು ಯಾರಾದರೂ ಬಂದಾರೆ ಎಂದು ನಾವು ಚಾತಕಪಕ್ಷಿ ಯಂತೆ ಕಾಯುತ್ತಿದ್ದೆವು. ಕಲ್ಪನಾದೇವಿ – ಕಲಾದೇವಿ ನಮ್ಮ ಕಣ್ಮನಗಳಿಗೆ ಮೊನ್ನೆ ಭಾನುವಾರ ಹಬ್ಬವನ್ನುಂಟು ಮಾಡಿದರು. ಗಾಂಭೀರ್ಯ ಭಕ್ತಿ ಗಳೊಂದಿಗೆ ಸಮವಾಗಿ ಬೆರೆತ ಶುದ್ಧ ಭರತನಾಟ್ಯ ನೋಡುವ ಸೌಭಾಗ್ಯ ನಮ್ಮದಾಯಿತು.

ಒಂದು ಕಾಲದಲ್ಲಿ 'ಭರತನಾಟ್ಯ' ಕರ್ನಾಟಕದಲ್ಲಿ ವಿಶೇಷ ಪ್ರವರ್ಧ ಮಾನ ಸ್ಥಿತಿಯಲ್ಲಿದ್ದಿತೆಂಬುದು ನಿರ್ವಿವಾದ. ಆದರೆ ಈಚೆಗೆ ಈ ಕಲೆ ಮೂಲೆ ಗುಂಪಾಗಿದೆ. ತಮಿಳು ನಾಡಿನಲ್ಲಿ ಇಂದು 'ಭರತನಾಟ್ಯ' ಕ್ಕೆ ವಿಶೇಷ ಪ್ರಾಧಾನ್ಯ.

'ಭರತನಾಟ್ಯ' ದಲ್ಲಿ ವೀರ ರಸಕ್ಕೆ ಪ್ರಾಧಾನ್ಯವಿಲ್ಲ. ಶೃಂಗಾರ, ಕರುಣ, ಶೋಕ ರಸಗಳೇ ಅದರ ಜೀವ ರಸಗಳು. ಕಥಾಕಳಿಯ ಪ್ರಭಾವ ದಿಂದ ಇಂದು ತಮಿಳು ನಾಡಿನ 'ಭರತ ನಾಟ್ಯ' ದಲ್ಲಿ ವೀರ ರಸವೂ ತಲೆ ಹಾಕಿದೆ. ಆದ್ದರಿಂದ ಕರ್ನಾಟಕ ಸಂಪ್ರದಾಯವನ್ನೇ ನಾವು 'ಶುದ್ಧ ಭರತ ನಾಟ್ಯ' ವೆಂದು ಪರಿಗಣಿಸಬೇಕಾಗಿದೆ. ಗತವಾಗುತ್ತಲಿರುವ ಕರ್ನಾಟಕ ಸಂಪ್ರದಾಯವನ್ನು ಪುನರುದ್ಧಾರ ಮಾಡಿ ಕಲ್ಪನಾದೇವಿಯವರು ನಾಡಿಗೆ ಮಹೋಪಕಾರ ಮಾಡಿದ್ದಾರೆ.

ಭಾರತದ ಕಲೆಯ ವೈಶಿಷ್ಟ್ಯ ಸಾರುವುದಕ್ಕೆ ಹೊರದೇಶಗಳಿಗೆ ಕಲ್ಪನಾ ದೇವಿಯರು ಹೋಗಬೇಕು. ಇವರ ಪ್ರದರ್ಶನ ಭಾರತಕ್ಕೆ ಸಹಸ್ರಾರು ಅಭಿ

ಪಾಸಿಗಳನ್ನು ದೊರಕಿಸಿಕೊಡುವುದರಲ್ಲಿ ಸಂದೇಹವಿಲ್ಲ."

ಎಂದು ಬರೆದಿದ್ದರು.

"ನಮ್ಮ ಜನ ಅಲ್ಪತೃಪ್ತರು. ನನ್ನ ಕಲೆಯನ್ನೇ ದೊಡ್ಡದೆಂದು ಭಾವಿಸಿಕೊಂಡಿದ್ದಾರೆ."

ಎಂದು ಕಲ್ಪನಾ ತಂದೆಗೆ ಹೇಳಿದಳು.

ಪ್ರದರ್ಶನದ ಪೂರ್ವಸಿದ್ಧತೆ, ಪ್ರದರ್ಶನ ಕಲ್ಪನೆಗೆ ತುಂಬಾ ಆಯಾಸವನ್ನುಂಟುಮಾಡಿದ್ದವು. ನಾಲ್ಕು ದಿನ 'ರಿಹರ್ಸಲ್' ನಿಲ್ಲಿಸಿ ವಿಶ್ರಾಂತಿ ಪಡೆಯಬೇಕೆಂದು ಡಾಕ್ಟರು ವಿಧಾಯಕ ಮಾಡಿದ್ದರು.

ಒಂದು ದಿನ ಕಲ್ಪನಾ, ವಿಜಯ ಡ್ರೈವ್ ಹೊರಟರು. ಕಬ್ಬನ್‌ಪಾರ್ಕಿನಲ್ಲಿದ್ದ ಕಾರಂಜಿಯ ಬಳಿ ಕಾರು ನಿಲ್ಲಿಸಿ, ಕಾರಂಜಿಯ ವರ್ಣ ವೈಖರಿಯನ್ನು ನೋಡುತ್ತ ಕುಳಿತರು. ಕಲ್ಪನಾ ಏನೋ ಯೋಚಿಸುತ್ತ ಮೆಲ್ಲನೆ ಕೇಳಿದಳು:

"ನಿಜವಾಗಿ ಹೇಳಿ ಕ್ಯಾಪ್ಟನ್ ವಿಜಯ್, ನನ್ನ ಪ್ರದರ್ಶನ ನಿಮ್ಮ ಮನಸ್ಸಿಗೆ ಬಂದಿತೇ?"

"ಏಕೆ ಹಾಗೆ ಕೇಳುತ್ತಿರುವಿರಿ?"

"ಎಲ್ಲರೂ ನನ್ನನ್ನು ಹೊಗಳುತ್ತಿದ್ದಾರೆ. ಆ ಹೊಗಳಿಕೆಗೆ ನಾನು ಅರ್ಹಳಲ್ಲವೆಂಬುದನ್ನು ಬಲ್ಲೆ. ನನ್ನ ತಪ್ಪುಗಳನ್ನು ಯಾರಾದರೂ ತೋರಿಸಿಕೊಟ್ಟರೆ ನಾನು ಉಪಕೃತಳಾಗುತ್ತೇನೆ."

"ತಪ್ಪುಗಳೇ ಇಲ್ಲದಿರುವಾಗ ಏನು ಹೇಳುವುದು?"

"ಹೋಗಿ. ನೀವೂ ನನ್ನನ್ನು ಹೊಗಳುತ್ತಿರುವಿರಿ."

"ಕಲ್ಪನಾದೇವಿ – ನೀವು ಅಸಾಮಾನ್ಯ ಕಲಾವಿದೆಯೆನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ."

"ಇಲ್ಲ ಕ್ಯಾಪ್ಟನ್. ನಾಟ್ಯಕಲೆಯ ಕಲೆಗಳಲ್ಲಿ ಒಂದೇ ಅಂಶ ನನಗೆ ಸಿಕ್ಕಿರುವುದು – ನಾನು ಸಾಧಿಸಬೇಕಾದ ಇನ್ನೂ ತೊಂಭತ್ತೊಂಭತ್ತು ಅಂಶಗಳಿವೆ."

"ಇರಬಹುದು. ಆದರೆ ನಿಮಗೆ ಸಿಕ್ಕಿರುವ ಒಂದು ಅಂಶ ಗಟ್ಟಿ ಅಂಶ. ಕಲಾವಿದ ಪತ್ರಿಕೆ ಬರೆದ ಹಾಗೆ ನೀವು ಪ್ರವಾಸ ಕೈಗೊಳ್ಳಬೇಕು."

"ವಿಲಾಯತಿಗೇ?"

" ಹೌದು. "

" ಆ ಒಣ ಮೋಹ ನನಗಿಲ್ಲ. ಹೊರಗಿನವರಿಗೆ ನಮ್ಮ ಕಲೆಗಳ ವಿಷಯ ಏನು ಗೊತ್ತಿದೆ. ಹೆಂಗಸು ನಾನು ಹೋಗಿ ಕುಣಿದರೆ ಮೆಚ್ಚಿಕೊಳ್ಳು ತ್ತಾರೆ. ನಮ್ಮ ದೇಶದ ಕಲಾವಿದರ, ಪಂಡಿತರ, ಜ್ಞಾನಿಗಳ ಆಶೀರ್ವಾದ ನನಗೆ ಬೇಕು. "

" ನಿಮ್ಮ ಕಲೆಯಷ್ಟೇ ನಿಮ್ಮ ವಿಚಾರವೂ ಉದಾತ್ತವಾಗಿದೆ. "

" ನಿಮ್ಮ ಸ್ತುತಿಗೆ ನಾನು ಥ್ಯಾಂಕ್ಸ್ ಕೊಡುವುದಿಲ್ಲ ಕ್ಯಾಪ್ಟನ್."

" ಇನ್ನೂ ನನ್ನನ್ನು ಕ್ಯಾಪ್ಟನ್ ಎಂದೇ ಕರೆಯಬೇಕೇ ? "

" ಇನ್ನೇನೆಂದು ಕರೆಯಲಿ ? "

" ಅದನ್ನು ನಾನು ಕಲಿಸಿಕೊಡಲಾರೆ. "

" ಮಿಸ್ಟರ್ ವಿಜಯ ಎನ್ನಲೇ ? "

" ಮಿಸ್ಟರ್ ಬಿಟ್ಟುಬಿಟ್ಟರೆ ಬಾಧಕವಿಲ್ಲ. "

" ವಿಜಯ್ ! "

" ಕಲ್ಪಾ ! "

" ಇನ್ನು ಮನೆಗೆ ಹೋಗೋಣ. ಹೊತ್ತಾಗುತ್ತ ಬಂತು. ಡ್ಯಾಡಿ ಬೇಸರ ಮಾಡಿಕೊಂಡಾರು. "

" ನಿಮ್ಮ ಡ್ಯಾಡಿಗೆ ನಿಮ್ಮಲ್ಲಿ ಪೂರ್ಣ ನಂಬಿಕೆಯಿದೆ. "

" ಅದನ್ನು ಕಳೆದುಕೊಳ್ಳಬಾರದೆಂದೇ ನಾನು ಜಾಗರೂಕಳಾಗಿರು ವುದು. "

" ಕಲ್ಪನಾ........ "

" ಏನು ವಿಜಯ್ ? "

"ನನ್ನ ಮನಸ್ಸಿನಲ್ಲಿ ಮಿಡಿಯುತ್ತಿರುವ ಒಂದು ವಿಷಯ ಹೇಳಲೇ – ನೀವು ತಪ್ಪು ತಿಳಿದುಕೊಳ್ಳಬಾರದು. "

" ಇಲ್ಲ ಹೇಳಿ. "

" ನಿಮ್ಮ........ಕೈಹಿಡಿಯುವ ಸೌಭಾಗ್ಯ ನನಗೆ ಕೊಡುವಿರಾ ? "

ಕಲ್ಪನಾ ಚಕಿತಳಾದಳು. ವಿಜಯ ತನ್ನನ್ನು ಈ ರೀತಿ ಆರಾಧಿಸುತ್ತಿ ದ್ದಾನೆಂಬ ಪರಿಜ್ಞಾನ ಅವಳನ್ನು ಚಕಿತಳನ್ನಾಗಿ ಮಾಡಿತು. ಈ ಪರಿಸ್ಥಿತಿ

ಯಿಂದ ಹೇಗೆ ಪಾರಾಗುವುದೆಂದು ಯೋಚಿಸುತ್ತಾ

" ಮದುವೆಯ ವಿಷಯ ನಾನು ಯೋಚಿಸಿಲ್ಲ. "

" ನಾನು ಬಹಳ ದಿವಸಗಳಿಂದ ಯೋಚಿಸುತ್ತಿದ್ದೇನೆ. ಆದರೆ ಇಂದಿನ ವರೆಗೆ ನಿಮಗೆ ತಿಳಿಸಲು ಧೈರ್ಯವಾಗಲಿಲ್ಲ........... ನಾನು ಬಡವ, ಶ್ರಮ ಜೀವಿ. ' ನನ್ನನ್ನು ಮದುವೆಯಾಗಿ ' ಎಂದು ನಿಮ್ಮನ್ನು ಕೇಳುವ ಧಾರ್ಷ್ಟ್ಯ ತೋರಬಹುದೋ ಇಲ್ಲವೋ ಕಾಣೆ. "

" ಬಡತನ ಸಿರಿತನ ಶಾಶ್ವತವಾದುವೇ ? "

" ನನಗೇನು ಹೇಳುವಿರಿ ? "

" ಯೋಚಿಸಲು ಅವಕಾಶ ಕೊಡಿ. ನಾನು ತಂದೆ ತಾಯಿಯ ಅಧೀನಳು. "

" ಅವರ ಅನುಮತಿ ಪಡೆಯದೆ ಮದುವೆಯಾಗಿ ಎಂದು ನಾನು ಕೇಳುತ್ತಿಲ್ಲ. ನಿಮ್ಮ ಮನಸ್ಸಿನಲ್ಲಿ ಏನಿದೆ ತಿಳಿಸಿ. "

" ವಿಚಾರ ಮಾಡಿ ತಿಳಿಸಲು ಕಾಲಾವಕಾಶ ಕೊಡಿ. "

ಎಂದು ಹೇಳಿದಳು. ಕಲ್ಪನೆಯ ಉತ್ತರ ವಿಜಯನಿಗೆ ಆಶ್ಚರ್ಯವನ್ನುಂಟುಮಾಡಿತು. ತನ್ನಂತೆಯೇ ಕಲ್ಪನೆಯೂ ಆಲೋಚನೆ ಮಾಡುತ್ತಿರಬಹುದು ಎಂದು ನಂಬಿದ್ದ ಅವನಿಗೆ ಆಶಾಭಂಗವೂ ಉಂಟಾಯಿತು.

ಕಲ್ಪನೆಯನ್ನು ಮನೆ ಮುಟ್ಟಿಸಿ ವಿಜಯ ದುಃಖಿಯಾಗಿ ತನ್ನ ರೂಮು ಸೇರಿದ.

ತನಗೂ ವಿಜಯನಿಗೂ ನಡೆದ ಮಾತುಕತೆಯನ್ನು ಕಲ್ಪನಾ ಮನೆಗೆ ಹೋದೊಡನೆಯೇ ತಾಯಿತಂದೆಗೆ ತಿಳಿಸಿದಳು.

" ನಿನ್ನ ಮನಸ್ಸಿನಲ್ಲಿ ಏನಿದೆಯೆಂಬುದನ್ನೂ ಹೇಳಲಿಲ್ಲವಲ್ಲಾ ! "

ಎಂದು ಡಾಕ್ಟರು ಕೇಳಿದರು.

" ನಾಟ್ಯದ ವಿಷಯ ಒಂದು ಬಿಟ್ಟು ನಾನು ಬೇರೆ ಏನನ್ನೂ ಯೋಚಿಸಿಲ್ಲ ಡ್ಯಾಡಿ. "

" ಇವತ್ತಿಲ್ಲ ನಾಳೆಯಾದರೂ ನೀನು ಮದುವೆಯಾಗಬೇಕಮ್ಮಾ. "

" ವಿಜಯ ಒಳ್ಳೆಯ ಹುಡುಗ - ತುಂಬ ಮರ್ಯಾದಸ್ಥ. "

ಎಂದು ಕಲ್ಯಾಣಮ್ಮನವರು ಸೇರಿಸಿದರು.

" ಮದುವೆಗೆ ನಾನು ಒಪ್ಪಿಗೆ ಕೊಡಬೇಕಾಗಿತ್ತೇ ? "

" ನಿನ್ನ ಮನಸ್ಸಿಗೆ ವಿರೋಧವಾಗಿ ನಾವು ನಿನ್ನ ಮದುವೆ ಮಾಡಲಿಚ್ಛಿಸುವುದಿಲ್ಲ ಡಾರ್ಲಿಂಗ್. ಆ ವಿಷಯ ನೀನು ಯೋಚಿಸುವುದು ಒಳ್ಳೆಯದೆಂದು ನಾನೂ ನಿನ್ನ ತಾಯಿಯೂ ಅಭಿಪ್ರಾಯ ಪಡುತ್ತೇವೆ. "

ಕಲ್ಪನೆಯ ಮನಸ್ಸು ಚಿಂತೆಗೊಳಗಾಯಿತು. ' ವಿಜಯ ನನ್ನನ್ನು ಮನಃಪೂರ್ವವಾಗಿ ಪ್ರೀತಿಸುತ್ತಿದ್ದಾನೆ. ನಾನು ಅವನನ್ನು ಪ್ರೀತಿಸುತ್ತೇನೆಯೇ ? ' ಎಂದು ತನ್ನನ್ನೇ ಕೇಳಿಕೊಂಡಳು. ಯಾವ ಉತ್ತರವೂ ಹೊಳೆಯದೆ ಅವಳ ಮನಸ್ಸು ಮತ್ತಷ್ಟು ಸಂದಿಗ್ಧಕ್ಕೊಳಗಾಯಿತು.

ವಿಜಯನ ವರ್ತನೆಯಲ್ಲಿ ಯಾವ ವ್ಯತ್ಯಾಸವೂ ಬರಲಿಲ್ಲ. ಅವನು ನಿತ್ಯ ಬರುತ್ತಿದ್ದ. ಎಲ್ಲರೊಂದಿಗೂ ಮಾತನಾಡುತ್ತಿದ್ದ. ಕಲ್ಪನೆಗೂ ತನಗೂ ಯಾವ ಮಾತೂ ನಡೆದಿಲ್ಲವೆಂಬಂತೆ ಅವಳೊಂದಿಗೂ ವರ್ತಿಸುತ್ತಿದ್ದ. ಅವನನ್ನು ನೋಡಿದಾಗಲೆಲ್ಲಾ ಏನೋ ಅಪರಾಧ ಮಾಡಿದಂತೆ ಕಲ್ಪನೆಯ ಮನಸ್ಸು ಅಳುಕುತ್ತಿತ್ತು.

ಒಂದು ದಿನ ಇದ್ದಕ್ಕಿದ್ದಂತೆ ಡಾಕ್ಟರ್ ಹೆಸರಿಗೆ ಬಂದು ' ಎಕ್ಸ್‌ಪ್ರೆಸ್ ಟೆಲಿಗ್ರಾಂ ' ಮೈಸೂರಿನಿಂದ ಬಂದಿತು. ನಾಲ್ಕೇ ಶಬ್ದಗಳು :

" **ಸೌಭಾಗ್ಯವತಿಯರೊಂದಿಗೆ ಕೂಡಲೆ ಹೊರಟು ಬನ್ನಿ**

**ಸೀತಾರಾಮಯ್ಯ.** "

ಡಾಕ್ಟರ್ ಜೀವವೇ ಉಡುಗಿ ಹೋದಂತಾಯಿತು. ವಸುಂಧರೆಗೆ ಕಾಹಿಲೆಯಾಗಿರಬಹುದೇ – ಅವಳ ಗಂಡ ಅಸ್ವಸ್ಥನಾಗಿರಬಹುದೇ ಎಂದು ವಿಚಾರ ಮಾಡಿದರು. ಮೈಸೂರು ತಲುಪುವ ವರೆಗೆ ಯಾವ ಸಂಶಯವೂ ಬಗೆಹರಿಯುವಂತಿರಲಿಲ್ಲ. ಅದೇ ರಾತ್ರಿ ಕಲ್ಯಾಣಮ್ಮನವರೊಂದಿಗೆ ಮೈಸೂರಿಗೆ ಹೊರಟುಬಿಟ್ಟರು.

ಎರಡು ದಿನಗಳು ಕಳೆದ ಮೇಲೆ ಶ್ರೀಧರನಿಗೆ ತಂದೆಯಿಂದ ಕಾಗದ ಬಂದಿತು.

" ನಿನ್ನ ಸೋದರಿ ವಸುಂಧರೆಯ ಪತಿ ಅಪಘಾತಕ್ಕೆ ಸಿಕ್ಕಿ ದೈವಾಧೀನರಾದರೆಂದು ತಿಳಿಸಲು ವಿಷಾದಿಸುತ್ತೇನೆ. ಕಲ್ಪನೆಗೂ, ಸುಂದರಿಗೂ ಈ ವಿಷಯ ತಿಳಿಸಿ ಅವರನ್ನು ಸಮಾಧಾನ ಮಾಡುವುದು ನಿನ್ನ ಹೊಣೆ.

ಕರ್ಮಾಂತರ ಮುಗಿದ ಮೇಲೆ ನಾನೂ ನಿನ್ನ ತಾಯಿಯೂ ವಸುಂಧರೆಯೊಂದಿಗೆ ಬರುತ್ತೇವೆ. ನಗುತ್ತಿದ್ದ ಮಗಳನ್ನು ನಗುತ್ತ ಕಳಿಸಿಕೊಟ್ಟೆವು; ಈಗ ಅಳುತ್ತಿರುವ ಕಂದನನ್ನು ಅಳುತ್ತ ಕರೆದುಕೊಂಡು ಬರುತ್ತಿದ್ದೇವೆ. ಈ ದುಃಖ ಸಹಿಸಲು ಭಗವಂತ ನಮ್ಮೆಲ್ಲರಿಗೂ ಶಕ್ತಿ ಕೊಡಲೆಂದು ಪ್ರಾರ್ಥಿಸುತ್ತೇನೆ. "

ವಸುಂಧರೆಗೆ ಬಂದೊದಗಿದ ಆಪತ್ತನ್ನು ಕೇಳಿ ವಿಜಯ ಮಮ್ಮಲ ಮರುಗಿದ. ಶ್ರೀಧರನನ್ನೂ, ಕಲ್ಪನೆಯನ್ನೂ ಸಂತೈಸುವುದು ಅವನಿಗೆ ಕಷ್ಟಸಾಧ್ಯವಾಯಿತು.

ತಂದೆಯ ಹಾದಿ ನೋಡುತ್ತ ಕೂಡುವುದು ಶ್ರೀಧರನಿಗೆ ಸಾಧ್ಯವಾಗಲಿಲ್ಲ. ಮಾರನೆಯ ದಿನವೇ ತಂಗಿ, ಹೆಂಡತಿಯೊಡನೆ ಮೈಸೂರಿಗೆ ಪ್ರಯಾಣ ಬೆಳಸಿದ.

ಶ್ರೀನಿವಾಸನ ದುರಂತ ಕಥೆ ಕೇಳಿದ ಮೇಲೆ ಶ್ರೀಧರ, ಕಲ್ಪನಾ ಗಡಗಡನೆ ನಡುಗಿಬಿಟ್ಟರು. ಯಾವುದೋ ಸೇತುವೆಯ ಕೆಲಸ ನಡೆದಿತ್ತು. ಅದನ್ನು ಪರೀಕ್ಷಿಸುತ್ತ ಶ್ರೀನಿವಾಸ ಅದರ ಮೇಲೆ ನಡೆದು ಹೋದ. ಸೇತುವೆ ಕುಸಿದುಬಿತ್ತು. ಶ್ರೀನಿವಾಸ ಅದರ ಕೆಳಗೆ ಸಿಕ್ಕಿ ನುಚ್ಚುನೂರಾಗಿದ್ದ. ಕಲ್ಲು, ಮಣ್ಣುಗಳ ರಾಶಿಯಿಂದ ದೇಹವನ್ನೆಳೆಯುವ ವೇಳೆಗೆ ಪ್ರಾಣಪಕ್ಷಿ ಹಾರಿಹೋಗಿತ್ತು.

ಕಲ್ಯಾಣಮ್ಮನವರನ್ನೂ, ವಸುಂಧರೆಯನ್ನೂ ಸಂತೈಸುವ ಪ್ರಯತ್ನ ಮಾಡುವುದಕ್ಕೇ ಯಾರಿಗೂ ಧೈರ್ಯವಾಗಲಿಲ್ಲ.

## ೧೬

ಕೀರ್ತಿ ಪ್ರವಾಸ ಮುಗಿಸಿಕೊಂಡು ಹಿಂದಿರುಗುವ ವರೆಗೆ ನಿಸ್ಸಾರ್, ಸೋಹನ್‌ಸಿಂಗ್ ಬೆಂಗಳೂರಲ್ಲಿ ನಿಲ್ಲಲಾಗಲಿಲ್ಲ. ಮಿಲ್ಟ್ರಿ ಪದ್ಧತಿಯಂತೆ ಅವರಿಗೆ ಕೂಡಲೆ ಹೊರಡಲು ಆಜ್ಞೆಯಾಗಿತ್ತು. ಎಲ್ಲಿಗೆ ಎನ್ನುವುದು ಯಾರಿಗೂ ಗೊತ್ತಿಲ್ಲ.

ವಿಜಯನನ್ನು ಬಿಟ್ಟು ಹೋಗಲು ಗೆಳೆಯರಿಬ್ಬರೂ ವ್ಯಸನಪಟ್ಟರು. ಗೆಳೆಯರ ವಿಯೋಗ ವಿಜಯನಿಗೂ ದುಃಖವನ್ನುಂಟುಮಾಡಿತ್ತು.

"ನೀನೂ ಸಿದ್ಧನಾಗಬೇಕು ವಿಜಯ್. ಮಿಲ್ಟ್ರಿ ಚಲನವಲನ ಅಧಿಕವಾಗಿದೆ. ನಮ್ಮನ್ನು ಎಲ್ಲಿ ಹೊತ್ತು ಹಾಕುತ್ತಾರೋ ತಿಳಿಯದು. ನಾವು ಪತ್ರವ್ಯವಹಾರ ಕೂಡ ಮಾಡಬಾರದೆಂದು ಆಜ್ಞೆಯಾಗಿದೆ. ನಾವು ಪ್ರಾಣ ಒಪ್ಪಿಸಿದರೂ ಯಾರಿಗೂ ತಿಳಿಯುವಂತಿಲ್ಲ."

"ಸಿಂಗಾಪುರಕ್ಕೆ ನಮ್ಮ ಸೈನ್ಯಗಳನ್ನು ಕಳಿಸುತ್ತಿದ್ದಾರೆಂದು ಕೇಳಿದೆ; ನಿಜವೇ ನಿಸ್ಸಾರ್."

"ಇದ್ದರೂ ಇರಬಹುದು. ಟೋಕಿಯೋ ಬ್ರಾಡ್ ಕಾಸ್ಟ್ಸ್ (Tokio Broadcasts) ಕೇಳಿದ ಮೇಲೆ ನನಗೂ ಹಾಗೇ ಅನಿಸುತ್ತದೆ. – ಸಿಂಗಾಪುರದಲ್ಲಿ ನಮ್ಮ ಪುನರ್ಮಿಲನವಾಗುತ್ತದೆಂದು ಕಾಣುತ್ತದೆ."

"ಕಾಗದ ಬರೆಯಲು ಅನುಮತಿ ದೊರೆತರೆ ನಿನ್ನ ಮತ್ತು ಸೋಹನ್ ಸಿಂಗನ ವಿಷಯ ಬರೆದು ತಿಳಿಸು ನಿಸ್ಸಾರ್."

"ಖಂಡಿತವಾಗಿ ಬರೆಯುತ್ತೇನೆ........ ನಿನ್ನ ವಿವಾಹದ ವಿಷಯವೇನಾಯಿತು ವಿಜಯ್?"

ಕಲ್ಪನಾ ತನ್ನನ್ನು ಮೃದುವಾಗಿ ನಿರಾಕರಿಸಿದ್ದಾಳೆ ಎಂದು ಹೇಳಿಕೊಳ್ಳಲು ವಿಜಯನಿಗೆ ನಾಚಿಕೆಯಾಯಿತು.

"ನೀನೂ ಸೋಹನ್ ಬರದೆ ನಾನು ವಿವಾಹವಾಗುತ್ತೇನೆಯೇ ನಿಸ್ಸಾರ್."

"ಕಲ್ಪನಾದೇವಿಗೆ ನನ್ನ 'ಸಲಾಂ' ತಿಳಿಸು."

ಎಂದು ಹೇಳಿದ. ವಿಜಯ ತನ್ನ ಗೆಳೆಯರನ್ನು ಬೀಳ್ಕೊಡಲೂ ಸಾಧ್ಯವಿರಲಿಲ್ಲ. ಒಂದು ರಾತ್ರಿ ನಿಸ್ಸಾರ್, ಸೋಹನ್, ದಿಲಾವರ್, ಗುರುಭಕ್ಸ್ ಮೊದಲಾದವರೂ, ಅವರ ರೆಜಿಮೆಂಟುಗಳೂ ಪ್ರಯಾಣ ಬೆಳಸಿದವು. ಅವರು ಹೊರಟುಹೋದುದು ಮಾರನೆಯ ದಿನವೇ ವಿಜಯನಿಗೆ ಗೊತ್ತಾದುದು.

ವಿಜಯ ಕಲ್ಪನಾದೇವಿಯ ಮನೆಗೆ ಬಂದಾಗ ಅವಳು 'ರಿಹರ್ಸಲ್' ಮಾಡುತ್ತಿದ್ದಳು. ರಿಹರ್ಸಲ್ಲಿಗೆ ವಸುಂಧರಾ ವೀಣೆ ನುಡಿಸುತ್ತಿದ್ದುದನ್ನು ಕಂಡು ವಿಜಯನಿಗೆ ಪರಮಾಶ್ಚರ್ಯವಾಯಿತು. ರಿಹರ್ಸಲ್ ಮುಗಿದ ಮೇಲೆ

" ವಸುಂಧರಾದೇವಿಯರು ಕೈಗೆ ವೀಣೆ ತೆಗೆದುಕೊಂಡಿದ್ದಾರೆ. "

" ನಾನೇ ಬಲವಂತ ಮಾಡಿ ಅವಳ ಕೈಗೆ ವೀಣೆ ಕೊಡಬೇಕಾಯಿತು. ಕಣ್ಣೀರು ಸುರಿಸಿಯೇ ಅವಳು ಪ್ರಾಣ ಒಪ್ಪಿಸುತ್ತಿದ್ದಳು. "

" ಒಳ್ಳೆಯ ಕೆಲಸ ಮಾಡಿದಿರಿ ಕಲ್ಪನಾದೇವಿ. ನೊಂದ, ಬೆಂದ ಮನಸ್ಸಿಗೆ ಸಂಗೀತ ಸ್ವಲ್ಪ ಶಾಂತಿಯನ್ನಾದರೂ ಕೊಡಬಲ್ಲುದು. "

" ತಡವಾಗಿ ಬಂದಿರಿ. ನೀವು ಅಕ್ಕನ ವೀಣಾವಾದನ ಕೇಳಲಿಲ್ಲ. "

" ಕೇಳಲಿಲ್ಲ. "

" ಅವಳ ಸಂಗೀತ ಪ್ರಗತಿ ಕಂಡು ನನಗೆ ಆಶ್ಚರ್ಯವಾಗಿದೆ. "

" ಅವರನ್ನೇ ಏಕೆ ನಿಮ್ಮ ನಾಟ್ಯಮಂಡಳಿಯ ಸಂಗೀತ ದಿಗ್ದರ್ಶಕರನ್ನಾಗಿ ಮಾಡಬಾರದು? ಇದರಿಂದ ಅವರ ಮನಸ್ಸಿಗೂ ನೆಮ್ಮದಿ ದೊರೆಯುತ್ತದೆ. "

" ನಾನೂ ಅದೇ ವಿಚಾರ ಮಾಡುತ್ತಿದ್ದೇನೆ ವಿಜಯ್. "

" ಇನ್ನೊಂದು ವಿಷಯ ನಿಮ್ಮಲ್ಲಿ ಹೇಳಬೇಕಾಗಿದೆ ಕಲ್ಪನಾದೇವಿ – ನನ್ನ ಮಿತ್ರರಿಬ್ಬರೂ ನಿನ್ನೆ ಪ್ರಯಾಣ ಬೆಳಸಿದರು. "

" ಎಲ್ಲಿಗೆ ? "

" ಎಲ್ಲಿಗೋ ಗೊತ್ತಿಲ್ಲ. ಸಿಂಗಾಪುರಕ್ಕಿರಬಹುದೆಂದು ಊಹಿಸುತ್ತೇನೆ. "

" ನೀವು............ ? "

" ನಾನು ಯಾವಾಗ ಹೊರಡಬೇಕಾಗುತ್ತದೆಯೋ ಗೊತ್ತಿಲ್ಲ. ನಾನು ಹೋದರೆ ನಿಮಗೆ ಕಾಗದ ಬರೆಯುವಂತೆಯೂ ಇಲ್ಲ. "

" ಕಾಗದ ಏಕೆ ಬರೆಯಬಾರದು ? "

" ಮಿಲ್ಟ್ರಿ ಕಾಯಿದೆ........ ನಾನು ಹೊರಡುವ ಮುನ್ನ......... "

" ಹೊರಡುವ ಮುನ್ನ........ ! "

" ಮದುವೆಯನ್ನು ಮುಗಿಸಿಬಿಡಬಹುದು. "

" ನಾನಿನ್ನೂ ಯಾವ ನಿರ್ಧಾರಕ್ಕೂ ಬಂದಿಲ್ಲ. "

" ತಾಯಿ ತಂದೆಯವರಲ್ಲಿ ಪ್ರಸ್ತಾಪ ಮಾಡಿದಿರಾ ? "

" ಮಾಡಿದೆ. "

" ಅವರೇನು ಹೇಳಿದರು ? "

" ವಿಷಯದ ನಿರ್ಧಾರ ನನಗೆ ಬಿಟ್ಟುಬಿಟ್ಟಿದ್ದಾರೆ. "

" ಇನ್ನು ಯಾವ ಅಡ್ಡಿ ಉಳಿದಿದೆ ?"

" ದಾಂಪತ್ಯಜೀವನ, ನಾಟ್ಯ ಎರಡೂ ಕೂಡಿ ನಡೆಯಲಾರವು ವಿಜಯ್. ನಾನು ಮದುವೆಯಾಗುವುದಾದರೆ ನಾಟ್ಯ ಬಿಟ್ಟುಬಿಡಬೇಕು. "

" ಅವಶ್ಯಕವಿಲ್ಲ. ನಾನೇನು ಹಳೆಯ ಕಾಲದವನಲ್ಲ. ನೀವು ನಾಟ್ಯ ಕಲೆಯನ್ನು ರೂಢಿಸಿಕೊಳ್ಳುವುದರಲ್ಲಿ ನನ್ನದೇನೂ ಅಭ್ಯಂತರವಿಲ್ಲ. "

" ನಿಮ್ಮ ದೃಷ್ಟಿ ಉದಾರವಾದುದೆಂಬುದನ್ನು ಬಲ್ಲೆ ವಿಜಯ್. ಆದರೆ ನಾನು ಎರಡನ್ನೂ ಸಮನ್ವಯ ಮಾಡಬಲ್ಲೆನೇ ಎಂದು ಯೋಚಿಸುತ್ತಿದ್ದೇನೆ."

" ನಿಮಗೆ ಸಾಧ್ಯ ಕಲ್ಪನಾದೇವಿ. "

" ವಿಜಯ್ - ದಯೆಯಿಟ್ಟು ಈ ವಿಷಯ ನನಗೆ ಬಿಟ್ಟುಬಿಡಿ. ನನ್ನೊಳಗೇ ಪ್ರಬಲ ವಿಚಾರ ಮಂಥನವಾಗುತ್ತಿದೆ. ಅಕ್ಕನ ದುಃಖ ನನ್ನನ್ನು ಅಸ್ಥಿರಳನ್ನಾಗಿ ಮಾಡಿದೆ. ನನ್ನ ಮನಸ್ಸಿಗೆ ಸ್ವಲ್ಪ ಶಾಂತಿ ಸಿಕ್ಕುವ ವರೆಗೆ ಈ ವಿಷಯ ನಾನು ನಿರ್ಧರಿಸಲಾರೆ. "

ಎಂದು ಹೇಳಿಬಿಟ್ಟಳು. ' ಮನಸ್ಸಿನಲ್ಲಿ ಆಸೆ ತಳೆಯಲೂ ಕಲ್ಪನಾ ಅವಕಾಶ ಕೊಡುವುದಿಲ್ಲವಲ್ಲ ' ಎಂದು ವಿಜಯ ಚಿಂತಾಕ್ರಾಂತನಾದ.

ವಿಜಯನೂ ಹೆಚ್ಚು ದಿನ ಬೆಂಗಳೂರಿನಲ್ಲಿ ನಿಲ್ಲಲು ಸಾಧ್ಯವಾಗಲಿಲ್ಲ. ಸೈನ್ಯದ ಕೆಲವು ತುಕಡಿಗಳು ಪ್ರಯಾಣಕ್ಕೆ ಸಿದ್ಧವಾದವು. ವಿಜಯನಿಗೂ ನಿರೂಪ ಬಂದಿತು. ಪ್ರವಾಸ ಹೊರಡುವ ಗಡಿಬಿಡಿಯಲ್ಲಿ ಸ್ವಲ್ಪ ಪುರಸತ್ತು ಮಾಡಿಕೊಂಡು ವಿಜಯ ಕಲ್ಪನಾದೇವಿಯ ಮನೆಗೆ ಧಾವಿಸಿ ಬಂದ. ಅಲ್ಲಿ ಹೆಚ್ಚು ಹೊತ್ತು ನಿಲ್ಲಲು ಸಾಧ್ಯವಿರಲಿಲ್ಲ. ಡಾಕ್ಟರು, ಶ್ರೀಧರ, ಕಲ್ಯಾಣಮ್ಮ, ಸುಂದರಿ, ಸೌಭಾಗ್ಯ ಎಲ್ಲರಿಗೂ ತಾನು ಹೊರಡುವ ವಿಷಯ ತಿಳಿಸಿ ಕಲ್ಪನೆಯನ್ನು ಕಾಣಲು ಬಂದ.

" ಅಂದಮಾನಕ್ಕೆ ಕರಿನೀರಿನ ಶಿಕ್ಷೆ ಅನುಭವಿಸಲು ಹೋಗುತ್ತಿರುವಂತಾಗಿದೆ ನನಗೆ ಕಲ್ಪನಾದೇವಿ. "

" ಹಾಗನ್ನಬೇಡಿ. "

" ಜೀವನಕ್ಕೆ ಯಾವ ಆಸರೆಯೂ ಇಲ್ಲವಾಯಿತು. ನೀವೂ ನನ್ನನ್ನು ನಿರಾಕರಿಸಿದಿರಿ. "

" ನನ್ನ ತಾಟಸ್ಥ್ಯವನ್ನು ನೀವು ನಿರಾಕರಣೆಯೆಂದು ಭಾವಿಸಬಾರದು. "

" ನಿರಾಶನಾಗಬೇಡವೆನ್ನುವಿರಾ ? "

" ನಾನು ನಿರಾಶಳಾಗಿದ್ದಾಗ ನೀವು ಹೇಳಿದ ಮಾತನ್ನೇ ನಿಮಗೆ ಹೇಳು ತ್ತೇನೆ. "

" ಕಲ್ಪನಾದೇವಿ, ಇಂದಿಲ್ಲ ನಾಳೆ ನಾವಿಬ್ಬರೂ ಕೂಡಿ ಬಾಳಬಹು ದೆಂಬ ನಂಬಿಕೆಯೇ ನನ್ನ ಕ್ರತುಶಕ್ತಿ. ಆ ಆಸೆಯನ್ನು ತಳೆದೇ ನಾನು ಹೋಗುತ್ತಿದ್ದೇನೆ. "

ಎಂದು ಹೇಳಿದ. ಕಲ್ಪನೆಯ ಮನಸ್ಸೂ ವ್ಯಸನದಲ್ಲಿ ಮುಳುಗಿತು. ' ನಿಮ್ಮನ್ನೇ ಮದುವೆಯಾಗುತ್ತೇನೆ. ಹೋಗಿ ಬನ್ನಿ ' ಎಂದು ಹೇಳಲೇ ಎಂದೊಮ್ಮೆ ಯೋಚಿಸಿದಳು. ಮರುಕ್ಷಣವೇ ' ಮದುವೆಯೆಂದರೆ ಮಕ್ಕಳಾ ಟವೇ ? ಅದು ಜನ್ಮದ ಬಂಧನ. ಇನ್ನೂ ನಾಲ್ಕು ದಿವಸ ಯೋಚನೆ ಮಾಡುವುದೊಳ್ಳೆಯದು ' ಎಂದು ನಿರ್ಧರಿಸಿಕೊಂಡಳು.

ವಿಜಯ ಹೊರಡುವ ಮುನ್ನ ಕಲ್ಯಾಣಮ್ಮನವರ ಪಾದ ಮುಟ್ಟಿ ನಮಸ್ಕರಿಸಿ

" ತಾಯಿಯನ್ನು ಕಾಣಲಿಲ್ಲವಲ್ಲ ಎನ್ನುವ ದುಃಖ ಮರೆಸಿದಿರಿ. ಅಪಾರ ಕರುಣೆಯಿಂದ ನನ್ನನ್ನು ಕಾಪಾಡಿದಿರಿ. "

ಎಂದು ಹೇಳಿದ. ಕಲ್ಯಾಣಮ್ಮನವರ ಕಣ್ಣಲ್ಲಿ ನೀರು ತುಂಬಿತು. ' ಹೋಗಿ ಬನ್ನಿ – ದೇವರು ನಿಮಗೆ ಒಳ್ಳೆಯದನ್ನು ಮಾಡುತ್ತಾನೆ ' ಎಂದು ಆಶೀರ್ವದಿಸಿದರು.

## ೧೭

ಆರ್ಥಿಕ ದೃಷ್ಟಿಯಿಂದ ಕೀರ್ತಿಯ ಪ್ರವಾಸ ಸಂಪೂರ್ಣವಾಗಿ ಕುಸಿದು ಬಿದ್ದಿತ್ತು. ಪ್ರವಾಸ ಮುಗಿಸಿಕೊಂಡು ಹಿಂದಿರುಗುವಾಗ ಜತೆಯಲ್ಲಿ ಇಪ್ಪ- ತ್ತೇಳು ಸಾವಿರ ರೂಪಾಯಿ ಸಾಲ ಹೊತ್ತುಕೊಂಡು ಬಂದ. ಅವನು ಊರಿಗೆ

ಬಂದೊಡನೆಯೇ ಸಾಲಗಾರರು ಮುತ್ತಿ ಅವನನ್ನು ಕಾಡಲಾರಂಭಿಸಿದರು. ಕೀರ್ತಿ ದಿಕ್ಕೇ ಕಾಣದೆ ಕುಳಿತುಬಿಟ್ಟ. ಈ ಕಟುವಾತಾವರಣದಲ್ಲಿ ಅವನಿಗಿದ್ದ ಒಂದೇ ವೃತ್ತಿಯೆಂದರೆ ಮದ್ಯಪಾನ. ರಾತ್ರಿ ಮಾತ್ರ ಕುಡಿದು ತೃಪ್ತನಾಗುತ್ತಿದ್ದ ಕೀರ್ತಿ ಹಗಲೂ ಕುಡಿಯಲಾರಂಭಿಸಿದ.

ಸೋಹನ್, ನಿಸ್ಸಾರ್, ವಿಜಯ ಹೊರಟು ಹೋದುದರಿಂದ 'ನಾಟ್ಯಶಾಲೆ'ಯಲ್ಲಿ ಮಿಲ್ಟ್ರಿಯವರ ಪ್ರಾತಿನಿಧ್ಯಕ್ಕೆ ಯಾವ ಕೊರತೆಯೂ ಬರಲಿಲ್ಲ. ಅವರ ಬದಲು ಇತರ ಮಿಲ್ಟ್ರಿ ಅಧಿಕಾರಿಗಳು ಕೀರ್ತಿಯ ಸ್ನೇಹಿತರಾದರು. ನಾಟ್ಯಶಾಲೆ ಪಡಖಾನೆಯಾಯಿತು.

ಸಾಲಗಾರರ ಮೂಗಿಗೆ ತುಪ್ಪ ಬಳಿದು ಕಳಿಸುವ ವಿದ್ಯೆಯಲ್ಲಿ ಕೀರ್ತಿ ಪಾರಂಗತನಾದ. ಸವಿಮಾತು, ಪಾನಸಂತರ್ಪಣೆಗಳಿಗೆ ಕೆಲವು ಸಾಲಗಾರರು ತೃಪ್ತರಾಗುತ್ತಿದ್ದರು. 'ಕೆಲವು ದಿವಸಗಳಲ್ಲಿಯೇ ಯೂರೋಪ್ ಪ್ರವಾಸ ಹೊರಡುತ್ತೇನೆ. ಬರುವಾಗ ಮೂಟೆ ಮೂಟೆ ಹಣ ತರುತ್ತೇನೆ. ನಿಮ್ಮ ಹಣ ಒಂದಕ್ಕೆ ಕೊಡುವುದಲ್ಲದೆ, ನೀವು ಕೇಳಿದಷ್ಟು ಬಡ್ಡಿಯನ್ನೂ ಸಂತೋಷವಾಗಿ ಕೊಡುತ್ತೇನೆ.' ಎಂದು ಕೆಲವು ಸಾಲಗಾರರನ್ನು ಸಮಾಧಾನ ಪಡಿಸುತ್ತಿದ್ದ. ಇವು ಯಾವದಕ್ಕೂ ಬಗ್ಗದಿದ್ದವರನ್ನು ತಾರಾ, ಮೀರಾ, ಚಂದ್ರಮುಖಿಯರ ನೆರವಿನಿಂದ ಪಳಗಿಸುತ್ತಿದ್ದ.

ಕೀರ್ತಿಯ ಯಾವ ಅಸ್ತ್ರಕ್ಕೂ ಮಣಿಯದಿದ್ದವನು ಸ್ಮಿತ್. ಜೀವಾನಂದರ ಮಾತು ಕೇಳಿ ಒಂದು ಲಕ್ಷ ರೂಪಾಯಿ ಸಾಲ ಕೊಟ್ಟಿದ್ದ ಸ್ಮಿತ್‌ಗೆ ಹಾಗೂ ಹೀಗೂ ಅರ್ಧ ಹಣ ಪಾವತಿ ಮಾಡಿದ್ದ. ಉಳಿದ ಹಣಕ್ಕೆ ಸಬೂಬು. 'ನೀವು ನನ್ನ ಹಣ ಬೇಗ ತೀರಿಸದಿದ್ದರೆ ಕೋರ್ಟಿನಿಂದ ಡಿಕ್ರಿ ತಂದು ನಿಮ್ಮ ಮನೆ ಅಟ್ಯಾಚ್ ಮಾಡಿಸಬೇಕಾಗುತ್ತದೆ ಕೀರ್ತಿಯವರೇ' ಎಂದು ಬೆದರಿಕೆ ಹಾಕಿದ್ದ.

ಈ ಕುಟುಕು ಮುಳ್ಳುಗಳಿಗಿಂತ ಹೆಚ್ಚಾಗಿ ಕೀರ್ತಿಗೆ ಹಿಂಸೆ ಕೊಡುತ್ತಿದ್ದುದು ಕಲ್ಪನೆಯ ಪ್ರದರ್ಶನಕ್ಕೆ ದೊರಕಿದ ಸನ್ಮಾನ ಮತ್ತು ಅವಳ ಕಲಾಪ್ರಗತಿಯ ಸುದ್ದಿ.

ಕಲ್ಪನಾ ಒಂದು ಮಂಡಳಿ ಕೂಡಿಸಿಕೊಂಡು ಅಖಿಲ ಭಾರತ ಹೊರ

ಪ್ರವಾಸ ಹೊರಡುವ ಸುದ್ದಿ ಕೇಳಿದಮೇಲಂತೂ – ಕೀರ್ತಿ ಕಂಗಾಲಾಗಿಬಿಟ್ಟ. ಅವನ ಮನಸ್ಸನ್ನು ಅಸೂಯೆ ಹುಳು ಕೊರೆದಂತೆ ಕೊರೆಯುತ್ತಿತ್ತು.

ಕಲ್ಪನಾ ಪ್ರವಾಸ ಹೊರಡುವ ವಿಷಯ ಖಚಿತವಾಗಿ ಪತ್ರಿಕೆಗಳಲ್ಲಿ ಪ್ರಕಟವಾದವು. ಮದರಾಸು, ನಾಗಪುರ, ಅಲ್ಹಾಬಾದ್, ಕಾಶಿ, ದೆಲ್ಲಿ, ಲಾಹೋರ್, ಅಮೃತಸರ್, ಮೀರತ್, ಜೋಧಪುರ. ಅಜ್ಮೀರ್, ಅಹಮದಾಬಾದ್, ಬರೋಡ, ಕಲ್ಕತ್ತಾ, ಮುಂಬಯಿ, ಪುಣೆ, ಹುಬ್ಬಳ್ಳಿಗಳಿಗೆ ಹೋಗುವುದು ನಿಶ್ಚಯವಾಗಿತ್ತು. ಎಲ್ಲ ಪ್ರಕಟನೆಗಳಲ್ಲಿಯೂ ನಾಟ್ಯಾಚಾರ್ಯ ರಾಮಸ್ವಾಮಪ್ಪನವರಿಗೆ ಪ್ರಾಧಾನ್ಯ ಕೊಡಲಾಗಿತ್ತು. ಸಂಗೀತ ನಿರ್ದೇಶನ ಶ್ರೀಮತಿ ವಸುಂಧರಾದೇವಿ. ವ್ಯವಸ್ಥಾಪಕರು: ಶ್ರೀ. ಆನಂದರಾಯರು. ಅಭಿನಯಕಾರರ ವರ್ಗದಲ್ಲಿ ಭಾಗ್ಯಲಕ್ಷ್ಮಿ, ಜಲಜಾಕ್ಷಿ, ರಘುವೀರ, ರಾಮನ್ ನಂಬೂದ್ರಿ ಮೊದಲಾದವರಿದ್ದರು. ತನ್ನ ಕೈಬಿಟ್ಟು ಹೋದವರು ಕಲ್ಪನೆಯ ಮಂಡಳಿ ಸೇರಿದುದನ್ನು ಕಂಡು ಕೀರ್ತಿ ಮತ್ತಷ್ಟು ಅಸ್ತವ್ಯಸ್ತನಾದ.

ಹೇಗಾದರೂ ಮಾಡಿ ಕಲ್ಪನೆಯ ಮಂಡಳಿಯನ್ನೊಡೆಯುವುದೇ ಸರಿಯೆಂದು ಕೀರ್ತಿಗೆ ತೋರಿತು. ಅವನ ದೂತರು ಕಲ್ಪನಾ ಮಂಡಳಿಯ ಕಲಾವಿದರನ್ನು ತಮ್ಮ ಕಡೆಗೆ ಎಳೆದುಕೊಳ್ಳಲು ಯತ್ನಿಸಲಾರಂಭಿಸಿದರು. 'ಭಾರತ ಪ್ರವಾಸದಿಂದ ಏನೂ ಪ್ರಯೋಜನವಿಲ್ಲ. ಸದ್ಯದಲ್ಲೆ ಕೀರ್ತಿಯವರು ವಿಶ್ವ ಪರ್ಯಟನ ಕೈಕೊಳ್ಳುವವರಿದ್ದಾರೆ. ಅವರನ್ನು ಬಂದು ಸೇರುವುದರಿಂದ ನಿಮಗೆ ವಿಶೇಷ ಲಾಭವಿದೆ' ಎಂದು ಆಸೆ ತೋರಿಸಲಾರಂಭಿಸಿದರು.

ಕೀರ್ತಿಯ ಅವನ ದೂತರ ಸಾಹಸ – ಸ್ವಲ್ಪವೂ ಫಲಕಾರಿಯಾಗಲಿಲ್ಲ. 'ಲಕ್ಷ ರೂಪಾಯಿ ಕೊಟ್ಟರೂ ಕೀರ್ತಿಯವರ ಸಹವಾಸ ಬೇಡ' ಎಂದು ಎಲ್ಲರೂ ನಿರಾಕರಿಸಿದರು.

ಕೀರ್ತಿ ಊರೂರುಗಳಿಗೆ ಕಾಗದ ಬರೆದು ತನ್ನ ಅಭಿಮಾನಿಗಳನ್ನು ಕಲ್ಪನಾದೇವಿಯ ಮಂಡಳಿಯ ಮೇಲೆ ಎತ್ತಿ ಕಟ್ಟಲೆತ್ನಿಸಿದ. ನಾಲ್ಕಾರು ಜನ ಕೀರ್ತಿಗೆ ಕಾಗದ ಬರೆದು ಅವನನ್ನೇ ಜರಿದಿದ್ದರು.

ಕಲ್ಪನಾದೇವಿಯ ನಾಟ್ಯ ಮಂಡಳಿ ಇಷ್ಟೆಲ್ಲ ವಿರೋಧಶಕ್ತಿಗಳನ್ನೆದುರಿಸುತ್ತ ಜೈತ್ರಯಾತ್ರೆ ಹೊರಟಿತು. ಕ್ಯಾಂಪಿನಿಂದ ಕ್ಯಾಂಪಿಗೆ ಅವರ ಯಶಸ್ಸು

ಬೆಳೆಯತೊಡಗಿತು. ಏಕಕಂಠದಿಂದ ಜನ ಕಲ್ಪನಾದೇವಿಯ ಪ್ರಯತ್ನವನ್ನು ಹೊಗಳತೊಡಗಿದರು. ನಾಗಪುರ, ಅಲ್ಹಾಬಾದ್ ಮುನಿಸಿಪಾಲಿಟಿಗಳು ಕಲ್ಪನಾದೇವಿಗೆ ಮಾನಪತ್ರ ಸಮರ್ಪಿಸಿದವು. ಕಲ್ಕತ್ತಾ, ಮುಂಬಯಿ ನಗರಗಳಲ್ಲಿ ಗೌವರ್ನರ್ ಮತ್ತು ಮಂತ್ರಿ ವರ್ಗದವರು ಅವರ ಪ್ರದರ್ಶನಗಳನ್ನು ನೋಡಿ ಮೆಚ್ಚುಗೆ ವ್ಯಕ್ತಮಾಡಿದರು. ಕಾಶಿಯ ವಿದ್ವನ್ಮಂಡಳಿ ಸಭೆ ಸೇರಿಸಿ ಕಲ್ಪನಾದೇವಿಗೆ ದಿವ್ಯ ಪೀತಾಂಬರವನ್ನು ಅರ್ಪಿಸಿ '**ನಾಟ್ಯ ಸರಸ್ವತಿ**' ಎಂಬ ಬಿರುದನ್ನು ದಯಪಾಲಿಸಿತು.

ಹಿಂದೂ, ಟೈಮ್ಸ್ ಆಫ್ ಇಂಡಿಯಾ, ಬಾಂಬೆ ಕ್ರಾನಿಕಲ್, ಸ್ಟೇಟ್ಸ್ ಮನ್, ಹಿಂದೂಸ್ಥಾನ ಟೈಮ್ಸ್, ಡಾನ್ ಮೊದಲಾದ ಪತ್ರಿಕೆಗಳಲ್ಲಿ ಪ್ರತಿನಿತ್ಯ ಕಲ್ಪನಾದೇವಿಯ ಬಗ್ಗೆ ಲೇಖನಗಳು, ಸುದ್ದಿಗಳು ಬರತೊಡಗಿದವು.

ಕಲ್ಪನೆಯ ಬಗ್ಗೆ ಬರುತ್ತಿದ್ದ ಸುದ್ದಿಗಳು, ಲೇಖನಗಳನ್ನು ಡಾಕ್ಟರು ಸಂಗ್ರಹಿಸುತ್ತಿದ್ದರು. ಪ್ರತಿಯೊಂದನ್ನೂ ಕಲ್ಯಾಣಮ್ಮನವರಿಗೆ ಓದಿ ಹೇಳುತ್ತಿದ್ದರು. ಮಗಳ ಅಭ್ಯುದಯ ಕಲ್ಯಾಣಮ್ಮನವರ ಜೀರ್ಣ ದೇಹಕ್ಕೆ ಅಮೃತ ಪ್ರಾಯವಾಯಿತು. ಅವರ ಆರೋಗ್ಯ ಆಶ್ಚರ್ಯಕರ ರೀತಿಯಲ್ಲಿ ದಿನದಿನಕ್ಕೆ ಸುಧಾರಿಸತೊಡಗಿತು.

ಕೀರ್ತಿಗೆ ಹುಚ್ಚು ಹಿಡಿಯುವುದೊಂದೇ ಉಳಿಯಿತು. ಅವನ ಬಾಯಿ ಮತ್ತಷ್ಟು ಹಗುರವಾಯಿತು; ನಾಲಗೆ ಮತ್ತಷ್ಟು ಉದ್ದವಾಯಿತು.

ಕೀರ್ತಿಗೆ ಇದ್ದುದು ಇನ್ನೊಂದೇ ಅಸ್ತ್ರ. ಆ ಅಸ್ತ್ರವನ್ನು ಪ್ರಯೋಗಿಸಿ ಕಲ್ಪನಾದೇವಿಯ ಹಾಗೂ ಆಕೆಯ ಮನೆಯವರ ಮನಸ್ಸು ಕದಕಲು ಕೀರ್ತಿ ನಿಶ್ಚಯಿಸಿದ. ಅಪಪ್ರಚಾರ ಪ್ರವೀಣೆಯರಾದ ತಾರಾ, ಚಂದ್ರಮುಖಿ, ಮೀರಾ ಇವರಿಗೆ ಸ್ವಲ್ಪವೂ ಬಿಡುವಿಲ್ಲದಾಯಿತು.

ಡಾಕ್ಟರ ಕಿವಿಗೆ ಸುದ್ದಿಗಳು ಹೇಗೋ ತಲಪುತ್ತಿದ್ದವು. ಅನಾಮಧೇಯ ಪತ್ರ ( anonymous letters ) ಬರುತ್ತಿದ್ದವು. ಡಾಕ್ಟರು ಅವುಗಳನ್ನೋದಿಕೊಂಡು, ಹರಿದು ಬಿಸುಟು ನಕ್ಕುಬಿಡುತ್ತಿದ್ದರು.

ಡಾಕ್ಟರ ಚಿತ್ತಸ್ಥೈರ್ಯ ಅವರ ಮಗ ಶ್ರೀಧರನಲ್ಲಿ ಇರಲಿಲ್ಲ. ಅವನಿಗೂ ಅನಾಮಧೇಯ ಪತ್ರಗಳು ಬರತೊಡಗಿದವು. ಅವನ ವೃತ್ತಿವರ್ತುಲದಲ್ಲಿಯೂ

ಈ ಬಗ್ಗೆ ಮಾತುಕತೆಗಳಾಗತೊಡಗಿದವು.

ಶ್ರೀಧರನ ತಾಳ್ಮೆ ಕೆಡುತ್ತ ಬಂದಿತು. ಒಂದು ದಿನ ತಂದೆಯಲ್ಲಿ ಈ ವಿಷಯ ಪ್ರಸ್ತಾಪಿಸಿ

"ಇದೇನು ಡ್ಯಾಡಿ – ಕಲ್ಪನೆಯ ವಿಷಯ ನಾವು ಕೇಳುತ್ತಿರುವುದು ?" ಎಂದು ಕೇಳಿದ.

"ದುರ್ಭಾಷೆ – ಅಪಪ್ರಚಾರ ಶ್ರೀಧರ್. ಒಬ್ಬ ಹೆಣ್ಣುಮಗಳು – ಸುಂದರಿ, ಜಾಣೆ, ಶೀಲವತಿ ಸಾಹಸಜೀವಿಯಾಗಿ ತನ್ನ ಕಲಾನೈಪುಣ್ಯದಿಂದ ಭಾರತ ದಿಗ್ವಿಜಯ ಮಾಡುತ್ತಿದ್ದಾಳೆಂದರೆ ಎಷ್ಟು ಜನಕ್ಕೆ ಸಂಕಟವಾಗ ಬೇಡ."

"ಕಲ್ಪನಾ ದಾರಿ ಬಿಟ್ಟು ಹೋಗುತ್ತಿದ್ದಾಳೆಂದು ಎಲ್ಲರೂ ಅರಚುತ್ತಿದ್ದಾರೆ."

"ಎಲ್ಲರೂ ಎಂದರೆ ಯಾರು? ಅನಾಮಧೇಯ ಪತ್ರಿಕೆಗಳನ್ನು ಬರೆಯುವವರು ಗೌರವಾರ್ಹರೇ – ಅವರ ಮಾತು ಪ್ರಮಾಣವೆಂದು ನಾವು ಅಂಗೀಕರಿಸಬಹುದೇ ?"

"ಬೆಂಕಿಯಿಲ್ಲದೆ ಹೊಗೆಯಾಡುವುದೇ ಡ್ಯಾಡಿ."

"ಶ್ರೀಧರ್. ನಿನ್ನ ತಂಗಿಯ ಬಗ್ಗೆ ಈ ಅವಿವೇಕಿಗಳು ಬರೆಯುತ್ತಿರುವ ಪತ್ರಗಳನ್ನು ನೀನು ನಂಬುವೆಯಾ ?"

"ಸ್ವಲ್ಪಮಟ್ಟಿಗೆ ನಂಬಬೇಕಾಗುತ್ತದೆ. ಒಬ್ಬಿಬ್ಬರು ಸುಳ್ಳು ಹೇಳಬಹುದು – ಎಲ್ಲರೂ ಸುಳ್ಳು ಹೇಳುತ್ತಾರೆಂದು ನಂಬುವುದು ಹೇಗೆ ಸಾಧ್ಯ ?"

"ಸತ್ಯ ಒಪ್ಪಬೇಕಾದರೆ, ನಂಬಬೇಕಾದರೆ ಜನ ಹಿಂದು ಮುಂದು ನೋಡುತ್ತಾರೆ. ಅಸತ್ಯ ನಂಬಬೇಕಾದರೆ ಅವರು ವಿಚಾರ ಮಾಡುವ ಗೋಜಿಗೆ ಹೋಗುವುದಿಲ್ಲ. ಹೆಂಗಸರ ಬಗ್ಗೆ ಕೆಟ್ಟುದನ್ನಾಡುವುದು ನಮ್ಮ ಜನಗಳಿಗೆ ಪರಂಪರಾಗತವಾಗಿ ಬಂದಿರುವ ಪರಿಪಾಠ."

"ಕಲ್ಪನೆ ಕುಣಿದಂತೆ ನಾವೂ ಕುಣಿಯಬಾರದಾಗಿತ್ತು ಡ್ಯಾಡಿ. ಅವಳ ಮೇಲೆ ಸ್ವಲ್ಪ ಹಿಡಿತವಿಟ್ಟುಕೊಳ್ಳಬೇಕಾಗಿತ್ತು."

" ಶಾಸನ ಮಾಡುವುದಕ್ಕೆ ಅವಳು ನಮಗೆ ಅವಕಾಶವೇ ಕೊಟ್ಟಿಲ್ಲ ಸನ್. ತನ್ನ ಧರ್ಮ, ಕರ್ತವ್ಯ, ಜವಾಬ್ದಾರಿಯ ಪೂರ್ಣ ಪ್ರಜ್ಞೆ ಕಲ್ಪನೆಗೆ ಇದೆ. "

" ಈ ಬಗೆಯ ಸುದ್ದಿಗಳು ಕ್ಯಾಪ್ಟನ್ ವಿಜಯರ ಕಿವಿ ಮುಟ್ಟಿದರೇನು ಗತಿ? "

" ಹಾಗಂದರೇನು? "

" ಕಲ್ಪನೆಯ ಶೀಲ ಚೆನ್ನಾಗಿಲ್ಲವೆಂದು ತಿಳಿದ ಮೇಲೂ ಅವರು ಕಲ್ಪನೆಯನ್ನು ಮದುವೆಯಾಗಲೊಪ್ಪುತ್ತಾರೆಯೇ? "

" ಕಲ್ಪನೆಯ ಶೀಲದಲ್ಲಿ ಗೌರವವಿಲ್ಲದಿರುವವನು ಅವಳನ್ನು ಮದುವೆಯಾಗಬೇಕಾದ ಅಗತ್ಯವಿಲ್ಲ. "

" ಕ್ಯಾಪ್ಟನ್ ವಿಜಯ ಅವರು ನಿರಾಕರಿಸಿದರೆ ಮುಂದೆ ಯಾರೂ ಅವಳನ್ನು ಮದುವೆಯಾಗುವುದಿಲ್ಲ. "

" ನನ್ನ ಮಗಳನ್ನು ನಾನು ಸಾಕಬಲ್ಲೆ ಶ್ರೀಧರ್. "

" ಈ ಮಗಳು ನನ್ನ ಹೆಸರನ್ನೂ ಹಾಳು ಮಾಡುತ್ತಿದ್ದಾಳೆ. "

" ನಿನ್ನ ಹೆಸರು........! "

" ಹೌದು. ನಾನು ಕಲ್ಪನೆಯ ಅಣ್ಣನಲ್ಲವೇ – ಅವಳಿಗೆ ಕೆಟ್ಟ ಹೆಸರು ಬಂದರೆ ಅದು ನನ್ನ ಮೇಲೆ – ನನ್ನ ವೃತ್ತಿಯ ಮೇಲೆ ಪರಿಣಾಮವನ್ನುಂಟು ಮಾಡುತ್ತದೆ. "

" ಸುಶೀಲೆಯಾದ ನಿನ್ನ ತಂಗಿಯ ನಡತೆಗಿಂತಲೂ ಪಿಶುಣದ ಅಯೋಗ್ಯ ನುಡಿಗಳಿಗೆ ನೀನು ಬೆಲೆ ಕೊಡುವೆಯಲ್ಲವೇ? "

" ಹಾಗಲ್ಲ ಡ್ಯಾಡಿ........?

" ಕಲ್ಪನೆಗೂ ನನಗೂ ಸಂಬಂಧವಿಲ್ಲವೆಂದು ಬೇಕಾದರೆ ಸಾರಿ ಬಿಡು. ಈ ಮನೆಯಲ್ಲಿರುವುದು ನಿನ್ನ ಗೌರವಕ್ಕೆ ಕಡಿಮೆಯಾದರೆ ಬೇರೆ ಮನೆ ಮಾಡಿಕೊಂಡು ಹೋಗು. ಇನ್ನುಮೇಲೆ ನನ್ನ ಜತೆ ಕಲ್ಪನೆಯ ಬಗ್ಗೆ ಚರ್ಚಿಸಬೇಡ"

ಎಂದು ಹೇಳಿ ಎದ್ದು ಹೊರಟುಹೋದರು.

ಎರಡು ದಿನ ತಂದೆ – ಮಗನಿಗೆ ಮಾತೇ ಇಲ್ಲ. ಡಾಕ್ಟರು ಮಗನ

ಜತೆಗೆ ಊಟಕ್ಕೂ ಕೂಡುತ್ತಿರಲಿಲ್ಲ. ಶ್ರೀಧರನಿಗೆ ತುಂಬ ಪಶ್ಚಾತ್ತಾಪ ವಾಯಿತು. ತಾಯಿಯ ಮರೆಹೊಕ್ಕು ರಾಜಿ ಮಾಡಿಸಬೇಕೆಂದು ಪ್ರಾರ್ಥಿಸಿ ಕೊಂಡ. 'ನಿಮ್ಮ ತಂದೆ ಯಾವದಕ್ಕೂ ಕೋಪ ಮಾಡಿಕೊಳ್ಳುವವರಲ್ಲ ಶ್ರೀಧರ್. ಅವರಿಗೆ ಇಷ್ಟು ಕೋಪ ಬಂದಿರುವುದರ ಕಾರಣವೂ ಪ್ರಬಲ ವಾಗಿಯೇ ಇದೆ. ನೀನೇ ಹೋಗಿ ಅವರ ಜತೆ ರಾಜಿ ಮಾಡಿಕೊಳ್ಳುವು ದೊಳ್ಳೆಯದು ಎಂದು ಕಲ್ಯಾಣಮ್ಮನವರು ಮಗನಿಗೆ ಹೇಳಿದರು.

ಕಲ್ಪನಾ ಕಳಿಸಿದ್ದ ವೃತ್ತಪತ್ರಿಕೆಗಳನ್ನು ಕತ್ತರಿಸಿ, ಅವಳ ನೃತ್ಯದ ಬಗ್ಗೆ ಬಂದಿದ್ದ ಲೇಖನಗಳನ್ನು ಒಂದು ಪುಸ್ತಕಕ್ಕೆ ಅಂಟಿಸುತ್ತ ಡಾಕ್ಟರು ಕುಳಿತಿ ದ್ದರು. ಶ್ರೀಧರ ಬಂದು ನಿಂತುಕೊಂಡ. ಡಾಕ್ಟರು ತಮ್ಮ ಕೆಲಸ ಸಾಗಿಸಿ ದರು. ಕತ್ತೆತ್ತಿ ನೋಡಲಿಲ್ಲ – ಮಗನನ್ನು ಮಾತನಾಡಿಸಲಿಲ್ಲ.

"ಡ್ಯಾಡಿ" ಎಂದ.

ಡಾಕ್ಟರು ಕತ್ತೆತ್ತಿ ನೋಡಿದರು.

"ಮೊನ್ನೆ ಕಲ್ಪನೆಯ ಬಗ್ಗೆ ನಾನು ಆಡಿದ ಮಾತಿಗೆ ವಿಷಾದಪಡು ತ್ತೇನೆ. ದಯೆಯಿಟ್ಟು ನನ್ನ ಕ್ಷಮಿಸಿ."

"ನಿಜವಾಗಿಯೂ ವಿಷಾದವಾಗಿದೆಯೋ ನನ್ನ ಸಮಾಧಾನಪಡಿಸಲು ಹೀಗೆ ಹೇಳುತ್ತಿರುವೆಯೋ ಶ್ರೀಧರ್."

"ನಿಜವಾಗಿಯೂ ವಿಷಾದವಾಗಿದೆ ಡ್ಯಾಡಿ."

"ನೋಡು ಶ್ರೀಧರ – ಒಂದು ವೇಳೆ ಕಲ್ಪನಾ ದಾರಿತಪ್ಪಿ ಹೋಗಿದ್ದರೆ ಅವಳಿಗೆ ವಿವೇಕ ಹೇಳಿ ಅವಳನ್ನು ಸರಿಯಾದ ದಾರಿಗೆ ತರುವುದು ಅಣ್ಣನಾದ ನಿನ್ನ ಕರ್ತವ್ಯ. ಕಲ್ಲೆಸೆಯುವವರ ಜತೆ ಸೇರಿಕೊಂಡು ನೀನೂ ಕಲ್ಲೆಸೆಯು ವುದು ಧರ್ಮವಲ್ಲ. ಕಲ್ಪನಾ ತನ್ನ ನಡತೆಯಿಂದಾಗಲಿ ಮಾತುಕತೆಯಿಂದಾ ಗಲಿ ಯಾರೂ ಆಕ್ಷೇಪಿಸಲು ಅವಕಾಶ ಕೊಟ್ಟಿಲ್ಲ. ನಾಲ್ಕು ಜನ ಅವಿವೇಕಿ ಗಳು, ಅವಳ ಕೀರ್ತಿಯನ್ನು ಕಂಡು ಸಹಿಸಲಾರದೆ ಕೆಟ್ಟ ಮಾತು ಆಡಿದರೆ ಆಡಿಕೊಳ್ಳಲಿ. ಸೂರ್ಯನನ್ನು ಕುರುಡ ನಿಂದಿಸಿದರೆ ಸೂರ್ಯನಿಗೇನು ಬಾಧಕವಿಲ್ಲ."

"ನಿಜ ಡ್ಯಾಡಿ. ನನಗೂ ಸ್ವಲ್ಪ ಕಾಲ ಬುದ್ಧಿಶೂನ್ಯವಾಗಿತ್ತು. ನೀವು

ವಿವೇಕ ಕಲಿಸಿದಿರಿ. ದಯೆಯಿಟ್ಟು ಊಟಕ್ಕೆ ಏಳಿ – ಇವತ್ತಾದರೂ ಜತೆಯಲ್ಲಿ ........ ”

ಶ್ರೀಧರನ ಗಂಟಲು ಬಿಗಿದು ಬಂದಿತು. ಡಾಕ್ಟರರು ಅವನನ್ನಪ್ಪಿಕೊಂಡು ಅಡಿಗೆಯ ಮನೆಗೆ ಕರೆದೊಯ್ದರು. ಕಲ್ಯಾಣಮ್ಮನವರು ತಂದೆ, ಮಗನ ಸಖ್ಯ ನೋಡಿ ಆನಂದಪರವಶರಾದರು.

ಕೀರ್ತಿಯ ಬತ್ತಳಿಕೆಯಲ್ಲಿದ್ದ ಎಲ್ಲ ಮಹಾಸ್ತ್ರಗಳೂ ಮುಗಿದು ಹೋಗಿದ್ದವು. ‘ ಚೋಟುದ್ದದ ಹುಡುಗಿಯಿಂದ ತಾನು ಸೋಲುಪಡೆಯಬೇಕಾಯಿತಲ್ಲ ’ ಎಂದು ಪರಿತಪಿಸಿದ.





# ೩. ಕಲ್ಪನಾ

## ೧

ವಿಜಯ ನಿರೀಕ್ಷಿಸಿದಂತೆ ಅವನನ್ನು ಮಿಲ್ಟ್ರಿ ಅಧಿಕಾರಿಗಳು ಸಿಂಗಾಪುರಕ್ಕೆ ಕಳಿಸಲಿಲ್ಲ. ಆಸಾಮಿನ ಗುಡ್ಡಗಾಡಿಗೆ ಕಳಿಸಿದರು. ಸಿಂಗಾಪುರಕ್ಕೆ ಹೋಗುತ್ತೇನೆ, ಅಲ್ಲಿ ಗೆಳೆಯರು ನಿಸ್ಸಾರ್, ಸೋಹನ್‌ಸಿಂಗ್ ಸಿಕ್ಕುತ್ತಾರೆ ಎಂದು ನಿರೀಕ್ಷಿಸುತ್ತಿದ್ದ ವಿಜಯನಿಗೆ ಆಶಾಭಂಗವಾಯಿತು.

ಆಸಾಮ್ ಸೇರಿದ ಎಂಟು ಹತ್ತು ದಿನಗಳಲ್ಲಿ ವಿಜಯನಿಗೆ ಮಲೇರಿಯಾ ಜ್ವರ ಅಂಟಿಕೊಂಡಿತು. ಒಂದು ತಿಂಗಳು ಹಾಗೂ ಹೀಗೂ ಅಲ್ಲೇ ಹೆಣಗಾಡಿದ. ಜ್ವರ ನಿಂತಿತಾದರೂ ವಿಶೇಷ ನಿಶ್ಶಕ್ತಿ ವ್ಯಾಪಿಸಿತು. ಮಿಲ್ಟ್ರಿ ಡಾಕ್ಟರು ರಜಾ ಕೊಟ್ಟು ಅವನನ್ನು ಊರಿಗೆ ಕಳಿಸಿ ಕೊಟ್ಟರು.

ಬೆಂಗಳೂರಿಗೆ ಬಂದವನೇ ವಿಜಯ ಮೊದಲು ಡಾಕ್ಟರ ಮನೆಗೆ ಹೋದ. ಕಲ್ಪನಾ ಇನ್ನೂ ಪ್ರವಾಸ ಮುಗಿಸಿಕೊಂಡು ಬರದಿರುವುದನ್ನು ಕಂಡು ಅವನ ಮನಸ್ಸಿಗೆ ವ್ಯಥೆಯಾಯಿತು. ಡಾಕ್ಟರು ಮಗಳ ದಿಗ್ವಿಜಯವನ್ನು ವರ್ಣಿಸಿ, ಅವಳ ಮೇಲೆ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ಸುದ್ದಿಗಳು, ಲೇಖನಗಳ ಕಡತ ( File ) ವನ್ನು ವಿಜಯನ ಕೈಯಲ್ಲಿಟ್ಟರು.

ವಿಜಯ ಕಾಹಿಲೆಯಾಗಿದ್ದುದು ಅವನ ಮುಖದಲ್ಲಿಯೇ ಸ್ಪಷ್ಟವಾಗಿ

ಮೂಡಿತ್ತು. ಕಲ್ಯಾಣಮ್ಮನವರು ಅವನ ಯೋಗಕ್ಷೇಮ ವಿಚಾರಿಸಿ ಸಹಾನುಭೂತಿ ವ್ಯಕ್ತಪಡಿಸಿದರು.

" ಈಗ ಕಲ್ಪನಾದೇವಿ ಎಲ್ಲಿದ್ದಾರೆ ? "

" ಅಮೃತಸರದಲ್ಲಿದ್ದಾಳೆ. "

" ಪ್ರವಾಸ ಇನ್ನೂ ಎಷ್ಟು ದಿನಗಳಾಗಬಹುದು ? "

" ಇಪ್ಪತ್ತು–ಇಪ್ಪತ್ತೈದು ದಿನಗಳಲ್ಲಿ ಹಿಂದಿರುಗುತ್ತೇನೆಂದು ಬರೆದಿದ್ದಾಳೆ. ಅಷ್ಟರಲ್ಲಿಯೇ ನೀವು ಡ್ಯೂಟಿಯ ಮೇಲೆ ಹೋಗುವ ಸಂಭವವಿದೆಯೇ ? "

" ಹೇಳಲಿಕ್ಕೆ ಬರುವುದಿಲ್ಲ. ಯಾವಾಗ ಕರೆ ಬರುತ್ತದೋ ? "

" ಅಮೃತಸರದ ವಿಳಾಸ ಕೊಡುತ್ತೇನೆ– ಬೇಕಾದರೆ ಕಾಗದ ಬರೆಯಿರಿ. "

" ಬರೆದೇನು ಪ್ರಯೋಜನ. ನನ್ನ ಕಾಗದ ತಲುಪುವ ಹೊತ್ತಿಗೆ ಅವರು ಬೇರೆ ಊರಿಗೆ ಹೋಗಿರುತ್ತಾರೆ. "

" ಆದರೇನು ? ಕಾಗದ ಕಳಿಸಿ ಕೊಡುತ್ತಾರೆ. "

" ಅಡ್ರೆಸ್ ಕೊಡಿ. "

ಡಾಕ್ಟರು ಕಾಗದದ ಮೇಲೆ ಅಡ್ರೆಸ್ ಬರೆದುಕೊಟ್ಟು

" ನಿತ್ಯ ಬರುತ್ತಿರಿ ಕ್ಯಾಪ್ಟನ್. ಇಲ್ಲೇ ಊಟಕ್ಕೆ ಬನ್ನಿ. ಯಾವ ಸಂಕೋಚವನ್ನೂ ಇಟ್ಟುಕೊಳ್ಳಬೇಡಿ. ನೀವು ಊರಿಗೆ ಬಂದಿರುವ ಸಂಗತಿ ನಾನೂ ಕಲ್ಪನೆಗೆ ಬರೆಯುತ್ತೇನೆ. "

" ಒಳ್ಳೆಯದು ಸರ್. ಥ್ಯಾಂಕ್ಸ್. " ಎಂದು ಹೇಳಿದ.

ವಿಜಯನಿಗೆ ಹೊತ್ತುಗಳೆಯುವುದು ಸಮಸ್ಯೆಯಾಗಿತ್ತು. ಕಲ್ಪನೆಯಿಲ್ಲದ ಅವಳ ಮನೆ ಏಕೋ ಶೂನ್ಯವಾಗಿ ಕಾಣುತ್ತಿತ್ತು. ಅವನ ಜೀಪ್‌ಕಾರು ಅನೈಚ್ಛಿಕವಾಗಿ ಕೀರ್ತಿಯ ಮನೆಗೆ ಬಂದಿತು.

ವಿಜಯನನ್ನು ಕಂಡೊಡನೆಯೇ ಓಡಿಬಂದು ಕೀರ್ತಿ ಅವನನ್ನಪ್ಪಿ ಸ್ವಾಗತ ಬಯಸಿದ.

" ನಿಸ್ಸಾರ್, ಸೋಹನ್ ಹೇಗಿದ್ದಾರೆ ಕೀರ್ತಿಯವರೇ ? "

ಎಂದು ಕೇಳಿದ.

" ಚೆನ್ನಾಗಿದ್ದಾರೆ. ಕೆಲವು ದಿವಸಗಳ ಹಿಂದೆ ಅವರಿಂದ ಕಾಗದ ಬಂತು. ಎಲ್ಲಿಂದ ಬಂದಿತೋ ಗೊತ್ತಿಲ್ಲ. ಕಾಗದ ಮಿಲ್ಟ್ರಿ ಅಧಿಕಾರಿಗಳ ಕೈದಾಟಿ ಬಂದಿದೆ. "

" ಸದ್ಯ – ಬದುಕಿದ್ದಾರಲ್ಲಾ ! "

ಎಂದು ವಿಜಯ ತೃಪ್ತಿಪಟ್ಟುಕೊಂಡ.

" ಬಹಳ ಇಳಿದು ಹೋಗಿದ್ದೀರಿ ಕ್ಯಾಪ್ಟನ್. "

" ಹೌದು – ನನಗೆ ಮಲೇರಿಯಾ ಅಂಟಿಕೊಂಡು ತುಂಬ ಕಾಡಿಸಿತು. ರಜಾ ತೆಗೆದುಕೊಂಡು ಇತ್ತ ಬಂದೆ. "

" ಬನ್ನಿ – ಬನ್ನಿ ನಾಲ್ಕು ದಿನ ವಿಶ್ರಾಂತಿ ಪಡೆದು, ಆರೋಗ್ಯ ಸುಧಾರಿಸಿಕೊಳ್ಳಿ. "

ಎಂದು ಕೀರ್ತಿ ಉಪಚರಿಸಿದ.

ಉಪಹಾರದ ಜತೆಗೇ ಪಾನೀಯಗಳು ಬಂದವು. ಕೀರ್ತಿಯ ಆತಿಥ್ಯಕ್ಕೆ ಸ್ವಲ್ಪವೂ ಕೊರೆ ಬಾರದಂತೆ ವಿಜಯ ಕಂಠಪೂರ್ತಿ ಹೊಡೆದ.

ಕೀರ್ತಿಯ ತಲೆಯಲ್ಲಿ ಒಂದು ಅದ್ಭುತ ವಿಚಾರ ಹೊಳೆಯಿತು. ' ವಿಜಯನನ್ನು ಉಪಯೋಗಿಸಿಕೊಂಡು ಕಲ್ಪನೆಯನ್ನು ಮುರಿಯಬೇಕು ' ಎಂಬ ದುರಾಲೋಚನೆ ಅವನ ದುಷ್ಟಬುದ್ಧಿಗೆ ಹೊಳೆಯಿತು.

ಸಂಜೆಯ ಮೇಜುವಾನಿಗೆ ಜೀವಾನಂದಂ, ಕ್ಯಾಪ್ಟನ್ ಗೋವಿಂದನ್, ಕ್ಯಾಪ್ಟನ್ ಶಾಂತಸಿಂಗರೂ ತಾರಾ, ಚಂದ್ರಮುಖಿ, ಮೀರಾ ಸೇರಿಕೊಂಡರು. ತನ್ನ ರೂಮಿಗೆ ಹೋಗಬೇಕೆನ್ನುವ ಅರಿವೂ ಕಾಲಕ್ರಮೇಣ ವಿಜಯನಿಗೆ ಶೂನ್ಯವಾಗುತ್ತ ಬಂದಿತು.

ವಿಜಯನ ಶಿಕ್ಷಣದ ಭಾರವನ್ನು ತಾರಾ ಸಂತೋಷವಾಗಿ ವಹಿಸಿಕೊಂಡಳು. ವಿಜಯನನ್ನು ಪ್ರಮತ್ತನನ್ನಾಗಿ ಮಾಡಿ ಅವನ ತಲೆಯಲ್ಲಿ ಕಲ್ಪನೆಯ ವಿರುದ್ಧ ವಿಚಾರಗಳನ್ನು ತುಂಬುತ್ತ ಬಂದಳು. ಅವಳ ಕ್ರಿಯಾಶಕ್ತಿ ಅವಳಿಗೇ ಆಶ್ಚರ್ಯವನ್ನುಂಟು ಮಾಡಿತು. ಒಂದು ದಿನ ವಿಜಯ

" ತಾರಾ ಹೇಳುತ್ತಿರುವುದು ನಿಜವೇ ಕೀರ್ತಿಯವರೇ ? "

ಎಂದು ಕೇಳಿದ. ಏನೂ ಅರಿಯದವನಂತೆ ನಟಿಸುತ್ತಾ ಕೀರ್ತಿ

" ಯಾವ ವಿಷಯ " ಎಂದು ಕೇಳಿದ.

" ಕಲ್ಪನಾದೇವಿಯ ವಿಷಯ. "

" ಅವರು ಈಗ ದೊಡ್ಡವರಾಗಿ ಬಿಟ್ಟಿದ್ದಾರೆ. ನಮಗೇಕೆ ಅವರ ಸುದ್ದಿ. ಕಲ್ಪನಾದೇವಿಯ ವಿಷಯ ಏನೂ ಮಾತನಾಡಕೂಡದೆಂದು ನಾನು ತಾರೆಗೆ ಹೇಳಿದ್ದೆ – ಅವಳೇಕೆ ಈ ವಿಷಯಕ್ಕೆ ಮತ್ತೆ ಬಾಯಿ ಹಾಕುತ್ತಿರುವಳು ? "

" ಕಲ್ಪನಾದೇವಿ ನಿಜವಾಗಿ ದಾರಿಬಿಟ್ಟು ಹೋಗಿರುವರೇ, ಕೀರ್ತಿಯ ವರೇ ? "

" ಜನಗಳ ಬಾಯಿ ಕಟ್ಟುವವರು ಯಾರು ಕ್ಯಾಪ್ಟನ್. ಮೊದಮೊದಲು ನಾನೂ ನಂಬಲಿಲ್ಲ. ಆದರೆ - ವಿಶ್ವಾಸಾರ್ಹವಾದ ಕಡೆಗಳಿಂದ ಸುದ್ದಿ ಬಂದ ಮೇಲೆ ನಂಬದಿರಲು ಹೇಗೆ ಸಾಧ್ಯ ? "

ಎಂದು ಹೇಳಿದ. ಕೀರ್ತಿಯ ಬ್ರಹ್ಮಾಸ್ತ್ರ ವಿಜಯನನ್ನು ಬಲವಾಗಿ ಘಾತಿಸಿತು.

ಕಲ್ಪನೆಗೆ ಕಾಗದ ಬರೆಯುವುದೂ ವಿಜಯನಿಗೆ ಜೀಡವಾಯಿತು. ಸಂದೇಹಗ್ರಸ್ತವಾದ ಅವನ ಮನಸ್ಸು ನೂರೆಂಟು ದುರಾಲೋಚನೆಗಳ ನೆಲೆ ವೀಡಾಯಿತು.

" ಎರಡು ಬಾರಿ ಮದುವೆಯಾಗೆಂದು ನಾನು ಪ್ರಾರ್ಥಿಸಿಕೊಂಡರೂ ಅವರು ನಿರಾಕರಿಸಿದುದಕ್ಕೆ ಇದೇ ಕಾರಣವಾಗಿರಬಹುದೇ ? ನಾನು ಯಾರು - ಒಬ್ಬ ಸಾಮಾನ್ಯ ಮಿಲ್ಟ್ರಿ ಕ್ಯಾಪ್ಟನ್. ಅವಳಿಗೆ ಗೌವರ್ನರುಗಳು, ಮಂತ್ರಿಗಳ ಸ್ನೇಹ ದೊರಕುತ್ತಿರುವಾಗ ನನ್ನಂಥ ನಿರ್ಗತಿಕನನ್ನೇಕೆ ಮದುವೆಯಾಗುತ್ತಾಳೆ. ಸ್ತ್ರೀ ಜಾತಿಯ ಯೋಗ್ಯತೆಯೇ ಇಷ್ಟು. ಕೌಟಿಲ್ಯವೇ ಸ್ತ್ರೀಜಾತಿಯ ಪ್ರಾಣ. ಕಲ್ಪನೆಯೂ ಒಂದು ಹೆಣ್ಣು – ದುರ್ಬಲ ಹೆಣ್ಣು – ತುಚ್ಛ ಹೆಣ್ಣು ! ಅವಳಿಗಾಗಿ ನಾನೇಕೆ ಇಷ್ಟು ಹಂಬಲಿಸಿದೆ. ಮದರಾಸಿನ ಪ್ರಕರಣವನ್ನು ದೊಡ್ಡದು ಮಾಡಿಕೊಂಡು ಎಂಥ ಸೋಗು ಹಾಕಿದಳು. "

ಎಂದು ವಿಚಾರ ಮಾಡತೊಡಗಿದ. ಅವನ ಹೃದಯದಲ್ಲಿ ಎದ್ದಿದ್ದ ಅಗ್ನಿಗೆ ತಾರಾದೇವಿ ತಪ್ಪದೆ ಆಜ್ಯ ಹುಯ್ಯುತ್ತಲಿದ್ದಳು.

ಕೀರ್ತಿಯ ಮನೆಯಲ್ಲಿ ಸೆರೆಯಾಳಾಗಿದ್ದ ವಿಜಯನಿಗೆ ಕಲ್ಪನಾ ಊರಿಗೆ ಬಂದುದೂ ತಿಳಿಯಲಿಲ್ಲ. ಒಂದು ದಿನ ಅಕಸ್ಮಾತ್ತಾಗಿ ಕೆಲವು ಹಳೆಯ ಪತ್ರಿಕೆಗಳನ್ನು ನೋಡುತ್ತಿದ್ದಾಗ ಸ್ಥಳೀಯ ' ಡೈಲಿ ಪೋಸ್ಟ ' (Daily Post)

ಪತ್ರಿಕೆಯಲ್ಲಿ ಬಂದಿದ್ದ ಸುದ್ದಿ ಅವನ ಗಮನ ಸೆಳೆಯಿತು. ಭಾರತ ದಿಗ್ವಿಜಯ ಮಾಡಿಕೊಂಡು ಊರಿಗೆ ಹಿಂದಿರುಗಿದ್ದ ಕಲ್ಪನಾದೇವಿಗೆ ಪತ್ರಿಕೆ ಸ್ವಾಗತ ಬಯಸಿತ್ತು. ಮುನಸಿಪಾಲಿಟಿ ಈ ಕಲಾದೇವಿಗೆ ಬಿನ್ನವತ್ತಳೆ ಅರ್ಪಿಸ ಬೇಕೆಂದು ಸಂಪಾದಕರು ಸೂಚಿಸಿದ್ದರು.

'ಕಲ್ಪನಾ ಊರಿಗೆ ಬಂದಿದ್ದಾಳೆ – ಬಂದಿದ್ದಾಳೆ' ಎಂದು ವಿಜಯನ ಮನಸ್ಸು ಮೊರೆಯತೊಡಗಿತು. ಕೀರ್ತಿಯ ಮನೆಯಲ್ಲಿ ನಿಲ್ಲಲು ಸಾಧ್ಯ ವಾಗಲಿಲ್ಲ. ಎದ್ದವನೇ ವಸ್ತ್ರಗಳನ್ನು ಬದಲಾಯಿಸಿಕೊಂಡು ನೇರವಾಗಿ ಕಲ್ಪನಾದೇವಿಯ ಮನೆಗೆ ಬಂದ.

ಡಾಕ್ಟರು ಸ್ವಾಗತ ಬಯಸುತ್ತ

"ಇಷ್ಟು ದಿನ ಎಲ್ಲಿಗೆ ಹೋಗಿಬಿಟ್ಟಿರಿ ಕ್ಯಾಪ್ಟನ್. ಕಲ್ಪ ಊರಿಗೆ ಬಂದು ಎಂಟು ದಿವಸಗಳಾದವು – ಅವಳಿಗೆ ನೀವು ಕಾಗದ ಬರೆಯಲಿಲ್ಲವಂತೆ."

"ಇಲ್ಲ ಬರೆದಿದ್ದೆ."

ಎಂದು ಸುಳ್ಳು ಹೇಳಲು ವಿಜಯ ಹಿಂದೆಮುಂದೆ ನೋಡಲಿಲ್ಲ. ಕಲ್ಪನಾ ಬರಲು ಡಾಕ್ಟರು ಎದ್ದು

"ನನ್ನ ಕ್ಷಮಿಸಿ – ಸ್ವಲ್ಪ ಪೇಟೆಯ ಕಡೆಗೆ ಹೋಗಿ ಬರಬೇಕಾಗಿದೆ."

ಎಂದು ಹೇಳಿ ಎದ್ದು ಹೋದರು. ಉದ್ದೇಶಪೂರ್ವಕವಾಗಿಯೇ ಡಾಕ್ಟರು ಎದ್ದುಹೋದರೆಂದು ವಿಜಯ ಭಾವಿಸಿಕೊಂಡ.

"ಚೆನ್ನಾಗಿದ್ದೀರಾ?" ಎಂದು ಕಲ್ಪನಾ ಕೇಳಿದಳು.

"ಇದ್ದೇನೆ."

"ಮೈಯಲ್ಲಿ ಸರಿಯಾಗಿರಲಿಲ್ಲವಂತೆ! ಈಗ ಹೇಗಿದೆ?"

"ಗುಣವಾಯಿತು. ಆರೋಗ್ಯವಾಗಿದ್ದೇನೆ."

"ಮೊದಲಿನಂತೆ ನೀವು ಕಾಣುತ್ತಿಲ್ಲ – ಸ್ವಲ್ಪ ಬಡವಾಗಿದ್ದೀರಿ."

ಕಲ್ಪನೆಯ ಅಕುಟಿಲ, ಅಕೃತ್ರಿಮ ಮಾತುಗಾರಿಕೆ ಕ್ಷಣಕಾಲ ವಿಜಯ ನನ್ನು ಅಂತರ್ಮುಖಿಯನ್ನಾಗಿ ಮಾಡಿತು. 'ಕೀರ್ತಿಯ ನಾಟ್ಯಶಾಲೆಯಲ್ಲಿ ಕಲ್ಪನಾದೇವಿಯ ಬಗ್ಗೆ ನಾನು ಕೇಳಿದುದೆಲ್ಲಾ ಸುಳ್ಳಾಗಿರಬಹುದೇ?" ಎಂದುಕೊಂಡ.

"ನಿಮ್ಮ ಪ್ರವಾಸ ಚೆನ್ನಾಗಿ ಆಯಿತೇ?"

" ಪತ್ರಿಕೆಗಳು ಹೇಳುವಂತೆ 'ದಿಗ್ವಿಜಯ' ಮಾಡಿ ಬಂದೆ ಎಂದರೆ ನೀವು ನನ್ನ ಜಂಬಗಾತಿ ಎಂದು ಕರೆಯುವಿರೇನೋ ? "

" ಎಲ್ಲರೂ ನಿಮ್ಮನ್ನು ಮುಕ್ತಕಂಠದಿಂದ ಹೊಗಳುತ್ತಿದ್ದಾರೆ. "

" ನೀವೇಕೆ ಕಾಗದ ಬರೆಯಲಿಲ್ಲ. "

" ಡಾಕ್ಟರಿಂದ ವಿಳಾಸ ತೆಗೆದುಕೊಂಡು ಬರೆದೆ. ನಿಮಗೇಕೆ ತಲುಪಲಿಲ್ಲವೋ ಕಾಣೆ. "

ಕಲ್ಪನೆಯ ಮುಗ್ಧ ಮನಸ್ಸಿಗೆ ವಿಜಯ ಸುಳ್ಳು ಹೇಳುತ್ತಿದ್ದಾನೆಂದೇ ಹೊಳೆಯಲೊಲ್ಲದು.

" ನಿಮ್ಮ ಕಾಗದದ ದಾರಿ ನೋಡಿ ನೋಡಿ ನನಗೆ ಸಾಕಾಯಿತು. ನೀವು ಇಲ್ಲಿಗೆ ಬಂದ ಸಂಗತಿ ಡ್ಯಾಡಿ ಬರೆದರು. ಅಂದಿನಿಂದ ಇಂದಿನವರೆಗೆ ಎಲ್ಲಿಗೆ ಹೋಗಿಬಿಟ್ಟಿರಿ ? "

" ಯಾವದೋ ಸ್ಪೆಷಲ್ ಡ್ಯೂಟಿ ( Special Duty ) ಬಿದ್ದಿತು. ಇತ್ತ ಬರಲಾಗಲಿಲ್ಲ. "

" ರಜದಲ್ಲಿರುವಿರಂತೆ ! "

" ಹೌದು. "

" ರಜ ಯಾವಾಗ ಮುಗಿಯುತ್ತದೆ ? "

" ಮುಗಿದು ಹೋಯಿತು. ಡ್ಯೂಟಿ ಕಾಲ್ ( Duty call ) ನಿರೀಕ್ಷಿಸುತ್ತಿದ್ದೇನೆ. "

" ಅಂದರೆ ಹೇಳದೆ ಕೇಳದೆ ಹೊರಟು ಹೋಗುವಿರಾ ? "

" ಮಿಲ್ಟ್ರಿ ಜೀವನವೇ ಹಾಗಿದೆ – ನಾನೇನು ಮಾಡಲಿ. "

ಕಲ್ಪನಾ ಏನನ್ನೋ ನಿರೀಕ್ಷಿಸುತ್ತಿದ್ದಳು. ವಿಜಯ ಆ ಸುದ್ದಿಯನ್ನೇ ತೆಗೆಯಲೊಲ್ಲ. ಮಾತಿನ ಚಕಮಕಿಗೆ ಕಲ್ಪನಾ ಬೇಸತ್ತು

" ನೀವು ಹಿಂದೆ ಒಂದೆರಡು ಬಾರಿ ಪ್ರಸ್ತಾಪಿಸಿದ ವಿಷಯ ನೆನಪಿದೆಯೇ ? "

" ಹೋಗಲಿ ಬಿಡಿ ಕಲ್ಪನಾದೇವಿ – ಆ ವಿಷಯವೇಕೆ ? "

" ವಿಜಯ್........ "

ವಿಜಯ ಉತ್ತರ ಕೊಡದೆ ಕತ್ತೆತ್ತಿ ನೋಡಿದ.

" ಎರಡು ಸಾರಿ ಕೇಳಿದ ಪ್ರಶ್ನೆಯನ್ನು ಮೂರನೆಯ ಸಾರಿ ಕೇಳುವುದಿಲ್ಲವೇ ? "

" ಕಲ್ಪನಾದೇವಿ - ಒಂದೆರಡು ತಿಂಗಳು ನನ್ನ ಪ್ರಶ್ನೆಯನ್ನೇ ಕುರಿತು ನಾನು ತುಂಬ ವಿಚಾರ ಮಾಡಿದ್ದೇನೆ. ನೀವು ಯೋಚನೆ ಮಾಡಿದುದು ಸರಿಯೆನಿಸಿತು. ನಾವು ಸ್ನೇಹಿತರಾಗಿರಬಹುದಷ್ಟೆ – ದಂಪತಿಗಳಾಗಿರುವುದು ಸಾಧ್ಯವಿಲ್ಲ. "

" ಏಕೆ ಹಾಗನ್ನುವಿರಿ. "

" ದಾಂಪತ್ಯ ಜೀವನಕ್ಕೂ ನಾಟ್ಯ ಜೀವನಕ್ಕೂ ಮೈತ್ರಿ ಬರುವುದಿಲ್ಲ ಎಂದು ನೀವೇ ಹೇಳಲಿಲ್ಲವೇ ? "

" ದಾಂಪತ್ಯ ಜೀವನಕ್ಕಾಗಿ ನಾನು ನಾಟ್ಯ ಜೀವನ ಬಿಡಲು ಸಿದ್ಧವಾಗಿದ್ದೇನೆ. "

" ಈ ತ್ಯಾಗದಿಂದ ಉಭಯತರಿಗೂ ಸಂತೋಷವಾಗುವುದಿಲ್ಲ - ಹಿತವಾಗುವುದಿಲ್ಲ. ಇಂದಲ್ಲ ನಾಳೆ ನಿಮ್ಮ ಮನಸ್ಸು ನಾಟ್ಯದ ಕಡೆಗೆಳೆಯುತ್ತದೆ. ' ಕೀರ್ತಿಯ ಶಿಖರದಲ್ಲಿದ್ದ ನನ್ನನ್ನು ಇವನು ಮನೆಮೂಳಿ ಮಾಡಿದನಲ್ಲಾ ' ಎಂದು ನೀವು ಪಶ್ಚಾತ್ತಾಪ ಪಡುವಿರಿ. "

" ಇಲ್ಲ ವಿಜಯ್ - ನಿಮಗೆ ಬೇಡವಾದರೆ ನಾನು ಮತ್ತೆ ಗೆಜ್ಜೆ ಮುಟ್ಟುವುದಿಲ್ಲ. ನೀವು ಒಪ್ಪಿದರೆ ನಾಳೆಯೇ ಲಗ್ನವಾಗಲು ನಾನು ಸಿದ್ಧಳಾಗಿದ್ದೇನೆ. "

ಎಂದು ಹೇಳಿದಳು. ವಿಜಯ ಮೌನ ತಳೆದು ಸ್ವಲ್ಪಹೊತ್ತು ಕುಳಿತು

" ನನಗೆ ಸ್ವಲ್ಪ ಕಾಲಾವಕಾಶ ಕೊಡಿ – ವಿಚಾರಮಾಡಿ ತಿಳಿಸುತ್ತೇನೆ"

ಎಂದು ಹೇಳಿ ಎದ್ದುಹೋದ.

ಕಲ್ಪನೆಯ ದುಃಖದ ಕಟ್ಟೆಯೊಡೆಯಿತು. ತಾಯಿಯ ಸಮಾಧಾನದ ಮಾತೂ ಅವಳಿಗೆ ಶಾಂತಿಯನ್ನು ಕೊಡಲಿಲ್ಲ.

೨

ಕೀರ್ತಿ ಕಲ್ಪಿಸಿದ್ದ ‘ ಪಾಪ ಸರೋವರ ’ ದಲ್ಲಿ ವಿಜಯ ಮೀಯುತ್ತಿದ್ದರೂ, ಅದರಲ್ಲಿಯೇ ಮುಳುಗಿರಲಿಲ್ಲ. ಅವನ ದುರ್ಬಲ ಮನಸ್ಸು ಪಾಪ ಪುಣ್ಯಗಳ ವಿಚಾರ ಮಾಡುತ್ತಿತ್ತು. ಸತ್ಯ–ಮಿಥ್ಯೆಗಳ ಅಂತರವನ್ನರಿಯಲು ಹಾತೊರೆಯುತ್ತಿತ್ತು.

ಡಾಕ್ಟರು ಮತ್ತು ಅವರ ಮನೆಯವರ ಪರಿಚಯವಾದ ಮೇಲೆ ವಿಜಯನ ಜೀವನ ವಿಶೇಷ ಮಾರ್ಪಾಟಿಗೊಳಗಾಯಿತು. ಹಿಂದೆಂದೂ ಅವನು ಕಾಣದಿದ್ದ ಶಾಂತಿ, ಹಿಂದೆಂದೂ ಅನುಭವಿಸದಿದ್ದ ಶುದ್ಧಾನಂದಗಳ ಅನುಭವವಾಗಿತ್ತು.

ಕಲ್ಪನೆಯ ಧ್ಯಾನ, ತಮ್ಮಿಬ್ಬರ ಮುಂದಿನ ಜೀವನ ಚಿತ್ರ ಅವನ ಮನಸ್ಸನ್ನು ಬೇರೆ ಯಾವದೋ ಪ್ರಪಂಚಕ್ಕೊಯ್ದು ನಿತ್ಯ ತೃಪ್ತಿಯನ್ನೊದಗಿಸುತ್ತಿತ್ತು.

ಆ ಕನಸು ಒಡೆದು ಹೋಗಿತ್ತು. ನಿಧಿಗಾಗಿ ಯಾವಜ್ಜೀವವೂ ಪರಿತಪಿಸುತ್ತಿದ್ದವನಿಗೆ ಅದು ಕೈಗೂಡಿದಾಗ, ವಿಕರ್ಷಣೆ ಹುಟ್ಟಿದಂತಾಗಿತ್ತು. ‘ ಇದು ಸಂಪತ್ತಿನ ಭಂಡಾರವಲ್ಲ – ಹಾವಿನ ಹುತ್ತ ’ ಎಂದು ಹೆದರಿ ಕೈಬಿಟ್ಟಂತಾಗಿತ್ತು.

ಕಲ್ಪನಾದೇವಿ ತಾನಾಗಿಯೇ ಮದುವೆ ಪ್ರಸ್ತಾಪ ಮಾಡಿದ್ದಳು – ನಾಳೆಯೇ ಮದುವೆಯಾಗಲಿ ಎಂದು ಸೂಚಿಸಿದ್ದಳು. ಇದ್ದಕ್ಕಿದ್ದಂತೆ ಅವಳಿಗೇಕೆ ಇಷ್ಟು ಮದುವೆಯ ಆತುರ ಹುಟ್ಟಿತು ? ತಾನು ಎರಡು ಸಲ ಬೇಡಿಕೊಂಡಾಗ ‘ ಯೋಚನೆ ಮಾಡಬೇಕು ’ ಎಂದು ನಿರ್ದಯೆಯಿಂದ ನುಡಿದ ಕಲ್ಪನಾ ಇಂದು ತಾನಾಗಿಯೇ ಮದುವೆಗೆ ಹಾತೊರೆಯುತ್ತಿರುವುದೇಕೆ ?

ಕೀರ್ತಿಯ ಮಾತು ನಿಜವಾಗಿರಬಹುದೇ ? ತನ್ನ ವಿಲಾಸ ಜೀವನವನ್ನೆಲ್ಲಾ ಮುಗಿಸಿಕೊಂಡು ಬಂದು ಈಗ ‘ ಸದ್ಗೃಹಿಣಿ ’ ಯ ಸೋಗು ಹಾಕಲು ಕಲ್ಪನಾ ಪ್ರಯತ್ನ ಪಡುತ್ತಿರಬಹುದೇ ? ತನ್ನ ಯಶಸ್ಸು, ಸಂಪತ್ತು ಎರಡನ್ನೂ ನನ್ನ ಪಾದದಡಿಯಲ್ಲಿಡಲು ಅವಳು ಅರ್ಪಿಸಲು ಸಿದ್ಧಳಾಗಿರುವುದು ‘ ಸತೀ ’ ಎನ್ನುವ ಬಿರುದಿಗಲ್ಲವೇ ?

ವ್ಯಾಧಿಗ್ರಸ್ತನಾದ ವಿಜಯನ ಮನಸ್ಸಿನಮೇಲೆ ಕುವಿಚಾರಗಳು ಪುಂಖಾನುಪುಂಖವಾಗಿ ಸುಳಿದವು. 'ಕಲ್ಪನಾ ಗರ್ಭಿಣಿಯಾಗಿ ಬಂದಿರುವುದೇ. ತನ್ನ ಪಾಪಪಿಂಡವನ್ನು ನನ್ನ ತಲೆಗೆ ಸುತ್ತಲು ಪ್ರಯತ್ನಿಸುತ್ತಿರಬಹುದೇ' ಎಂದು ಯೋಚಿಸಿದ.

'ಅಂದೇ ರಾತ್ರಿ ತಾರಾ ಕುಡಿಸಿದ ಮದ್ಯಕ್ಕೆ ಪರವಶನಾದ ವಿಜಯ, ತನಗೂ ಕಲ್ಪನಾದೇವಿಗೂ ನಡೆದ ಸಂಭಾಷಣೆಯನ್ನು ಹೇಳಿಬಿಟ್ಟ. ಅವನ ಮನಸ್ಸಿನಲ್ಲಿ ಮೊಳೆತಿದ್ದ ಅನುಮಾನಕ್ಕೆ ನೀರೆರೆದು ತಾರಾ ಅದನ್ನೇ ಬೆಳಸಿಬಿಟ್ಟಳು.

'ಪಾಪ ಸರೋವರ' ದ ಮೆಟ್ಟಲಿಳಿಯುವುದು ವಿಜಯನಿಗೆ ತಡವಾಗಲಿಲ್ಲ. ತಾರಾ, ಮೀರಾ, ಚಂದ್ರಮುಖಿ, ಕೀರ್ತಿ, ಜೀವಾನಂದಂ ಎಲ್ಲರೂ ಅವನ ಸಹಾಯಕ್ಕೆ ನಿಂತರು.

ಕಲ್ಪನಾದೇವಿಯ ನೆನಪು ವಿಜಯನ ಮನಸ್ಸಿನಿಂದ ಅಳಿಸಿ ಹೋಗುತ್ತಬಂತು.

ಕಲ್ಪನಾದೇವಿಗೆ ವಿಜಯನನ್ನು ಮರೆಯಲು ಸಾಧ್ಯವಾಗಲಿಲ್ಲ. ಈಗ ಬರಬಹುದು – ಆಗ ಬರಬಹುದು ಎಂದು ನಿರೀಕ್ಷಿಸುವಳು. ಬಾಗಿಲು ಶಬ್ದವಾದರೆ – ಬೂಟ್ಸ್ ಶಬ್ದ ಕೇಳಿದರೆ – ಹೊರಗಡೆ ಕಾರಿನ ಶಬ್ದವಾದರೆ ಧಡಕ್ಕನೆ ಎದ್ದು ಹೋಗುವಳು. 'ಅವರಲ್ಲ' ಎಂದು ನಿರ್ವಿಣ್ಣಳಾಗಿ ಹಿಂದಿರುಗುವಳು.

ಭಯಂಕರ ಪಶ್ಚಾತ್ತಾಪ ಜ್ವಾಲೆ ಕಲ್ಪನೆಯ ಮನಸ್ಸನ್ನೂ ದಹಿಸತೊಡಗಿತು.

'ಅಯ್ಯೋ! ಎರಡು ಸಾರಿ ಅವರು ಕೇಳಿದಾಗಲೂ ನಾನೇಕೆ ನಿರಾಕರಿಸಿದೆ. ತಂದೆ ಸೂಚನೆಯಿತ್ತರೂ ನಾನೇಕೆ ಅವರ ಮಾತು ಕೇಳಲಿಲ್ಲ –'

ಅಂದಿನ ತನ್ನ ಮನಃಸ್ಥಿತಿಯನ್ನು ಕಲ್ಪನಾ ಜ್ಞಾಪಿಸಿಕೊಳ್ಳಲೆತ್ನಿಸಿದಳು.

'ಅವರನ್ನು ಕಂಡರೆ ನನಗೆ ಆದರವಿತ್ತು; ಗೌರವವಿತ್ತು; ವಿಶ್ವಾಸವಿತ್ತು. ಆದರವು ರೂಪಗೊಂಡಿರಲಿಲ್ಲ. ಅವರನ್ನು ನಾನೆಷ್ಟು ಪ್ರೀತಿಸುವೆನೆಂಬುದು ನನಗೇ ಗೊತ್ತಿರಲಿಲ್ಲ.

' ಪ್ರವಾಸದಲ್ಲಿ ಅಕ್ಕ ವಸುಂಧರೆಯ ಸಹವಾಸ ಈ ಅನುಭವವನ್ನು ತಂದುಕೊಟ್ಟಿತು. ತಾನು ಗಂಡನ ಬಗ್ಗೆ ಯೋಚಿಸುತ್ತಿದ್ದುದು – ತಾನೂ ತನ್ನ ಗಂಡ ಬಾಳ್ವೆ ಮಾಡಿದುದನ್ನು ವಸುಂಧರಾ ವಿವರಿಸಿ ನನ್ನ ಕಣ್ಣು ತೆರೆಸಿದಳು.

' ಅವರೇ ನನ್ನ ಹೃದಯದ ಸ್ವಾಮಿ ಎಂಬುದನ್ನರಿತುಕೊಂಡೆ. ಪ್ರವಾಸ ಮುಗಿಸಿ ಊರು ತಲುಪಿದ ಕೂಡಲೆ ಅವರ ಕ್ಷಮಾಯಾಚನೆ ಮಾಡಬೇಕು – ನನ್ನ ಜೀವವನ್ನು ಅವರ ಪದತಲದಲ್ಲಿ ಅರ್ಪಿಸಿಬಿಡಬೇಕು ಎಂದುಕೊಂಡೆ.

' ಯಾವ ದುರ್ವಿಧಿ ನನ್ನನ್ನು ಕಾಡುತ್ತಿದೆ. ಅಕ್ಕ ವಸುಂಧರೆಯ ಜೀವನ ಮಣ್ಣುಗೂಡಿ ಹೋಯಿತು – ನನ್ನ ಜೀವನ ಬೇರೊಂದು ರೀತಿಯಲ್ಲಿ ಮಣ್ಣುಗೂಡುತ್ತದೆಯೇ ? ಯಾರಿಗೂ ನಾವು ಅನ್ಯಾಯ ಮಾಡಿಲ್ಲವಲ್ಲ – ಯಾರ ಮನಸ್ಸನ್ನೂ ನೋಯಿಸಿಲ್ಲವಲ್ಲ – ಯಾರ ಸಂತೋಷಕ್ಕೂ ವಿಘ್ನ ತಂದಿಲ್ಲವಲ್ಲ !

' ಅವರ ಮನಸ್ಸು ಯಾರಾದರೂ ಕೆಡಿಸುತ್ತಿರಬಹುದೇ ? ನನ್ನ ಮೇಲೆ ಇಲ್ಲಸಲ್ಲದ ಚಾಡಿ ಹೇಳಿ ಅವರ ಹಾಲು ಮನಸ್ಸಿಗೆ ಹುಳಿ ಹಿಂಡುತ್ತಿರಬಹುದೇ?

' ಅಂಥ ದ್ವೇಷಿಗಳು ಯಾರು ? ಕೀರ್ತಿಯವರೇ ! – ಕೀರ್ತಿಯವರು ವಿಶ್ವವಿಖ್ಯಾತರಾಗಿದ್ದಾರೆ. ಅವರು ಉತ್ಕೃಷ್ಟ ಕಲಾವಿದರೆನ್ನುವುದರಲ್ಲಿ ಸಂದೇಹವಿಲ್ಲ. ಅವರು ನಾಟ್ಯಕ್ಕಾಗಿ ಹುಟ್ಟಿದರೆನ್ನುವುದಕ್ಕಿಂತಲೂ ನಾಟ್ಯ ಅವರಿಗಾಗಿ ಹುಟ್ಟಿತು ಎಂದು ಹೇಳಬಹುದು. ನಾನು ಒಂದು ರೀತಿಯಲ್ಲಿ ಅವಳ ಶಿಷ್ಯಳು – ನಾಟ್ಯವೆಂದರೇನು ಎಂದು ತಿಳಿಯದಿದ್ದ ಕಾಲದಲ್ಲಿ ನನಗೆ ಶ್ರೇಷ್ಠ ನಾಟ್ಯಕಲೆಯ ಪರಿಚಯ ಮಾಡಿಕೊಟ್ಟವರು – ಶಿಷ್ಯಳ ಅಭ್ಯುದಯ ಕಂಡು ಗುರು ಅಸೂಯೆ ಪಡುತ್ತಾರೆಯೇ ? '

ಕಲ್ಪನೆಯ ಮನಸ್ಸಿನ ತುಂಬ ಪ್ರಶ್ನೆಗಳು - ಸಂದೇಹಗಳು - ಸಮಸ್ಯೆಗಳು. ಅವಳಿಗೆ ಆಹಾರ ನಿದ್ರೆ ಬೇಡವಾಯಿತು. ನಾಟ್ಯಾಭ್ಯಾಸವೂ ಬೇಡವಾಯಿತು.

ಮಗಳ ಸ್ಥಿತಿ ಡಾಕ್ಟರಿಗೆ ತುಂಬ ದುಃಖವನ್ನುಂಟುಮಾಡಿತು. ವಸುಂಧರಾ, ಕಲ್ಯಾಣಮ್ಮನವರು, ಸುಂದರಿ, ಶ್ರೀಧರ ಎಲ್ಲರೂ ಕಲ್ಪನೆಯನ್ನು ಸಂತೈಸಲು ಪ್ರಯತ್ನಿಸಿದರು.

ಒಂದು ವಾರ ಕಳೆಯಿತು - ಎರಡು ವಾರ ಕಳೆಯಿತು - ಮೂರು ವಾರ ಕಳೆಯಿತು, ವಿಜಯನ ಸುಳಿವಿಲ್ಲ. ಕಲ್ಪನೆಯ ಮನಸ್ಸಿಗೆ ಭಯವಾಗತೊಡಗಿತು.

' ವಿಜಯ ಹೊರಟು ಹೋಗಿರಬಹುದೇ ?....

' ವಿಜಯನಿಗೆ ಅಪಘಾತವಾಗಿರಬಹುದೇ ?....

' ವಿಜಯನಿಗೆ ಜೀವದ ಮೇಲೆ ಬೇಸರ ಹುಟ್ಟಿರಬಹುದೇ ? '....

ಒಂದು ದಿನ ಕಲ್ಪನಾದೇವಿಯನ್ನು ಕಾಣಲು ಬಂದ ಆನಂದರಾಯರು ಕಲ್ಪನೆಯ ಹೃದ್ರೋಗದ ಕಾರಣವನ್ನರಿಯಲು ನಿರ್ಧರಿಸಿ

" ಕಲ್ಪನಾದೇವಿ, ನೀವು ಹೀಗೆ ಕೊರಗುವುದು ಸರಿಯಲ್ಲ. ಭಾರತ ಯಾತ್ರೆ ಯಶಸ್ವಿಯಾಗಿ ಆಯಿತು. ಹೆಚ್ಚಿನ ಕಾರ್ಯಕ್ರಮ ನಿಯೋಜಿಸುವುದಕ್ಕೆ ಇದೇ ಸಕಾಲ. ಪ್ರವಾಸ ಮುಗಿಸಿಕೊಂಡು ಬಂದಮೇಲೆ ನೀವು, ಬೆಂಗಳೂರಿನಲ್ಲಿ ಪ್ರದರ್ಶನವಿತ್ತಿಲ್ಲ – ಮೂರು ವಾರಗಳಿಂದ ' ರಿಹರ್ಸಲ್ ' ಕೂಡ ನಿಲ್ಲಿಸಿಬಿಟ್ಟಿರುವಿರಿ. ನಿಮಗಿಷ್ಟು ವ್ಯಥೆಯನ್ನುಂಟುಮಾಡಿರುವ ವಿಷಯ ಯಾವುದು ತಿಳಿಸಿ – ಅದಕ್ಕೆ ಪರಿಹಾರ ಹುಡುಕೋಣ."

ಕಲ್ಪನೆಯ ಮನಸ್ಸಿನ ಮೇಲೆ ಥಟ್ಟನೆ ಬೆಳಕು ಬಿತ್ತರಿಸಿದಂತಾಯಿತು.

" ನನಗೊಂದು ಉಪಕಾರ ಮಾಡುವಿರಾ ರಾಯರೇ ? "

" ಹೇಳಿ – ಅಗತ್ಯವಾಗಿ ಮಾಡುತ್ತೇನೆ. ನೀವು ಮನಶ್ಶಾಂತಿ ಪಡೆದರೆ ಸಾಕು. "

" ಕೀರ್ತಿಯವರ ನಾಟ್ಯಶಾಲೆಗೆ ಸ್ವಲ್ಪ ಹೋಗಿಬರುವಿರಾ ? "

" ಅಲ್ಲಿಗೆ ನಾನು ಹೋಗುತ್ತಿಲ್ಲವಲ್ಲಮ್ಮಾ. ನಾನೇನೋ ಮಾಡಬಾರದ್ದು ಮಾಡಿದೆಯೆಂದುಕೊಂಡು ಕೀರ್ತಿಯವರು ನನ್ನ ಮೇಲೆ ತುಂಬ ಆಗ್ರಹಗೊಂಡಿದ್ದಾರೆ. "

" ನನಗಾಗಿ ಹೋಗಿ ಬರಬೇಕು. "

" ಹೋಗಿ - ನಾನೇನು ಮಾಡಬೇಕು ? "

" ಕ್ಯಾಪ್ಟನ್ ವಿಜಯ ಅವರು ಅಲ್ಲಿದ್ದರೆ ಜತೆಯಲ್ಲಿ ಕರೆದುಕೊಂಡು ಬರಬೇಕು. ಅವರು ಅಲ್ಲಿಲ್ಲದಿದ್ದರೆ ಕೀರ್ತಿಯವರಿಂದ ಅವರ ವಿಷಯವನ್ನಾದರೂ ತಿಳಿದುಕೊಂಡು ಬನ್ನಿ. "

ಆನಂದರಾಯರು ಅರೆಮನಸ್ಸಿನಿಂದ ಒಪ್ಪಿಕೊಂಡರು. ಕಲ್ಪನಾದೇವಿಗಾಗಿ ಕೀರ್ತಿ, ಜೀವಾನಂದಂ ಮತ್ತು ಅವರ ಮಂಡಳಿಯವರ ಕಟುಮಾತುಗಳನ್ನು ಕೇಳಲೂ ಸಿದ್ಧರಾದರು. ಆದರೆ ಅವರು ಸಂಗ್ರಹಿಸಿದ ಸುದ್ದಿ ಹೆಚ್ಚು ಪ್ರಯೋಜನಕಾರಿಯಾಗಲಿಲ್ಲ.

" ಹೋಗಿದ್ದಿರಾ – ಸಿಕ್ಕಿದರೇ " ಎಂದು ಆತುರದಿಂದ ಕಲ್ಪನಾ ಕೇಳಿದಳು.

" ಇಲ್ಲವಮ್ಮ. ಈಗ ಹತ್ತು ದಿವಸಗಳಿಂದ ಕ್ಯಾಪ್ಟನ್ ವಿಜಯ ಅತ್ತ ತಲೆಯಿಟ್ಟಿಲ್ಲವಂತೆ. "

" ಎಲ್ಲಿದ್ದಾರಂತೆ ! "

" ಆ ವಿಷಯ ತಮಗೆ ಗೊತ್ತಿಲ್ಲವೆಂದು ಕೀರ್ತಿಯವರು ಹೇಳಿದರು. "

" ಅವರು ಎಲ್ಲಿದ್ದರೂ ಹುಡುಕಿ ಇಲ್ಲಿಗೆ ಕರೆದುಕೊಂಡು ಬನ್ನಿರಿ ರಾಯರೇ. "

" ಆಗಲಮ್ಮ. ನನ್ನ ಶಕ್ತಿಮೀರಿ ಪ್ರಯತ್ನಿಸುತ್ತೇನೆ. – ಇನ್ನೊಂದು ಮಾತು – ನಿಮ್ಮ ತಂದೆಯವರಿಗೆ ಹೇಳಿ ಮಿಲ್ಟ್ರಿ ಹೆಡ್‌ಕ್ವಾರ್ಟರ್ಸಿನಲ್ಲಿ ( Military Head-Quarters ) ವಿಚಾರಿಸಿದರೆ ಪತ್ತೆ ಸಿಗುತ್ತದೆ. "

" ಅಯ್ಯೋ ! ನನ್ನ ಬುದ್ಧಿಗೆ ಮಂಕು ಕವಿದಿದೆ ರಾಯರೇ. ಈ ಆಲೋಚನೆ ನನಗೆ ಮೊದಲೇ ಹೊಳೆಯಬಾರದಿತ್ತೇ " ಎಂದಳು.

ರಾಯರೂ ತಮ್ಮ ಪ್ರಯತ್ನ ಮುಂದುವರಿಸಿದರು.

ಮಾರನೆಯ ದಿನವೇ ಡಾಕ್ಟರೂ, ಶ್ರೀಧರ ಮಿಲ್ಟ್ರಿ ಹೆಡ್‌ಕ್ವಾರ್ಟರ್ಸಿಗೆ ಹೋಗಿ ಬಂದರು. ಅವರ ಬರುವನ್ನೇ ಕಾಯುತ್ತ ನಿಂತಿದ್ದ ಕಲ್ಪನಾ

" ಸಿಕ್ಕಿದರೇ ಡ್ಯಾಡಿ " ಎಂದು ಕೇಳಿದಳು.

ಡಾಕ್ಟರು ಒಳಗೆ ಬಂದು ಕುಳಿತು

" ನಾವು ಹೋದ ಕೆಲಸ ಜಯಪ್ರದವಾಗಲಿಲ್ಲ ಕಲ್ಪಾ " ಎಂದರು.

" ಅಧಿಕಾರಿಗಳು ಸಿಕ್ಕಲಿಲ್ಲವೇ ? "

" ಸಿಕ್ಕಿದ್ದರು. ಮಾತಾಡಿಯೂ ಆಯಿತು. ಕ್ಯಾಪ್ಟನ್ ವಿಜಯ ಅವರ ವಿಷಯ ತಿಳಿಸಲು ಅನುಮಾನಿಸಿದರು. ನನ್ನ ಪರಿಚಯ ಶ್ರೀಧರ

ಮಾಡಿಕೊಟ್ಟ ಮೇಲೆ ' ಪ್ರಸಿದ್ಧರಾದ ಡಾ. ರಾಯರು ತಾವೇನೋ ( You are the famous Dr. Rao )' ಎಂದು ಸಂತೋಷ ವ್ಯಕ್ತಮಾಡಿ ' ಕ್ಯಾಪ್ಟನ್ ವಿಜಯ ತಮಗೇನಾಗಬೇಕು ' ಎಂದು ಕೇಳಿದರು. ' ಅವರು ನಮ್ಮ ಬಂಧು ಗಳು ' ಎಂದೇ ಹೇಳಿದೆ. ಅಧಿಕಾರಿ ಚಿಂತಾಪರವಶನಾಗಿ ' ತಮಗೆ ಅಪ್ರಿಯ ಸುದ್ದಿ ಹೇಳಬೇಕಾದ ಸಂಕಟಕ್ಕೆ ಸಿಕ್ಕಿದ್ದೇನೆ. ಕ್ಯಾಪ್ಟನ್ ವಿಜಯ ಅವರ ವೈದ್ಯ ಪರೀಕ್ಷೆಯಾಗಿ, ಮಿಲ್ಟ್ರಿ ಹುದ್ದೆಗೆ ಅನರ್ಹರೆಂದು ಪರಿಗಣಿಸಲಾಯಿತು. ಕೆಲಸದಿಂದ ಅವರನ್ನು ನಿವೃತ್ತಿ ಮಾಡಬೇಕಾಯಿತು.' ಅಧಿಕಾರಿ ಹೇಳಿದ ಮಾತು ನನಗೆ ಆಶ್ಚರ್ಯವನ್ನುಂಟುಮಾಡಿತು. ' ಅವರು ಕೆಲವು ದಿವಸ ಗಳ ಹಿಂದೆ ಕಾಹಿಲೆ ಬಿದ್ದಿದ್ದರು. ಆದರೆ ಹುದ್ದೆಗೆ ಅನರ್ಹರಾಗುವಷ್ಟು ಅವರು ನಿಶ್ಶಕ್ತರಾಗಿರಲಿಲ್ಲ ' ಎಂದೆ. ಅಧಿಕಾರಿ ಗಡ್ಡ ಕೆರೆದುಕೊಳ್ಳುತ್ತಾ ' ಹೆಚ್ಚು ವಿವರ ಕೇಳಬೇಡಿ ಡಾಕ್ಟರ್. ಮಿಲ್ಟ್ರಿ ಕಾಯಿದೆಯ ಪ್ರಕಾರ ನಾನು ಹೆಚ್ಚು ವಿಷಯ ತಿಳಿಸಲು ಸಾಧ್ಯವಿಲ್ಲ ' ಎಂದರು. ' ಈಗ ಅವರು ಎಲ್ಲಿದ್ದಾರೆ ಎಂಬುದಾದರೂ ಗೊತ್ತೇ ' ಎಂದು ಕೇಳಿದೆ. ಗೊತ್ತಿಲ್ಲ ಎಂದವರು ಉತ್ತರ ವಿತ್ತರು. "

ಕಲ್ಪನೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು.

" ಏನು ಗತಿ ಡ್ಯಾಡಿ " ಎಂದು ಹಲುಬಿದಳು.

ಡಾಕ್ಟರು ಮಗಳನ್ನು ಸಮಾಧಾನ ಮಾಡುತ್ತ

" ಧೈರ್ಯಗುಂದಬೇಡ ಡಾರ್ಲಿಂಗ್ – ವಿಜಯ ಬೆಂಗಳೂರು ಬಿಟ್ಟು ಹೋಗಿರಲಾರರು. ಕೆಲಸ ಹೋಯಿತಲ್ಲ ಎಂಬ ವ್ಯಸನದಲ್ಲಿ ಇತ್ತ ಬಂದಿಲ್ಲ. ಬೆಂಗಳೂರನ್ನು ನಾನು ಜಾಲಾಡಿಸಿ, ವಿಜಯ ಅವರನ್ನು ಪತ್ತೆ ಮಾಡುತ್ತೇನೆ– ನೀನು ನಿಶ್ಚಿಂತಳಾಗಿರು. "

ಎಂದು ಧೈರ್ಯ ಹೇಳಿದರು.

ಡಾಕ್ಟರು, ಆನಂದರಾಯರು, ಶ್ರೀಧರ್ ಏಕಮನಸ್ಕರಾಗಿ ವಿಜಯನ ಪತ್ತೆ ಹಚ್ಚಲು ಪ್ರಯತ್ನಿಸಲಾರಂಭಿಸಿದರು.

ಕಲ್ಪನೆಯೂ ಸುಮ್ಮನೆ ಕೂಡಲಿಲ್ಲ. ಸಿನೀಮಾಗಳು, ನಾಟಕಗಳು, ಬಾಂಬೆ ಷೋ, ಉಪನ್ಯಾಸಗಳು ನಡೆಯುವೆಡೆಗಳಿಗೆ ಹೋಗಿ ಬರಲಾರಂಭಿಸಿ

ವಳು. ಅಲ್ಲಿ ಕೂಡುತ್ತಿದ್ದ ಜನರನ್ನು ಎವೆಯಿಕ್ಕದೆ ನೋಡುವಳು - ನನ್ನ ವಿಜಯ ಇಲ್ಲಿರಬಹುದೇ ? – ಭಗವಂತಾ, ನನ್ನ ವಿಜಯ ನನಗೆ ಪುನಃ ದೊರಕುವಂತೆ ಮಾಡು ಎಂದು ಪ್ರಾರ್ಥಿಸುತ್ತಿದ್ದಳು.

ವಿಜಯನನ್ನು ಹುಡುಕಿಹುಡುಕಿ ಡಾಕ್ಟರು, ಆನಂದರಾಯರು, ಶ್ರೀಧರ ಜೇಸತ್ತರು ಕಲ್ಪನೆಯೆದುರಿಗೆ ಬೇಸರ ವ್ಯಕ್ತಪಡಿಸುವಂತಿರಲಿಲ್ಲ.

" ಇಂದು ಸಿಕ್ಕಲಿಲ್ಲ - ನಾಳೆ ನಾಡಿದ್ದು ಸಿಕ್ಕೇ ಸಿಕ್ಕುತ್ತಾರೆ. "

ಎಂದು ಅವಳ ಆಶಾವೃಕ್ಷಕ್ಕೆ ನೀರೆರೆಯುತ್ತ ಬಂದರು.

ಒಂದು ವಾರ ಕಳೆಯಿತು - ಎರಡು ವಾರ ಕಳೆಯಿತು. ಕಲ್ಪನಾ ದುಃಖಿಸಿ ದುಃಖಿಸಿ ತೀರ ಕಂಗೆಟ್ಟಿದ್ದಳು.

ಒಂದು ದಿನ ಮಟಮಟ ಮಧ್ಯಾಹ್ನದಲ್ಲಿ ಆನಂದರಾಯರು ತಮ್ಮ ಜೈಸಿಕಲ್ಲನ್ನು ವಿಮಾನದಂತೆ ಓಡಿಸಿಕೊಂಡು ಕಲ್ಪನೆಯ ಮನೆಗೆ ಬಂದು

" ಕಲ್ಪನಾದೇವಿ " ಎಂದು ಕೂಗಿದರು.

ಒಳಗಿದ್ದ ಕಲ್ಪನೆ ಗಾಬರಿಯಾಗಿ ಹೊರಗೆ ಬಂದಳು. ರಾಯರ ಮುಖ ಗೆಲುವುಗೊಂಡಿತ್ತು.

" ಒಳ್ಳೆಯ ಸುದ್ದಿ ತಂದಿದ್ದೇನಮ್ಮಾ. "

" ಏನು ಸುದ್ದಿ ರಾಯರೇ. "

" ಕ್ಯಾಪ್ಟನ್ ವಿಜಯ ಸಿಕ್ಕಿದರು. "

" ಎಲ್ಲಿ ? ಎಲ್ಲಿ ಸಿಕ್ಕಿದರು ? "

" ಆ ವಿಷಯವೆಲ್ಲಾ ದಾರಿಯಲ್ಲಿ ಹೇಳುತ್ತೇನೆ. ಮೊದಲು ನನ್ನ ಜತೆ ಹೊರಡಿ. "

ಮನೆ ಮಂದಿಯೆಲ್ಲಾ ಬಂದು ಆನಂದರಾಯರನ್ನು ಸುತ್ತಿಗೊಂಡರು. ಡಾಕ್ಟರು ಡ್ರೈವರನ್ನು ಕರೆದು ಕಾರ್ ಸಿದ್ಧಗೊಳಿಸೆಂದರು. ಡಾಕ್ಟರೂ ಜತೆಯಲ್ಲಿ ಹೊರಟುದನ್ನು ಕಂಡು ಆನಂದರಾಯರು

" ಕಲ್ಪನಾದೇವಿಯರು ಒಬ್ಬರೇ-ಬರಲಿ ಸರ್. " ಎಂದರು.

ಕಲ್ಪನೆ ಎರಡೇ ನಿಮಿಷಗಳಲ್ಲಿ ಹೊರಡಲು ಸಿದ್ಧವಾದಳು. ಬಟ್ಟೆ ಕೂಡ ಬದಲಿಸಲಿಲ್ಲ. ಕೆದರಿದ್ದ ತಲೆಯನ್ನು ಬಾಚಿ ಗಂಟು ಹಾಕಿಕೊಂಡು, ಹಣೆಯ ಮೇಲೆ ಕುಂಕುಮದ ಬೊಟ್ಟಿಟ್ಟುಕೊಂಡು ಹೊರಟುಬಿಟ್ಟಳು.

೩

ಕಾರಿನಲ್ಲಿ ಕುಳಿತ ಮೇಲೆ ಆನಂದರಾಯರು ಡ್ರೈವರನ್ನು
" ನಾರಾಯಣಸ್ವಾಮಿ ಪಿಳ್ಳೆ ಬೀದಿ ಗೊತ್ತೇ ಡ್ರೈವರ್ ? "
" ಇಲ್ಲ ಸಾರ್. "
" ರಸಲ್ ಮಾರ್ಕೆಟ್ ಹತ್ತಿರ ಹೋಗು – ನಾನು ತೋರಿಸುತ್ತೇನೆ. "
ಎಂದರು. ಆತುರ, ಕುತೂಹಲಗಳಿಂದ ಕುದಿಯುತ್ತಿದ್ದ ಕಲ್ಪನಾ
" ಎಲ್ಲಿ ಸಿಕ್ಕಿದರು ರಾಯರೇ ? " ಎಂದು ಕೇಳಿದಳು.

" ನನಗೆ ಕೆಲವು ಡ್ರಾಯಿಂಗ್ ಸಾಮಾನುಗಳು ಶಾಲೆಗೆ ಬೇಕಾಗಿದ್ದವು. ಅವುಗಳನ್ನು ಕೊಳ್ಳಲು ಕಮರ್ಷಿಯಲ್ ಸ್ಟ್ರೀಟಿಗೆ ಬಂದಿದ್ದೆ. ವ್ಯಾಪಾರ ಮುಗಿಸಿಕೊಂಡು ರಸಲ್ ಮಾರ್ಕೆಟ್ ಬಳಿ ಬಂದಾಗ ಕ್ಯಾಪ್ಟನ್ ವಿಜಯ ದೂರದಲ್ಲಿ ಹೋಗುತ್ತಿದ್ದುದು ಕಂಡುಬಂದಿತು. ಅವರನ್ನೇ ಹಿಂಬಾಲಿಸಿದೆ. ಅವರು ನಾರಾಯಣಸ್ವಾಮಿ ಪಿಳ್ಳೆ ಬೀದಿಯಕಡೆ ತಿರುಗಿದರು – ಅಲ್ಲಿದ್ದ ಒಂದು ಅಯ್ಯರ್ ಹೊಟಿಲ್ ಹೊಕ್ಕರು. ಅವರಿಗೆ ಕಾಣಿಸಿಕೊಳ್ಳದೆ ಹಿಂದೆಯೇ ಹೋದೆ. ಹೋಟಿಲ್ ಮಹಡಿಯೇರಿ ಹೋದರು. ನಾನು ಹೊಟೇಲ್ ಒಳಗೆ ಕುಳಿತು ಒಂದು ಕಪ್ ಕಾಫಿ ತರಿಸಿಕೊಂಡು, ಕಾಫಿ ತಂದ ಮಾಣಿಯನ್ನು ' ವಿಜಯಯೆನ್ನುವರೊಬ್ಬರು ಈ ಹೋಟಿಲಿನಲ್ಲಿ ಇಳಿದುಕೊಂಡಿದ್ದಾರೆಯೋ ? ' ಎಂದು ಕೇಳಿದೆ. ಮಾಣಿ ಹೇಳಲು ಅನುಮಾನಿಸಿದ. ಅವನ ಕೈಗೆ ಮೆಲ್ಲನೆ ಎರಡು ರೂಪಾಯಿಯಿತ್ತು ' ಈಗ ಮಹಡಿಯೇರಿ ಹೋದರು ನೋಡು - ಅವರು ' ಎಂದೆ — ' ಹೌದು ಸಾರ್ ಇಲ್ಲೇ ಇದ್ದಾರೆ - ಒಂಭತ್ತನೆಯ ರೂಮಿನಲ್ಲಿ ' ಎಂದು ತಿಳಿಸಿದ.

" ರಾಯರೇ, ನನಗೆ ಮಹೋಪಕಾರ ಮಾಡಿದಿರಿ. "

" ಇನ್ನೊಂದು ಮಾತು ಕಲ್ಪನಾದೇವಿ - ವಿಜಯ ಅವರ ಸ್ಥಿತಿ-ಗತಿ ನೋಡಿ ಕುಸಿದು ಬೀಳಬೇಡಿ. ಮನಸ್ಸು ಈಗಲೇ ಗಟ್ಟಿಮಾಡಿಕೊಳ್ಳಿ. "

ಎಂದರು. ಕಾರು ರಸಲ್ ಮಾರ್ಕೆಟ್ ಬಳಿ ಬಂದಿತು. ರಾಯರು ಡ್ರೈವರಿಗೆ ಗುರುತು ಹೇಳಿ ಕಾರನ್ನು ನಾರಾಯಣಸ್ವಾಮಿ ಪಿಳ್ಳೆ ಬೀದಿಗೆ ಬಿಡಿಸಿದರು.

ಕಾರನ್ನು ಹೊಟೇಲಿಗೆ ಸ್ವಲ್ಪ ದೂರದಲ್ಲಿಯೇ ನಿಲ್ಲಿಸಿ ರಾಯರು, ಕಲ್ಪನಾದೇವಿಯೊಂದಿಗೆ ಕೆಳಗಿಳಿದು ಡ್ರೈವರನ್ನು 'ಜತೆಯಲ್ಲಿ ಬಾ' ಎಂದು ಕರೆದರು. ಡ್ರೈವರು ಕಾರಿಗೆ ಬೀಗ ಹಾಕಿ ರಾಯರ ಜತೆ ಹೊರಟ.

ರಾಯರು, ಕಲ್ಪನಾ, ಡ್ರೈವರು ಹೊಟೇಲಿನ ಮಹಡಿಯ ಮೇಲೇರಿ ಹೋಗಿ ಒಂಭತ್ತನೆಯ ರೂಮಿನ ಮುಂದೆ ನಿಂತರು.

"ನೀವು ಸ್ವಲ್ಪ ಪಕ್ಕಕ್ಕೆ ನಿಂತುಕೊಳ್ಳಿ - ನಾನು ಬಾಗಿಲು ತೆಗೆಸುತ್ತೇನೆ."

ಎಂದು ಹೇಳಿ ಆನಂದರಾಯರು ಬಾಗಿಲು ತಟ್ಟಿದರು. ಒಳಗಿನಿಂದ ಉತ್ತರ ಬರಲಿಲ್ಲ.

ರಾಯರು ಮತ್ತೆ ಬಲವಾಗಿ ಬಾಗಿಲು ಬಡಿದರು.

"ಯಾರು ?" ಎಂದು ಒಳಗಿನಿಂದ ಧ್ವನಿ ಬಂದಿತು.

"ನಾನು ಕ್ಯಾಪ್ಟನ್ - ನಿಮ್ಮ ಮಿತ್ರ."

"ನನಗೆ ಯಾರೂ ಮಿತ್ರರಿಲ್ಲ - Get out."

"ನನ್ನ ಧ್ವನಿಯ ಗುರುತು ಸಿಕ್ಕಲಿಲ್ಲವೇ ಕ್ಯಾಪ್ಟನ್ - ನಾನು ಆನಂದ ರಾವ್."

"ಯಾರೋ ಅವನು ಕ್ಯಾಪ್ಟನ್, ಕ್ಯಾಪ್ಟನ್ ಎಂದು ಬಡಿದುಕೊಳ್ಳುತ್ತಿರುವನು ?"

ಎಂದು ವಿಜಯ ಕೋಪಾವಿಷ್ಟನಾಗಿ ಬಂದು ಬಾಗಿಲು ತೆಗೆದ. ರಾಯರು ಬಾಗಿಲು ನೂಕಿಕೊಂಡು ಒಳಕ್ಕೆ ಹೋದರು. ಕಲ್ಪನಾ ಅವರನ್ನು ಹಿಂಬಾಲಿಸಿ ಬಾಗಿಲು ಹಾಕಿಕೊಂಡಳು.

ವಿಜಯನನ್ನು ಭೀತಿಯಾವರಿಸಿತು. ಅವನ ಕೈಕಾಲುಗಳು ಗಡಗಡನೆ ನಡುಗಲಾರಂಭಿಸಿದವು. ಮೆಲ್ಲನೆ ತನ್ನ ಮಂಚದ ಬಳಿ ಸಾರಿ ಕುಕ್ಕರಿಸಿಬಿಟ್ಟ.

ರೂಮಿನ ಸುತ್ತ ಕಲ್ಪನಾ ಒಮ್ಮೆ ಕಣ್ಣು ಹೊರಳಿಸಿ ನೋಡಿದಳು. ಹಳೆಯ ಸ್ಪ್ರಿಂಗ್ ಮಂಚ, ಅದರ ಮೇಲೊಂದು ಕೊಳಕು ಹಾಸಿಗೆ. ವಿಜಯನ ಮೈಮೇಲಿದ್ದುದು ಒಂದು ಕೊಳಕು ಬಲೆ ಬನೀನು. ಅವನು ಉಟ್ಟಿದ್ದುದು ಅಷ್ಟೇ ಕೊಳಕಾಗಿದ್ದ ದಟ್ಟಿ. ಬನೀನು, ದಟ್ಟಿ ಎರಡೂ ಜೀರ್ಣವಾ

ಗಿದ್ದವು. ರೂಮಿನ ತುಂಬ ಸಿಗರೇಟು ತುಂಡುಗಳು - ಪ್ರೇತವನದಲ್ಲಿ ರುಂಡಗಳು ಬಿದ್ದಿರುವಂತೆ ಎಲ್ಲಿ ನೋಡಿದರಲ್ಲಿ ಬೀರ್, ವಿಸ್ಕಿ ಶೀಷೆಗಳು, ಮೇಜಿನ ಮೇಲೆ ರಾತ್ರಿ ತಿಂದು ಮಿಕ್ಕಿದ್ದ ಊಟ. ಆ ತಂಗೂಳು ತಿನ್ನಲು ನೊಣಗಳ ಹೋರಾಟ.

ಈ ಭೀಭತ್ಸ ನೋಟ ನೋಡಲು ಕಲ್ಪನೆಗೆ ಧೈರ್ಯ ಸಾಲದಾಯಿತು. ಮುಖ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು.

ಆನಂದರಾಯರಿಗೆ ಕಷ್ಟಕ್ಕಿಟ್ಟುಕೊಂಡಿತು. ಅಲ್ಲಿ ಇರುವಂತಿರಲಿಲ್ಲ – ಹೊರಗೆ ಹೋಗುವಂತೆಯೂ ಇರಲಿಲ್ಲ. ಮನಸ್ಸು ಕಲ್ಲು ಮಾಡಿಕೊಂಡು ನಿಂತಲ್ಲಿಯೇ ನಿಂತರು.

ವಿಜಯ ಮೆಲ್ಲನೆ ಕತ್ತೆತ್ತಿ

" ಈ ನರಕ ಕೂಪಕ್ಕೆ ನೀವೇಕೆ ಬಂದಿರಿ ಕಲ್ಪನಾದೇವಿ. "

" ವಿಜಯ್ – ಹೀಗೇಕೆ ಮಾಡಿದಿರಿ. "

ಎನ್ನುತ್ತ ಕಲ್ಪನಾದೇವಿ ಅವನ ಮಂಚದ ಬಳಿ ಹೋಗಿ ನಿಂತಳು.

" ನಾನು ಮಾನವ ಸಂಸರ್ಗಕ್ಕೆ ಅನರ್ಹ ಕಲ್ಪನಾದೇವಿ. "

" ಹಾಗನ್ನಬೇಡಿ ವಿಜಯ್. "

" ಮಿಲ್ಟ್ರಿಗೆ ಕೂಡ ನಾನು ಬೇಡವಾದೆ. "

" ತುಂಬಾ ಕಾಹಿಲೆಯಾಗಿತ್ತೇ ? "

" ಯಾರು ಹೇಳಿದರು. "

" ನಿಮ್ಮ ಪತ್ತೆ ತಿಳಿದು ಬರಲು ತಂದೆಯವರು ಮಿಲ್ಟ್ರಿ ಅಧಿಕಾರಿಗಳ ಬಳಿ ಹೋಗಿದ್ದರು – ಅವರು ಹಾಗೆ ಹೇಳಿದರಂತೆ ! "

" ಅಧಿಕಾರಿಗಳು ಕಾಹಿಲೆ ನೆಪ ಹಾಕಿ ನನ್ನನ್ನು ಬದುಕಿಸಿದರು – ಏಕೋ ಕಾಣೆ – ಯಾರಿಗೆ ನನ್ನಿಂದ ಮಹದುಪಕಾರವಾಗಬೇಕಾಗಿದೆಯೆಂದೋ ! "

" ನನಗೆ ಮಹದುಪಕಾರವಾಗಬೇಕಾಗಿದೆ. "

" ನಾನೇನು ಮಾಡಿದೆ ಗೊತ್ತೇ ? "

" ಗೊತ್ತಿಲ್ಲ - ತಿಳಿಯಬೇಕೆಂಬ ಆಸೆಯೂ ಇಲ್ಲ. "

" ನೀವು ಕೇಳಬೇಕು – ಎಂಥ ಅಯೋಗ್ಯನ ಪರಿಚಯವಾಯಿತೆಂಬದು ಆಗ ನಿಮಗರ್ಥವಾಗುತ್ತದೆ – ನೀವಿನ್ನೂ ಪ್ರವಾಸ ಮುಗಿಸಿಕೊಂಡು ಬಂದಿರ ಲಿಲ್ಲ. ನಾನು ಊರಿಗೆ ಬಂದವನೇ ನಿಮ್ಮ ಮನೆಗೆ ಬಂದೆ. ಡಾಕ್ಟರು ನಿಮ್ಮ ಸುದ್ದಿಯನ್ನೆಲ್ಲಾ ಹೇಳಿ ಅಮೃತಸರದಲ್ಲಿ ನೀವಿರುವುದಾಗಿ ತಿಳಿಸಿದರು. ನಿಮ್ಮ ವಿಳಾಸವನ್ನೂ ಕೊಟ್ಟರು. ಖಂಡಿತ ಬರೆಯುತ್ತೇನೆಂದು ಅವರಿಗೆ ಮಾತು ಕೊಟ್ಟೆ. "

" ನೀವು ಬರೆಯಲಿಲ್ಲ. "

" ಹೌದು ಬರೆಯಲಿಲ್ಲ. ನಿಮ್ಮ ಮನೆ ಬಿಟ್ಟವನೇ ಕೀರ್ತಿಯವರ ನಾಟ್ಯಶಾಲೆಗೆ ಹೋದೆ. ನನ್ನ ಮನಸ್ಸಿಗೆ ತುಂಬ ಬೇಸರವಾಗಿತ್ತು. ಶನಿ ಗಂಟು ಬಿದ್ದಂತೆ ತಾರಾ ನನಗೆ ಗಂಟುಬಿದ್ದಳು– ಹಗಲಿರುಳು ಕುಡಿದು ಅವಳ ತೋಳತೆಕ್ಕೆಯಲ್ಲಿ ಪವಡಿಸುತ್ತಿದ್ದೆ. ಒಂದು ದಿನ - ರಾತ್ರಿ ಒಂಭತ್ತು ಗಂಟೆ ಯಿರಬಹುದು, ಎಲ್ಲರೂ ಕುಡಿಯುತ್ತ ಕುಳಿತಿದ್ದೆವು. ಪಾನೀಯ ಮುಗಿದು ಹೋಯಿತು. ಡ್ರೈವರನ್ನು ಕಳಿಸಿ ತರಿಸುವ ಎಂದು ಯೋಚಿಸಿ ಅವನನ್ನು ಕೂಗಿದೆವು – ಆ ವೇಳೆಗೆ ಅವನು ಮನೆಗೆ ಹೋಗಿಬಿಟ್ಟಿದ್ದ. ನಾವೇ ಹೋಗಿ ತರುವ ಎಂದೆದ್ದೆವು. ನಾನೂ ಕೀರ್ತಿ, ತಾರಾ, ಮೀರಾ, ಚಂದ್ರಮುಖಿ ಹೊರಟೆವು. ಜೀವಾನಂದಂ ಬರಲಿಲ್ಲ. ನಾನೇ ಕಾರ್ ಡ್ರೈವ್ ಮಾಡು ತ್ತಿದ್ದೆ — ಎಲ್ಲರೂ ನರಸಿಂಹರಾಜಾ ರಸ್ತೆಯಲ್ಲಿರುವ ಬಾರ್ ಹೊಕ್ಕೆವು. ಅಲ್ಲಿಯೂ ಸ್ವಲ್ಪ ಕುಡಿದು, ಬಾಟಲ್‌ಗಳನ್ನು ಕಾರಿನಲ್ಲಿ ತುಂಬಿಕೊಂಡೆವು. ನಾವು ಕಾರಿಗೆ ಬರುವ ವೇಳೆಗೆ ಮಿಲ್ಟ್ರಿ ಪೋಲೀಸ್ ಅಧಿಕಾರಿ ಬಂದು ನನ್ನನ್ನು ಪ್ರಶ್ನಿಸಿದ. ನನಗೆ ಬುದ್ಧಿ ಸ್ಥಿಮಿತದಲ್ಲಿರಲಿಲ್ಲ – ಅಧಿಕಾರಿಗೆ ಯದ್ವಾ ತದ್ವಾ ಜವಾಬು ಕೊಟ್ಟೆ. ಅವನು ನನ್ನ ರಟ್ಟೆ ಹಿಡಿದು ಹೆಸರು ಕೇಳಿದ. ಸ್ನೇಹಿತರ ಎದುರಿಗೆ ಅಪಮಾನವಾಯಿತಲ್ಲ ಎಂದು ನಾನು ಕೆರಳಿ ಅವನಿಗೆ ಬಲವಾಗಿ ಹೊಡೆದೆ. ಅವನು ಹತ್ತು ಮಾರು ದೂರ ಹೋಗಿ ಬಿದ್ದ. ನಾವು ಕಾರ್ ಹತ್ತಿಕೊಂಡು ಕೀರ್ತಿಯವರ ಮನೆ ಸೇರಿಬಿಟ್ಟೆವು.

ಪೋಲೀಸ್ ಅಧಿಕಾರಿ ನನ್ನ ಕಾರ್ ನಂಬರು ಗುರುತು ಹಾಕಿಕೊಂಡು ದನ್ನು ನಾನು ಗಮನಿಸಲಿಲ್ಲ. "

" ಮುಂದೇನಾಯಿತು ? "

“ ಮೂರನೆಯ ದಿನ ಪೆರೇಡ್ ಮುಗಿದ ಮೇಲೆ ಮೇಲಧಿಕಾರಿಗಳು ನನ್ನನ್ನು ಆಫೀಸಿಗೆ ಬರಮಾಡಿಕೊಂಡು ‘ ಕ್ಯಾಪ್ಟನ್ ವಿಜಯ್ – ನಿಮ್ಮ ಮೇಲೆ ದೊಡ್ಡ ಆಪಾದನೆ ಬಂದಿದೆ' ಎಂದರು. ನನ್ನ ಜಂಘಾಬಲವೇ ಉಡುಗಿ ಹೋಯಿತು. ಅಧಿಕಾರಿ ಮುಂದೆ ಹೇಳಿದರು ‘ ನಿನ್ನೆ ರಾತ್ರಿ ಹತ್ತು ಗಂಟೆಯ ಸಮಯದಲ್ಲಿ ನೀವು ನರಸಿಂಹರಾಜಾ ರಸ್ತೆಯಲ್ಲಿದ್ದಿರಿ - ಅದು ಔಟ್ ಆಫ್ ಬೌಂಡ್ಸ್ ( Out of bounds ); ಪ್ರಶ್ನೆ ಕೇಳುವುದಕ್ಕೆ ಬಂದ ಪೋಲೀಸ್ ಅಧಿಕಾರಿಗೆ ಹೊಡೆದು ಅ ವ ರ ನ್ನು ಘಾಯಪಡಿಸಿದಿರಿ – ಹೌದೋ ? ’ – “ ಹೌದು ಸರ್. ಕುಡಿದಿದ್ದೆ. ಜ್ಞಾನ ನೆಟ್ಟಗಿರಲಿಲ್ಲ. ‘ ಇದಕ್ಕೇನು ಶಿಕ್ಷೆ ಗೊತ್ತೋ ? ’ — ‘ ಗೊತ್ತು ಸರ್. ಕೋರ್ಟ್ ಮಾರ್ಷಲ್.’ — ‘ ಕೋರ್ಟ್ ಮಾರ್ಷಲ್ ಆದರೆ ನಿಮಗೆ ಒಂದು ವರ್ಷವಾದರೂ ಸೆರೆಮನೆಯ ವಾಸ ಲಭಿಸುತ್ತದೆ. ’ — ‘ ದಯೆಯಿಟ್ಟು ಈ ಬಾರಿ ಕ್ಷಮಿಸಿ ಸರ್. ಇನ್ನೆಂದಿಗೂ ಇಂಥ ಅಪರಾಧ ಮಾಡುವುದಿಲ್ಲ. ’ — ‘ ಕ್ಷಮೆಯೆನ್ನುವುದು ಮಿಲ್ಟ್ರಿ ಶಬ್ದ ಕೋಶದಲ್ಲಿಲ್ಲ ಕ್ಯಾಪ್ಟನ್. ’ — ‘ ನಿಮ್ಮ ಮೊರೆ ಹೊಕ್ಕಿದ್ದೇನೆ ಸರ್. ನನ್ನನ್ನು ಕಾಪಾಡಿ. ’ ಎಂದು ಬೇಡಿಕೊಂಡೆ. ‘ ಅದಕ್ಕೊಂದೇ ಮಾರ್ಗ ಕ್ಯಾಪ್ಟನ್. ಡಾಕ್ಟರಿಗೆ ಹೇಳಿ ‘ ಅನರ್ಹತೆ ’ ಯ ( unfitness ) ಸರ್ಟಿಫಿಕೇಟು ಕೊಡಿಸುತ್ತೇನೆ. ನೀವು ಕೆಲಸ ಬಿಡಬೇಕಾಗುತ್ತದೆ. ’ ಎಂದರು. ನನಗೆ ಬೇರೆ ಉಪಾಯವೇ ಕಾಣಲಿಲ್ಲ. ಜೈಲುವಾಸಕ್ಕಿಂತ ಕೆಲಸದಿಂದ ನಿವೃತ್ತನಾಗುವುದೇ ಲೇಸೆನಿಸಿತು. — ಮುಂದೇನಾಯಿತೆಂಬುದನ್ನು ನಾನು ಹೇಳಬೇಕಾಗಿಲ್ಲ. ನನ್ನ ಜೀವನ ನಗ್ನಭೀಕರ ಸ್ವರೂಪದಲ್ಲಿ ನಿಮ್ಮ ಮುಂದೆ ನಿಂತಿದೆ. ”

“ ಚೆಲ್ಲಿ ಹೋದ ಹಾಲು ನೆನಸಿಕೊಂಡು ದುಃಖಿಸಿದರೆ ಏನು ಪ್ರಯೋಜನ ವಿಜಯ್. ”

“ ಹಾಲು ತಾನಾಗಿ ಚೆಲ್ಲಿ ಹೋಗಲಿಲ್ಲ. ನಾನೇ ಚೆಲ್ಲಿದೆ. ”

“ ಕೀರ್ತಿಯವರ ಸಹವಾಸದಲ್ಲಿದ್ದರೂ ನೀವು ಸಭ್ಯತೆಯ ಎಲ್ಲೆ ಮೀರಿರಲಿಲ್ಲ. ನಿಮ್ಮ ಮನಸ್ಸು ಕೆಡಲೇನು ಕಾರಣ ಕ್ಯಾಪ್ಟನ್. ”

ಎಂದು ಆನಂದರಾಯರು ಕೇಳಿದರು.

" ಆ ಪ್ರಶ್ನೆ ಕೇಳಬೇಡಿ ರಾಯರೇ. ನಾನು ಮಹಾಪಾಪಿ - ಮಹಾಪ ರಾಧಿ. "

" ಹಿತವರಲ್ಲಿ ದುಃಖ ತೋಡಿಕೊಂಡರೆ ಮನಸ್ಸು ನಿರ್ಮಲವಾಗುತ್ತದೆ ಕ್ಯಾಪ್ಟನ್. ಕಲ್ಪನಾದೇವಿ ಮತ್ತು ಅವರ ಮನೆಯವರಿಗಿಂತಲೂ ನಿಮಗೆ ಹಿತವರು ಬೇರೆ ಯಾರೂ ಇಲ್ಲ. "

" ನಿಜ – ಅಕ್ಷರಶಃ ನಿಜ. ಡಾಕ್ಟರೂ ಅವರ ಮನೆಯವರೂ ನನ್ನಲ್ಲಿ ತೋರಿದ ನಿರ್ವ್ಯಾಜ ಅಂತಃಕರಣಕ್ಕೆ ಪ್ರತಿಯಾಗಿ ನಾನು ಪಶುವಿನಂತೆ ವರ್ತಿ ಸಿದೆ. ಕಲ್ಪನಾದೇವಿಯ ಶೀಲವನ್ನು ಶಂಕಿಸುವಷ್ಟು ಅಧೋಗತಿಗಿಳಿದೆ. "

ಎಂದು ಮುಖ ಮುಚ್ಚಿಕೊಂಡ. ಧಾರಾಕಾರವಾಗಿ ಕಂಬನಿಗಳುರುಳಿ ದವು.

" ನಾನು ಪ್ರವೃತ್ತನಾಗಿದ್ದ ವೇಳೆಯಲ್ಲಿ ಈ ಭಾವನೆಯನ್ನು ಕೀರ್ತಿ, ಅವರ ಚಂಡಾಳ ಮಂಡಳಿ ನನ್ನ ತಲೆಯಲ್ಲಿ ತುಂಬಿದರು. ಕಲ್ಪನಾದೇವಿ, ನೀವು ಎರಡು ಬಾರಿ ನನ್ನನ್ನು ನಿರಾಕರಿಸಿದ್ದಿರಿ – ಮಂಡಳಿ ಕರೆದುಕೊಂಡು ಪ್ರವಾಸ ಹೋಗಿದ್ದಿರಿ – ಗೌವರ್ನರುಗಳು ಮಂತ್ರಿಗಳು ನಿಮ್ಮನ್ನು ಗೌರವಿಸು ತ್ತಿದ್ದರು. ಕಾಕತಾಳೀಯವಾಯಿತು. ಪೂರ್ವಾಪರ ಜ್ಞಾನವಿಲ್ಲದೆ ಕೀರ್ತಿ ಯವರ ನೀಚ ಆರೋಪವನ್ನು ನಂಬಿದೆ. "

ಕಲ್ಪನೆಯ ಕಣ್ಣುಗಳಿಂದಲೂ ಧಾರೆ ಹರಿಯುತ್ತಿತ್ತು.

" ಅದಕ್ಕಾಗಿ ನಾನು ನಿಮ್ಮನ್ನು ಆಕ್ಷೇಪಿಸುವುದಿಲ್ಲ ವಿಜಯ್. ನನ್ನ ಅಣ್ಣನೇ ನನ್ನ ಶೀಲದಲ್ಲಿ ಅಪನಂಬಿಕೆ ತಳೆದಿದ್ದರು.— ನೀವು ಯಾರೂ ಅಪ ರಾಧಿಗಳಲ್ಲ, ನಾನು ಅಪರಾಧಿನಿ. ನಿಮ್ಮನ್ನು ಅರ್ಥ ಮಾಡಿಕೊಳ್ಳದೆ ಇಷ್ಟು ಅನರ್ಥ ಪರಂಪರೆ ಸಂಭವಿಸಲು ಕಾರಣಳಾದೆ. "

ವಿಜಯ ಸಂಯಮ ತಂದುಕೊಂಡು

" ಕಲ್ಪನಾದೇವಿ - ನನ್ನನ್ನು ಮರೆತು ಬಿಡಿ. ನಾಟ್ಯಕಲೆ ನಿಮಗೆ ದೇವದತ್ತವಾಗಿ ಲಭಿಸಿದೆ. ಅದರ ಆರಾಧನೆಗೆ ನಿಮ್ಮ ಜೀವನ ಮುಡಿಪಾ ಗಿಡಿ. ನನ್ನಂಥ ಒಬ್ಬ ಅಲ್ಪ ಜೀವಿಯಿಂದ ನಿಮ್ಮ ಕಲಾತಪಸ್ಸು ಮಣ್ಣುಗೂಡ ದಿರಲಿ. "

" ವಿಜಯ್ - ನಿಮ್ಮನ್ನು ಬಿಟ್ಟು ನಾನು ಬಾಳಬಲ್ಲೆನೇ - ಬದುಕ ಬಲ್ಲೆನೇ ? ನನ್ನ ಹೃದಯ ಎಂದೋ ನಿಮ್ಮನ್ನು ' ಸ್ವಾಮಿ ' ಎಂದು ಒಪ್ಪಿ ಕೊಂಡಿತು. ಅರಿವು ಮೂಡಲು ತಡವಾಯಿತು. ನನ್ನ ಅಪರಾಧ ಕ್ಷಮಿಸಿ."

ಎಂದು ವಿಜಯನ ಎರಡು ಪಾದಗಳನ್ನೂ ಅಪ್ಪಿ ಹಿಡಿದಳು.

" ಏನು ಮಾಡುತ್ತಿರುವೆ ಕಲ್ಪನಾ - ದೇವಿ. ಬೇಡಿ - ನಾನು ನಿಮ್ಮ ಕಲ್ಪನೆಗೆ ಅರ್ಹನಲ್ಲ. "

ಎಂದು ಕಲ್ಪನೆಯನ್ನು ಮೇಲಕ್ಕೆತ್ತಿದ.

ಕಲ್ಪನೆ, ವಿಜಯನ ಕೈಹಿಡಿದು ಮೇಲಕ್ಕೆಬ್ಬಿಸಿ

" ಬನ್ನಿ ಮನೆಗೆ ಹೋಗೋಣ " ಎಂದಳು.

" ಯಾವ ಮನೆಗೆ ! "

" ನಿಮ್ಮ ಮನೆಗೆ " ಎಂದಳು.

ವಿಜಯನ ಕಣ್ಣಿಗೆ ಆಜ್ಞೆ ವಿಧಿಸುವ ಸೈನ್ಯಾಧಿಕಾರಿಯಂತೆ ಕಲ್ಪನಾ ಕಂಡುಬಂದಳು. ಸೈನ್ಯಾಧಿಕಾರಿಯ ಮಾತನ್ನು ಉಸಿರೆತ್ತದೆ ಕೇಳುವ ಅಭ್ಯಾಸವಿದ್ದ ವಿಜಯನಿಗೆ ಈ ಹೊಸ ಅಧಿಕಾರಿಯ ಮಾತನ್ನೂ ಕೇಳುವಂ ತಾಯಿತು. ತನ್ನೆದುರಿಗೆ ಯಾವದೋ ಶಕ್ತಿ - ದೈವಿಕ ಶಕ್ತಿ ನಿಂತುಕೊಂಡು ತನ್ನನ್ನು ಆಜ್ಞೆ ಮಾಡುತ್ತಿದೆಯೆನ್ನುವ ಅನುಭವ ವಿಜಯನಿಗುಂಟಾಯಿತು. ' ಬರಲಾರೆ ' ಎನ್ನಲೂ ಧೈರ್ಯವಾಗಲಿಲ್ಲ; ಮಂತ್ರಮುಗ್ಧನಂತೆ ಅವಳನ್ನು ಹಿಂಬಾಲಿಸಿದ.

ಡ್ರೈವರು ವಿಜಯನನ್ನು ಮೆಲ್ಲನೆ ಕರೆದೊಯ್ದು ಕಾರಿನಲ್ಲಿ ಕೂಡಿಸಿದ. ಕಲ್ಪನಾ ತನ್ನ ಪರ್ಸನ್ನು ಆನಂದರಾಯರ ಕೈಗಿತ್ತು

" ಹೊಟೇಲ್ ಲೆಕ್ಕವೇನಾದರೂ ಇದ್ದರೆ ಹರಿಸಿ, ಅವರ ಸಾಮಾನು ತೆಗೆಸಿಕೊಂಡು ಬನ್ನಿ " ಎಂದಳು.

೩

ಕಾರು ಬಂದುದನ್ನೂ ಅದರೊಳಗಿನಿಂದ ಕಲ್ಪನಾ ಕೆಳಗಿಳಿದು, ಡ್ರೈವರ್ ಸಹಾಯದಿಂದ ವಿಜಯನನ್ನು ಕೆಳಗಿಳಿಸಿ ಕರೆದುಕೊಂಡು ಬರುತ್ತಿದ್ದುದನ್ನೂ

ಡಾಕ್ಟರು ತಮ್ಮ ರೂಮಿನಿಂದಲೇ ಕಂಡು, ಕಲ್ಯಾಣಮ್ಮನವರನ್ನು ಕರೆದು ತೋರಿಸಿದರು.

ಕಲ್ಪನಾ ವಿಜಯನನ್ನು ನೇರವಾಗಿ ತನ್ನ ರೂಮಿಗೆ ಕರೆದೊಯ್ದು ಹಾಸಿಗೆಯ ಮೇಲೆ ಮಲಗಿಸಿದಳು. ಐದೇ ನಿಮಿಷಗಳಲ್ಲಿ ಅಡಿಗೆಯವನು ಚಿಕ್ಕಮ್ಮನವರನ್ನು ಹೊರಗೆ ಕರೆದು ಅವರ ಕೈಯಲ್ಲಿ ತಿಂಡಿಯ ತಟ್ಟೆ, ಕಾಫಿ ಕಪ್ ಕೊಟ್ಟ.

ಕಲ್ಪನಾ ಉಪಹಾರವನ್ನು ಒಳಗೊಯ್ದು ವಿಜಯನ ಪಕ್ಕದಲ್ಲಿ ಕುಳಿತು, ಮಗುವಿಗೆ ಉಣಿಸುವಂತೆ ಅವನಿಗೆ ಕಾಫಿ, ತಿಂಡಿಯನ್ನಿತ್ತು ಹೊರಗೆ ಬಂದಳು.

ಡಾಕ್ಟರು ಮಗಳನ್ನು ಕರೆದು ಔನ್ಸ್ ಗ್ಲಾಸೊಂದನ್ನು ಅವಳ ಕೈಗಿತ್ತರು.

" ಇದೇನು ಡ್ಯಾಡಿ " ಎಂದು ಕೇಳಿದಳು.

" ಒಂದು ಡೋಸ್ ಔಷಧ. "

" ಯಾರಿಗೆ ? "

" ಕ್ಯಾಪ್ಟನ್ನಿಗೆ ಕೊಡು. ಚೆನ್ನಾಗಿ ನಿದ್ರೆ ಬರುತ್ತದೆ. ಅವರು ಈಗ ನಿದ್ರೆ ಮಾಡುವುದು ಅತ್ಯವಶ್ಯಕ. "

ಕಲ್ಪನಾ ಔಷಧಿಯನ್ನು ತೆಗೆದುಕೊಂಡು ಹೋಗಿ ವಿಜಯನಿಗೆ ಕುಡಿಸಿದಳು. ವಿಜಯ ತನ್ನ ಕಿಸೆಯಲ್ಲಿ ಕೈಹಾಕಿ ಏನನ್ನೋ ಹುಡುಕಿದ.

" ಏನು ಬೇಕಾಗಿತ್ತು. " ಎಂದಳು.

" ಸಿಗರೇಟ್: "

ಸಿಗರೇಟ್ ತರಲು ಕಲ್ಪನಾ ಡ್ರೈವರನ್ನು ಕಳಿಸಿದಳು. ಡ್ರೈವರ್ ಸಿಗರೇಟ್ ಡಬ್ಬ ತರುವುದರೊಳಗಾಗಿ ವಿಜಯನಿಗೆ ಚೆನ್ನಾಗಿ ನಿದ್ರೆ ಬಂದು ಬಿಟ್ಟಿತು.

ಸದ್ದು ಮಾಡದೆ ಕಲ್ಪನಾ ಕಿಟಕಿಯ ತೆರೆಗಳನ್ನು ಹಾಕಿ, ವಿಜಯನ ಮೈತುಂಬ ರಗ್ ಹೊದೆಸಿ, ಬಾಗಿಲು ಮುಂದಕ್ಕೆ ಮಾಡಿಕೊಂಡು ಹೊರಗೆ ಬಂದಳು.

ಅವಳನ್ನೇ ಕಾಯುತ್ತ ಡಾಕ್ಟರು ಹೊರಗೆ ನಿಂತಿದ್ದರು. ಮಗಳು ತಂದೆಯನ್ನಪ್ಪಿ ಕಣ್ಣೀರ್ಗರೆದಳು. ಡಾಕ್ಟರು ಮಗಳ ತಲೆ ನೇವರಿಸುತ್ತ

" ನನ್ನ ಮುದ್ದು ಕಂದ - ಎಂಥಾ ಧೈರ್ಯಶಾಲಿಯಮ್ಮ ನೀನು " ಎಂದರು.

ತಾಯಿ ಬಂದು " ಊಟ ಮಾಡೇಳಮ್ಮಾ " ಎಂದರು. " ಅವರು ಏಳಲಿ - ಆಮೇಲೆ ಮಾಡುತ್ತೇನೆ " ಎಂದು ಹೇಳಿ ಕಲ್ಪನಾ ಸೋಫಾದ ಮೇಲೆ ಕುಕ್ಕರಿಸಿ ಬಿಟ್ಟಳು. ಕಲ್ಯಾಣಮ್ಮನವರು ಒಂದು ಕಪ್ ಓವಲ್ಟೀನ್ ಮಾಡಿ ಕೊಂಡು ಬಂದು ಬಲವಂತದಿಂದ ಮಗಳಿಗೆ ಕುಡಿಸಿದರು.

ವಿಜಯನ ಬಟ್ಟೆಗಳನ್ನೆಲ್ಲಾ ಮೂಟೆ ಕಟ್ಟಿಕೊಂಡು ಆನಂದರಾಯರು ಬಂದು ಕಲ್ಪನೆಯ ಕೈಗೆ ಪರ್ಸು, ಬಿಲ್ ಕೊಟ್ಟರು.

" ಏನು ಮಾಡುತ್ತಿದ್ದಾರೆ ? " ಎಂದು ಕೇಳಿದರು.

" ತಂದೆ ಔಷಧಿ ಕೊಟ್ಟರು – ಕುಡಿಸಿದೆ – ಮಲಗಿ ನಿದ್ರಿಸುತ್ತಿದ್ದಾರೆ. "

" ಒಳ್ಳೆಯದಾಯಿತು. ಚೆನ್ನಾಗಿ ನಿದ್ರೆ ಮಾಡಿದರೆ ಜಸ್ತಿ ಹರಿಯು ತ್ತದೆ. "

" ರಾಯರೇ ನಿಮ್ಮ ಉಪಕಾರ ಮರೆಯಲಾರೆ. ಯಾವ ಜನ್ಮದ ಬಂಧುವಪ್ಪ ನೀವು. "

" ಕಲ್ಪನಾದೇವಿ - ನೀವು ನನಗಿಂತ ವಯಸ್ಸಿನಲ್ಲಿ ಚಿಕ್ಕವರು - ಆದರೆ ಯೋಗ್ಯತೆಯಲ್ಲಿ ತುಂಬ ದೊಡ್ಡವರಮ್ಮಾ. "

" ರಾಯರೇ, ನಿಮಗೆ ನಾನು ಇನ್ನೂ ತೊಂದರೆ ಕೊಡಬೇಕಾಗಿದೆ. "

" ಏನಾಗಬೇಕು ಹೇಳಿ - ಸಂತೋಷದಿಂದ ಮಾಡುತ್ತೇನೆ. ಸ್ಕೂಲಿಗೆ ಇವತ್ತು ರಜಾ ತೆಗೆದುಕೊಂಡಿದ್ದೇನೆ. "

" ಊಟ ಮಾಡಿದಿರಾ ? "

" ಮಾಡಿ ಶಾಲೆಗೆ ಬಂದು ಅಲ್ಲಿಂದ ಕಮರ್ಷಿಯಲ್ ಸ್ಟ್ರೀಟಿಗೆ ಹೋದದ್ದು. "

ಕಲ್ಪನಾ ಎದ್ದು ಒಳಗೆ ಹೋಗಿ ತಿಂಡಿ, ಹಾಲು ತಂದು ರಾಯರಿಗಿತ್ತು ಉಪಹಾರ ಮಾಡಿಸಿದಳು.

" ಏನೋ ಕೆಲಸವಿದೆಯೆಂದಿರಿ ? "

" ನೀವು ಸ್ವಲ್ಪ ಅಂಗಡಿಗೆ ಹೋಗಿ ಅವರಿಗೆ ಬೇಕಾಗುವ ಸಾಮಾನು ಗಳನ್ನು ತರಬೇಕಾಗಿದೆ. ಪಂಚೆ, ಷರ್ಟು, ಅಂಡರ್‌ವೇರ್, ಕ್ಷೌರದ

ಸಾಮಾನು, ಸೋಪು ಇತ್ಯಾದಿ. ಕಾರಿದೆ – ಅದರಲ್ಲಿಯೇ ಹೋಗಿಬನ್ನಿ."

ಎಂದು ಪರ್ಸ್ ತೆಗೆದು ನೋಡಿ, ಒಳಗಿನಿಂದ ಮತ್ತಷ್ಟು ಹಣ ತಂದು ಪರ್ಸಿಗೆ ಹಾಕಿ ಅದನ್ನು ರಾಯರ ಕೈಗಿತ್ತಳು.

ರಾಯರು ಹೋದ ಮೇಲೆ ಕಲ್ಪನಾ ಹಾಗೇ ಸೋಫಾದ ಮೇಲೆ ಒರಗಿ ಕಣ್ಣು ಮುಚ್ಚಿದಳು. ಡಾಕ್ಟರು ಮೆಲ್ಲನೆ ಬಂದು ಒಂದು ದಿಂಬು ತೆಗೆದು ಕೊಂಡು ಮಗಳ ತಲೆಯ ಕೆಳಗಿಟ್ಟರು. ಕಲ್ಪನಾ ಕಣ್ತೆರೆದು ನೋಡಿ "ಥ್ಯಾಂಕ್ಸ್ - ಡ್ಯಾಡಿ" ಎಂದಳು.

ಎರಡು ಗಂಟೆ ಕಳೆದಿರಬಹುದು. ಕಲ್ಪನಾ ಧಡಕ್ಕನೆ ಎದ್ದು ರೂಮಿನೊಳಗೆ ಹೋಗಿ ನೋಡಿದಳು. ವಿಜಯ ಸುಖವಾಗಿ ನಿದ್ರಿಸುತ್ತಿದ್ದ. ಮತ್ತೆ ಬಂದು ಕೊಟ್ಟೆಯಲ್ಲಿ ಕುಳಿತು ಕೈಗೆ ಸಿಕ್ಕಿದ ಪತ್ರಿಕೆ ತೆಗೆದುಕೊಂಡು ನೋಡ ತೊಡಗಿದಳು. ನೋಟ ಪತ್ರಿಕೆಯ ಮೇಲೆ - ಚಿತ್ತ ವಿಜಯನ ಮೇಲೆ!

ರಾಯರು ತಾವು ಕೊಂಡಿದ್ದ ಸಾಮಾನುಗಳನ್ನು ಡ್ರೈವರ್ ಕೈಯಲ್ಲಿ ಹೊರೆಸಿಕೊಂಡು ಬಂದು ಕಲ್ಪನೆಗೆ ಒಪ್ಪಿಸಿದರು.

ಕಲ್ಪನಾ ಷರ್ಟು ತೆಗೆದುಕೊಂಡು, ಅದಕ್ಕೆ ಗುಂಡಿ ಹಾಕಿ, ಉಳಿದ ಸಾಮಾನುಗಳೊಂದಿಗೆ ಅದನ್ನು ಒಳಗೆ ತೆಗೆದುಕೊಂಡು ಹೋಗಿ ಇಟ್ಟು ಬಂದಳು.

ರಾಯರು ಕಲ್ಪನೆಯ ಅಪ್ಪಣೆಪಡೆದು ತಮ್ಮ ಬೈಸಿಕಲ್ ತೆಗೆದುಕೊಂಡು ಮನೆಗೆ ಹೊರಟರು.

ಗಂಟೆ ಐದಾಗಿತ್ತು. ರೂಮಿನೊಳಗಿಂದ ಸಿಗರೇಟ್ ಧೂಮದ ವಾಸನೆ ಬಂದಿತು. ಕಲ್ಪನಾ ಬಿಸಿನೀರು, ಕಾಫಿ ತೆಗೆದುಕೊಂಡು ಒಳಗೆ ಹೋದಳು.

ವಿಜಯ ಎದ್ದು ಹಾಸಿಗೆಯ ಮೇಲೆ ಕುಳಿತು ಸಿಗರೇಟ್ ಸೇದುತ್ತಿದ್ದ. ಕಲ್ಪನಾ ಅವನ ಕೈಗೆ ಕಾಫಿ ಗ್ಲಾಸ್ ಇತ್ತು

"ಕಾಫಿ ತೆಗೆದುಕೊಳ್ಳಿ" ಎಂದಳು.

ಅವನು ಕಾಫಿ ಮುಗಿಸಿದ ಮೇಲೆ, ಕಲ್ಪನಾ ಸೇಫ್ಟಿ ರೇಜರಿಗೆ ಬ್ಲೇಡು ಹಾಕಿ, ಅದನ್ನು ಬಿಸಿನೀರಿನಲ್ಲಿ ಮುಳುಗಿಸಿ

"ಕ್ಷೌರ ಮಾಡಿಕೊಳ್ಳುವಿರಾ?"

ಎಂದು ಕೇಳಿದಳು. ವಿಜಯ ಮರುಮಾತಾಡದೆ ಕ್ಷೌರ ಮಾಡಿಕೊಂಡ.

ಕಲ್ಪನಾ ಅಡಿಗೆಯವನನ್ನು ಕರೆದು ಅವನ ಜತೆ ವಿಜಯನನ್ನು ಕಳಿಸಿಕೊಟ್ಟಳು.

ವಿಜಯ ಬರುವಷ್ಟರಲ್ಲಿ ಮಂಚದ ಮೇಲೆ ಅವನಿಗೆ ಬೇಕಾಗುವ ಪಂಚೆ, ಅಂಡರ್‌ವೇರ್, ಷರ್ಟು ಸಿದ್ಧಮಾಡಿಟ್ಟಿದ್ದಳು.

ವಿಜಯ ಸ್ನಾನ ಮುಗಿಸಿಕೊಂಡು ಬಂದು ಹೊಸ ಬಟ್ಟೆಗಳನ್ನು ಧರಿಸಿದ.

ಒಳಗೆ ಕಲ್ಪನಾ ತಾಯಿಯೊಂದಿಗೆ ಮಾತನಾಡುತ್ತಿದ್ದುದು ವಿಜಯನ ಕಿವಿಯ ಮೇಲೆ ಬಿತ್ತು.

'ಇನ್ನಾದರೂ ಊಟ ಮಾಡೇ ತಾಯಿ. ಗಂಟೆ ಆರಕ್ಕೆ ಬಂತಲ್ಲ. ಬೆಳಿಗ್ಗೆಯಿಂದ ನೀನು ಏನೂ ತೆಗೆದುಕೊಂಡಿಲ್ಲ.'

'ಊಟದ ವೇಳೆಯೇ ಆಯಿತಲ್ಲಮ್ಮ. ರಾತ್ರಿಗೆ ಎರಡು ಹೊತ್ತಿನ ಊಟವನ್ನೂ ಮಾಡುತ್ತೇನೆ.'

'ಕ್ಯಾಪ್ಟನ್ ಜತೆ ಸ್ವಲ್ಪ ತಿಂಡಿಯಾದರೂ ತಿನ್ನು.'

'ಅವರನ್ನು ಇಲ್ಲಿಗೇ ಕರೆದುಕೊಂಡು ಬರುತ್ತೇನೆ. ಎಲ್ಲರೂ ಒಟ್ಟಿಗೆ ಉಪಹಾರ ಮಾಡಿದರಾಯಿತು.'

'ಒಳ್ಳೆಯದು' ಎಂದರು.

ಕಲ್ಪನಾ ರೂಮಿನೊಳಗೆ ಬಂದ ಕೂಡಲೆ

"ನೀವೇಕೆ ಊಟ ಮಾಡಲಿಲ್ಲ ಕಲ್ಪನಾದೇವಿ"

ಎಂದು ವಿಜಯ ಕೇಳಿದ.

"ಹಸಿವಿರಲಿಲ್ಲ. ಈಗ ನಿಮ್ಮ ಜತೆ ಫಲಾಹಾರ ಮಾಡುತ್ತೇನೆ. ಬನ್ನಿ ಒಳಗೆ ಹೋಗೋಣ."

ಎಂದು ಅವನ ಕೈಹಿಡಿದು ಭೋಜನಗೃಹಕ್ಕೆ ಕರೆದೊಯ್ದಳು. ಡಾಕ್ಟರೂ ಅಲ್ಲಿಗೇ ಬಂದಿದ್ದರು. ಮೇಜಿನ ಮೇಲೆ ತಿಂಡಿಯ ಸಾಮಾನು, ಹಣ್ಣುಗಳು, ಕಾಫಿ ಸಿದ್ಧವಾಗಿದ್ದವು.

"ಮೈಯಲ್ಲಿ ಹೇಗಿದೆ ಕ್ಯಾಪ್ಟನ್" ಎಂದು ಡಾಕ್ಟರು ಕೇಳಿದರು.

"ಮೈ ಹಗುರವಾಗಿದೆ ಸರ್. ಚೆನ್ನಾಗಿ ನಿದ್ದೆ ಬಂದಿತು."

" ನಿಮಗೆ ತುಂಬ ವಿಶ್ರಾಂತಿ ಬೇಕು ಕ್ಯಾಪ್ಟನ್. "

ಉಪಾಹಾರ ಸಾಗಿದ್ದಂತೆ ವಿಜಯ

" ಡಾಕ್ಟರ್ ಶ್ರೀಧರ್ ಎಲ್ಲಿ ? " ಎಂದು ಕೇಳಿದ.

" ಅವನಾಯಿತು ಅವನ ಆಸ್ಪತ್ರೆಯಾಯಿತು. ಈ ಡಾಕ್ಟರ್ ವೃತ್ತಿಯನ್ನು ಸನ್ಯಾಸಿಗಳು ಮಾಡಬೇಕಲ್ಲದೆ ಸಂಸಾರಿಗಳು ಮಾಡಬಾರದು ಕ್ಯಾಪ್ಟನ್. "

" ಏಕೆ ಸರ್ – ಹಾಗೆ ಹೇಳುವಿರಿ ? "

" ನನ್ನ ಶ್ರೀಮತಿಯವರನ್ನು ಕೇಳಿ – ಇಂದೂರಿನಲ್ಲಿ ನಾವಿದ್ದಾಗ ಎರಡು ಮೂರು ದಿನಗಳು ಮನೆಗೇ ಬರಲಾಗುತ್ತಿರಲಿಲ್ಲ. ಮೊದಲು ಒಂದು ವರ್ಷವಂತೂ ಮನೆಯವರಿಗೆ ನನ್ನ ಭೆಟ್ಟಿಯಿಲ್ಲ - ನನಗೆ ಮನೆಯವರ ಭೆಟ್ಟಿಯಿಲ್ಲ. ನನ್ನ ಹೆಂಡತಿ ಮಕ್ಕಳೇ ನನ್ನ ಗುರುತನ್ನೆಲ್ಲಿ ಮರೆತುಬಿಡುತ್ತಾರೋ ಎಂದು ಹೆದರುತ್ತಿದ್ದೆ. "

ಡಾಕ್ಟರ ಮಾತಿಗೆ ವಿಜಯ ನಕ್ಕ.

ಕಲ್ಪನಾ ಗಹಗಹಿಸಿ ನಗುತ್ತಾ

" ಹೋಗು ಡ್ಯಾಡಿ – You are very wicked " ಎಂದಳು.

" ಡಾಕ್ಟರ್ ವೃತ್ತಿ ಬಹಳ ವಿಚಿತ್ರವಾದುದು ಕ್ಯಾಪ್ಟನ್. "

" ಅದು ದೈವಿಕವೃತ್ತಿ ಸರ್. "

" ಹೌದು ಕೆಲವರಿಗೆ; ಕೆಲವರಿಗೆ ಆಸುರೀವೃತ್ತಿಯೂ ಆಗುತ್ತದೆ. ನಾವು – ಡಾಕ್ಟರುಗಳು ಲೋಕದ ಶೋಕ, ರೋಗ, ದುರ್ಬಲತೆಯನ್ನು ಪ್ರತಿಕ್ಷಣದಲ್ಲಿಯೂ ನೋಡುತ್ತಿರುತ್ತೇವೆ. ಅದು ಕೆಲವರ ಮನಸ್ಸಿನಲ್ಲಿ ಅಪಾರ ಅನುಕಂಪವನ್ನು ಪ್ರಚೋದಿಸಿ ಅವರನ್ನು ಮಾನವಪ್ರೇಮಿಗಳನ್ನಾಗಿ ಮಾಡುತ್ತದೆ; ಮತ್ತೆ ಕೆಲವರ ಮನಸ್ಸಿನಲ್ಲಿ ಜಿಗುಪ್ಸೆಯನ್ನು ಹುಟ್ಟಿಸಿ ಅವರನ್ನು ಮಾನವ ದ್ವೇಷಿಗಳನ್ನಾಗಿ ಮಾಡುತ್ತದೆ. "

" ನೀನು ಯಾವ ವರ್ಗಕ್ಕೆ ಸೇರಿದವನು ಡ್ಯಾಡಿ. "

" ನಾನೊಬ್ಬ Incorrigive Pessimist ( ಭಯಂಕರ ಮಾನವ ದ್ವೇಷಿ ). "

" ಸರ್, ನಿಮ್ಮ ರೀತಿ ನೀತಿ ' ಮಾನವದ್ವೇಷ ' ವಾದರೆ ಲೋಕದಲ್ಲಿ ಎಲ್ಲರೂ ಹೀಗೆಯೇ ಆಗಲೆಂದು ನಾನು ಹಾರೈಸುತ್ತೇನೆ."

" ಕ್ಯಾಪ್ಟನ್, ಲೋಕದಲ್ಲಿ ಯಾರನ್ನೂ ದ್ವೇಷಿಸಲು ನನಗೆ ಸಾಧ್ಯವಿಲ್ಲ ಏಕೆ ಗೊತ್ತೇ ? "

" ಗೊತ್ತಿಲ್ಲ ಸರ್. "

" ನನ್ನ ಸತಿ - ನನ್ನ ಮಕ್ಕಳು - ನನ್ನ ಮಿತ್ರರು ಎಲ್ಲರೂ ನನ್ನ ಬಾಳನ್ನು ತನ್ನ ಅನಂತಪ್ರೇಮದಿಂದ ತುಂಬಿದ್ದಾರೆ ಕ್ಯಾಪ್ಟನ್. ನನ್ನಿಂದ ಚಿಕಿತ್ಸೆ ಪಡೆದ ರೋಗಿಗಳು ನನ್ನನ್ನು ಹೃತ್ಪೂರ್ವಕವಾಗಿ ಹರಸಿದ್ದಾರೆ. ಲೋಕದಲ್ಲಿ ಕೀರ್ತಿ, ಧನ, ಪರಾಕ್ರಮ, ಅಧಿಕಾರ ಎಲ್ಲವೂ ನಿಸ್ಸಾರ್ಥಕ – **ಪ್ರೇಮ ಒಂದೇ ಸಾರ್ಥಕ ಪ್ರೇಮವೊಂದೇ ಸತ್ಯ.** ಅದಕ್ಕಾಗಿ ನಾವು ಕಾಡುಮೇಡು ಸೇರಬೇಕಾಗಿಲ್ಲ. ಕಣ್ಣು ಬಿಟ್ಟು ನೋಡಿದರೆ ಅದು ನಮ್ಮಲ್ಲಿಯೇ ಇರುತ್ತದೆ – ನಮ್ಮ ಮನೆಯಲ್ಲಿಯೇ ಇರುತ್ತದೆ. ಕಿವಿಯ ಮೇಲೆ ಲೆಕ್ಕಣಿಕೆ ಸಿಕ್ಕಿಸಿಕೊಂಡು, ಮನೆಯನ್ನೆಲ್ಲಾ ಲೆಕ್ಕಣಿಕೆಗೆ ಹುಡುಕುವರಲ್ಲ ಶಾನುಭೋಗರು ಹಾಗಾಗಿದೆ ನಮ್ಮ ಪಾಡು. "

" ತಾವು ದೊಡ್ಡ ಡಾಕ್ಟರಾಗಿರುವುದಲ್ಲದೆ ದೊಡ್ಡ ದಾರ್ಶನಿಕರೂ ಆಗಿದ್ದೀರಿ ಸರ್. "

" ತಂದೆ ಡಾ. ಅಲೆಕ್ಸಿಸ್ ಕ್ಯಾರೆಲ್, ಕೆನೆತ್ ವಾಕರ್, ಹ್ಯಾವಲಾಕ್ ಇಲ್ಲಿಸ್ ಇವರ ಮಿತ್ರರು ವಿಜಯ್. ಈ ಹೊಸ ಡಾಕ್ಟರುಗಳು ಇಂಜಕ್ಷನ್ ಟ್ಯೂಬಿನಲ್ಲಿ ಔಷಧ ತುಂಬಿ ರೋಗಿಗೆ ಕೊಡುವುದಿಲ್ಲ; ಔಷಧದ ಬದಲು ' ದರ್ಶನ ' ತುಂಬುತ್ತಾರೆ. "

ಎಂದು ಕಲ್ಪನಾ ತಂದೆಯನ್ನು ಪರಿಹಾಸ್ಯ ಮಾಡಿದಳು. ಡಾಕ್ಟರು ನಸುನಗುತ್ತಾ

" ನಿಜ ಡಾರ್ಲಿಂಗ್ - ನೀನು ಹೇಳಿದ್ದು ಅಕ್ಷರಶಃ ಸತ್ಯ. ರೋಗಿಗೆ ಗುಣವಾಗಬೇಕೆಂಬ ಪ್ರಬಲ ಆಕಾಂಕ್ಷೆ ಡಾಕ್ಟರಲ್ಲಿ ಇಲ್ಲದಿದ್ದರೆ ಅವನು ಕೊಡುವ ಔಷಧ, ಇಂಜಕ್ಷನ್ ನಿಸ್ಸಾರ್ಥಕವಾಗುತ್ತದೆ. ಮನಸ್ಸಿನ ವಿಕಲ್ಪವೇ ಎಲ್ಲ ರೋಗಗಳಿಗೂ ಮೂಲ; ಮನಸ್ಸಿನ ವಿಕಲ್ಪವನ್ನು ಮನಸ್ಸಿನ ಸಂಕಲ್ಪದಿಂದಲೇ ಡಾಕ್ಟರು ಗುಣಪಡಿಸಬೇಕು – ಓ! ಏನೋ ಆರಂಭಿಸಿ ಬಿಟ್ಟೆ.

ವಯಸ್ಸಾಯಿತು - ಬಾಯಿಗೆ ನಿಲುಗಡೆಯೇ ಇಲ್ಲ - ಕಾಫಿ ಆರಿ ಹೋಯಿ ತೇನೋ!"

ಕಾಫಿ ಆರಿಯೇ ಹೋಗಿತ್ತು. ಅದನ್ನೇ ಎಲ್ಲರೂ ಕುಡಿದು ಮುಗಿಸಿ ದರು. ಡಾಕ್ಟರು ಕಪ್ ಕೆಳಗಿಡುತ್ತಾ

"ಕಲ್ಪಾ, ನೀನೂ ಕ್ಯಾಪ್ಟನ್ ಡ್ರೈವ್ ಹೋಗಿ ಬನ್ನಿ."

ಎಂದು ಹೇಳಿದರು.

ಕಲ್ಪನಾ ಮನಸ್ಸಿನಲ್ಲಿಯೇ ತಂದೆಗೆ ಕೈ ಮುಗಿದಳು. ಡಾಕ್ಟರವರ ಪರೀಂಗಿತ ಜ್ಞಾನ ವಿಜಯನನ್ನು ಬೆರಗುಗೊಳಿಸಿತು.

೫

ವಿಜಯನಿಗೆ ಆರೈಕೆ, ಔಷಧೋಪಚಾರ ಸತತವಾಗಿ ನಡೆಯಿತು. ಅವನ ಮುಖದ ಮೇಲೆ ಮೊದಲಿನ ವರ್ಣ ಬರಲಾರಂಭಿಸಿತು. ಡಾಕ್ಟರು ಔನ್ಸ್ ಗ್ಲಾಸಿಗೆ ಔಷಧ ಬಗ್ಗಿಸಿ ಅದನ್ನು ಕಲ್ಪನೆಯ ಕೈಯಲ್ಲಿ ವಿಜಯನಿಗೆ ಕೊಟ್ಟು ಕಳಿಸುತ್ತಿದ್ದರು.

ಒಂದು ದಿನ ಡಾಕ್ಟರು ಕಲ್ಪನೆಯ ಕೈಗೆ ಕೊಟ್ಟ ಗ್ಲಾಸಿನಲ್ಲಿ ಔಷಧ ನಿತ್ಯದ ಪ್ರಮಾಣಕ್ಕಿಂತ ಸ್ವಲ್ಪ ಹೆಚ್ಚಾಗಿತ್ತು; ಬಣ್ಣವೂ ಬದಲಾಗಿತ್ತು; ವಾಸನೆ ಯಲ್ಲಿಯೂ ವ್ಯತ್ಯಾಸ ಕಂಡುಬರುತ್ತಿತ್ತು.

"ಔಷಧ ಬದಲಾಯಿಸಿದಿರಾ ಡ್ಯಾಡಿ?"

ಡಾಕ್ಟರು ಮುಗುಳ್ನಗೆ ನಕ್ಕರು.

"ಇದು ಔಷಧಿಯಲ್ಲ - ಬ್ರ್ಯಾಂದಿ."

"ಅಲ್ಲ ಡಾರ್ಲಿಂಗ್ ವಿಸ್ಕಿ."

"ಅವರಿಗೆ ಕೊಡಬೇಕೇ?"

"ಹೌದು."

"ಇದೇನು ಡ್ಯಾಡಿ – ನಾನೇ ಕೈಯ್ಯಾರೆ ಅವರಿಗೆ ಬ್ರ್ಯಾಂಡಿ - ಅಲ್ಲ ವಿಸ್ಕಿ ಕುಡಿಸಲೇ?"

"ನಾನು ಹೇಳುವುದನ್ನು ಸಾವಧಾನಚಿತ್ತಳಾಗಿ ಕೇಳು - ಕ್ಯಾಪ್ಟನ್ನಿಗೆ ಕುಡಿಯುವ ಅಭ್ಯಾಸವಿದೆಯಲ್ಲವೇ ?"

"ಇದೆ."

"ಅಂದು ಅವರನ್ನು ನೀನು ಮನೆಗೆ ಕರೆತಂದಾಗ ಅವರು ಯಾವ ಸ್ಥಿತಿಯಲ್ಲಿದ್ದರು ?"

"ಪೂರಾ ಕುಡಿದಿದ್ದರು."

"ಒಮ್ಮೆಲೇ ಅದನ್ನು ನಿಲ್ಲಿಸಿದರೆ ಏನಾಗುತ್ತದೆ ಬಲ್ಲೆಯಾ ?"

"ಇಲ್ಲ."

"ದೈಹಿಕವಾಗಿ ಅದು ಅವರ ಹೃದಯದ ಮೇಲೆ ಪರಿಣಾಮ ಮಾಡುತ್ತದೆ. ಮಾನಸಿಕವಾಗಿ ಅದು ಅವರನ್ನು ನಿನ್ನಿಂದ ದೂರ ಎಳೆದೊಯ್ಯುತ್ತದೆ."

"ಇದಕ್ಕೆ ಪರಿಹಾರ ?"

"ಇಂದು ನೀನೇ ಕೈಯ್ಯಾರೆ ಕೊಡು - ನಾಳೆಯಿಂದ ಕ್ಯಾಪ್ಟನ್ ಇದನ್ನು ಮುಟ್ಟುವುದಿಲ್ಲ."

"ಇಷ್ಟು ಧೈರ್ಯವಾಗಿ ಹೇಗೆ ಹೇಳುತ್ತೀರಿ ಡ್ಯಾಡಿ ?"

"ಕ್ಯಾಪ್ಟನ್ ಸ್ವಾಭಿಮಾನಿ ಡಾರ್ಲಿಂಗ್. ಅವರು ಈ ದೌರ್ಬಲ್ಯ ಗೆಲ್ಲುವುದಕ್ಕೆ ನೀನು ಸಹಾಯ ಮಾಡಬೇಕು."

ಕಲ್ಪನಾ ಔಷಧದ ಗ್ಲಾಸನ್ನು ಒಳಗೆ ತೆಗೆದುಕೊಂಡು ಹೋಗಿ ವಿಜಯನ ಕೈಗಿತ್ತಳು.

"ಇದೇನು ?" ಎಂದು ಕೇಳಿದ.

"ಡ್ಯಾಡಿ ಯಾವದೋ ಔಷಧ ಕೊಟ್ಟಿದ್ದಾರೆ."

ಗ್ಲಾಸಿನಲ್ಲಿದ್ದ ಔಷಧ ಯಾವದೆಂದು ವಿಜಯನಿಗೆ ತಿಳಿಯಲು ತಡವಾಗಲಿಲ್ಲ. ಅದಕ್ಕಾಗಿ ಅವನ ಹೃದಯ ತಹತಹಪಡುತ್ತಿದ್ದರೂ ಕಲ್ಪನೆಯ ಎದುರಿಗೆ ಕುಡಿಯಲು ಧೈರ್ಯವಾಗಲಿಲ್ಲ. ಗ್ಲಾಸನ್ನು ಮೇಜಿನ ಮೇಲೆ ಇಟ್ಟುಬಿಟ್ಟ. ಕಲ್ಪನೆ ಅಲ್ಲಿ ನಿಲ್ಲದೆ ಹೊರಗೆ ಬಂದಳು.

ಅರ್ಧ ಗಂಟೆ ಬಿಟ್ಟು ಅವಳು ಪುನಃ ಒಳಗೆ ಹೋದಾಗ ಗ್ಲಾಸ್. ಖಾಲಿಯಾಗಿತ್ತು.

ಎರಡನೆಯ ದಿವಸವೂ ಅದೇ ದೃಶ್ಯ ಸಾಗಿತು.

ಮೂರನೆಯ ದಿವಸ, ಕಲ್ಪನಾ ಒಳಗೆ ಹೋದಾಗ ಗ್ಲಾಸ್ ಮೇಜಿನ ಮೇಲೇ ಇತ್ತು; ಅದರಲ್ಲಿದ್ದ ಮದ್ಯವೂ ಹಾಗೇ ಇತ್ತು.

" ಔಷಧ ತೆಗೆದುಕೊಂಡಿಲ್ಲ. "

" ತೆಗೆದುಕೊಳ್ಳುತ್ತೇನೆ. "

ಎಂದು ವಿಜಯ ಹೇಳಿದ.

ಬೆಳಿಗ್ಗೆ ಕಲ್ಪನೆ ಬೆಡ್‌ಕಾಫಿ ತೆಗೆದುಕೊಂಡು ಹೋದಾಗ ಗ್ಲಾಸಿನ ಮದ್ಯ ಖಾಲಿಯಾಗದೆಯೇ ಉಳಿದಿತ್ತು. ಕಲ್ಪನೆಯ ಆನಂದಕ್ಕೆ ಪಾರವೇ ಇರಲಿಲ್ಲ. ವಿಜಯನನ್ನು ಎಬ್ಬಿಸಿ ಕಾಫಿ ಕೊಟ್ಟು

" ರಾತ್ರಿ ಔಷಧ ತೆಗೆದುಕೊಳ್ಳುವುದನ್ನು ಮರೆತು ಬಿಟ್ಟಿರಿ. "

" ಮರೆಯಲಿಲ್ಲ. "

ಎಂದೆದ್ದು ಗ್ಲಾಸನ್ನು ಕೈಗೆ ತೆಗೆದುಕೊಂಡು ಕಿಟಕಿಯಾಚೆ ಅದರೊಳಗಿದ್ದ ಮದ್ಯವನ್ನು ಒಗೆದುಬಿಟ್ಟು

" ದೇವಿ, ಅದು ಔಷಧವಲ್ಲ - ಮದ್ಯ. "

" ನಾನು ಬಲ್ಲೆ ವಿಜಯ್. "

" ಕೈಯೆತ್ತಿ ನೀವೇ ಮದ್ಯ ಕೊಟ್ಟಿರಾ ? "

" ಕೊಡಬೇಕಾಯಿತು. "

" ಅಯ್ಯೋ ! ನನ್ನ ಬಾಳು ಎಲ್ಲಿಗೆ ಬಂದಿತು ! "

" ವಿಜಯ್ - ಮದ್ಯವನ್ನೇಕೆ ಹೊರಗೆ ಬಿಸುಟಿದಿರಿ. "

" ಇನ್ನು ಜನ್ಮಜನ್ಮಕ್ಕೂ ಮದ್ಯ ಮುಟ್ಟುವದಿಲ್ಲ ದೇವಿ. "

ಕಲ್ಪನೆಯ ಕಣ್ಣುಗಳಿಂದ ಆನಂದಭಾಷ್ಪಗಳು ಚಿಮ್ಮಿದವು.

ಅಂದೇ ಕಲ್ಪನಾ ತನ್ನ ವಾದ್ಯಮೇಳವನ್ನು ಬರಮಾಡಿಕೊಂಡು ' ರಿಹರ್ಸಲ್ ' ಆರಂಭಿಸಿದಳು. ವಿಜಯ ಎವೆ ಹಾಕದೆ ಅವಳ ರಿಹರ್ಸಲ್ ನೋಡುತ್ತ ಕುಳಿತ.

ಮಾರನೆಯ ದಿನದಿಂದ ಬೆಳಿಗ್ಗೆ, ಸಂಜೆ ಎರಡು ಬಾರಿ ' ರಿಹರ್ಸಲ್ ' ಆರಂಭಿಸಿದಳು. ಸಂಜೆಯ ' ರಿಹರ್ಸಲ್ ' ಮುಗಿಯುವ ವೇಳೆಗೆ ಕಲ್ಪನೆಗೆ ವಿಶೇಷ ಆಯಾಸವಾಗುತ್ತಿತ್ತು. ಕಾಲುಗಳು ಕುಸಿದು ಬೀಳುತ್ತಿದ್ದವು. ಆದರೂ ರಿಹರ್ಸಲ್ ನಿಲ್ಲಿಸುತ್ತಿರಲಿಲ್ಲ.

ಆಶ್ಚರ್ಯಚಕಿತನಾದ ವಿಜಯ ಒಂದು ದಿನ ಕೇಳಿದ

" ಕಲ್ಪನಾ, ಇದೇಕೆ ಇಷ್ಟು ' ರಿಹರ್ಸಲ್ ' ಮಾಡುತ್ತಿರುವಿರಿ ? ಸದ್ಯದಲ್ಲಿಯೇ ಪ್ರದರ್ಶನವಿದೆಯೇ ? "

" ಇಲ್ಲ. "

" ಹಾಗಾದರೆ ವೃಥಾ ಏತಕ್ಕೆ ಶ್ರಮ ತೆಗೆದುಕೊಳ್ಳುತ್ತಿರುವಿರಿ ? "

" ನನ್ನ ವಿಜಯನಿಗಾಗಿ ! "

" ನನಗಾಗಿಯೇ ? "

" ಹೌದು - ನಿಮಗಾಗಿ. ವಿಜಯ್ - ಮದ್ಯಕ್ಕಾಗಿ ಮನಸ್ಸು ಕಾತರ ಪಡುವುದಿಲ್ಲವೇ ? "

" ಇಲ್ಲ ದೇವಿ - ನಾಲ್ಕು ದಿನ ಸ್ವಲ್ಪ ಹಿಂಸೆಯಾಯಿತು. ನೀವು ರಿಹರ್ಸಲ್ ಆರಂಭಿಸಿದ ದಿನ ತುಂಬ ಕಷ್ಟವಾಯಿತು. ಚಿತ್ತವನ್ನು ಬಿಗಿ ಹಿಡಿದು ' ರಿಹರ್ಸಲ್ ' ನೋಡುತ್ತ ಕುಳಿತೆ. ನಿಮ್ಮ ನಾಟ್ಯ ನನ್ನ ಮೈಮರೆಸಿತು – ಮದ್ಯವನ್ನು ಮರೆತುಬಿಟ್ಟೆ. "

" ಈಗ ? "

" ಈಗ ಆ ಮದ್ಯಕ್ಕೆ ಮನಸ್ಸು ಹಾತೊರೆಯುವುದಿಲ್ಲ. "

" ಬೇರೆ ಯಾವ ಮದ್ಯ ಬೇಕು. ?

" ನಿಮ್ಮ ನಾಟ್ಯ........ "

ಕುಣಿದು ಕುಪ್ಪಳಿಸುತ್ತ ಹೋಗಿ ಕಲ್ಪನಾ ತಂದೆಗೆ ಈ ಸುದ್ದಿ ಮುಟ್ಟಿಸಿದಳು.

" ಹಟವಾದಿ - ಕೊನೆಗೂ ನೀನೇ ಗೆದ್ದೆ. "

ಎಂದರು ಡಾಕ್ಟರು.

ಅಂದೇ ಕಲ್ಪನಾ, ವಿಜಯ, ಡ್ರೈವ್ ಹೊರಟರು. ಡ್ರೈವರ್ ಬೇಡವೆಂದು ಹೇಳಿ ವಿಜಯನೇ ಕಾರು ನಡೆಸಲು ಕುಳಿತ.

ಕಾರನ್ನು ಕಬ್ಬನ್ ಪಾರ್ಕಿನ ಕಾರಂಜಿಯ ಬಳಿ ನಿಲ್ಲಿಸಿ, ಇಬ್ಬರೂ ಕಾರಂಜಿಯ ಬುಗ್ಗೆಗಳನ್ನು ನೋಡುತ್ತ ಕುಳಿತರು. ಕಲ್ಪನಾ ಮೆಲ್ಲನೆ ವಿಜಯನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು

"ಮುಹೂರ್ತ ಯಾವಾಗ ಇಡಿಸುವಿರಿ ?" ಎಂದು ಕೇಳಿದಳು.

"ಯಾವ ಮುಹೂರ್ತ ?"

"ಏನೂ ತಿಳಿಯದವರಂತೆ ಯಾವ ಮುಹೂರ್ತ ಎನ್ನುವಿರಲ್ಲಾ — ನಮ್ಮ ಮದುವೆಯ ಮುಹೂರ್ತ !"

"ನನಗಷ್ಟು ಯೋಗ್ಯತೆ ಇದೆಯೇ ಕಲ್ಪನಾದೇವಿ."

"ವಿಜಯ, ಸುಮ್ಮನೆ ನನ್ನ ಮನಸ್ಸೇಕೆ ನೋಯಿಸುವಿರಿ."

"ನಾನು ಸಂಪಾದಿಸುತ್ತಿಲ್ಲ ಕಲ್ಪನಾ - ನನಗೆ ಕೆಲಸವಿಲ್ಲ - ಕಾರ್ಯವಿಲ್ಲ."

"ವಿಜಯ್ - ನಿಮ್ಮ ಕೈತುಂಬ ದುಡ್ಡಿದ್ದಿದ್ದರೆ ಅದನ್ನು ಖರ್ಚು ಮಾಡುವ ಅಧಿಕಾರ ನಿಮ್ಮ ಕೈಹಿಡಿದವಳಿಗೆ ಇರುತ್ತಿದ್ದಿಲ್ಲವೇ ?"

"ನಿಸ್ಸಂದೇಹವಾಗಿ."

"ಹಾಗೇ ಅವಳಲ್ಲಿ ದುಡ್ಡಿದ್ದಿದ್ದರೆ ಖರ್ಚು ಮಾಡುವ ಅಧಿಕಾರ ನಿಮಗೂ ಇರುತ್ತಿದ್ದಿತಲ್ಲವೇ ?"

"ಇರಬಹುದು – ಆದರೆ........"

"ಗಂಡು ಹೆಣ್ಣಿನ ದುಡ್ಡು ಬಳಸಬಾರದು."

"ಹೌದು."

"ನಾವು ಹಣವನ್ನು ಲಗ್ನವಾಗುತ್ತೇವೆಯೋ ವಿಜಯ್. ಎರಡು ಜೀವಗಳ ಆಜನ್ಮ ಮಧುರ ಮೈತ್ರಿಗೆ ಹಣದಲ್ಲಿ ಬೆಲೆ ಕಟ್ಟಲು ಸಾಧ್ಯವೇ — ವಿಜಯ್, ನೀವು ಕೈಯಲ್ಲಾಗದವರಲ್ಲ, ಸಂಪಾದನೆ ಮಾಡುವ ಶಕ್ತಿ ನಿಮಗಿಲ್ಲದಿಲ್ಲ. ನನ್ನದು ಬೇರೆ – ನಿಮ್ಮದು ಬೇರೆ ಎಂದೇಕೆ ವ್ಯತ್ಯಾಸ ಮಾಡುವಿರಿ."

"ನನ್ನನ್ನೇಕೆ ಪರೀಕ್ಷಿಸುತ್ತಿರುವೆ ದೇವಿ ?"

"ವಿಜಯ್, ನಿಮ್ಮನ್ನು ಬಿಟ್ಟು ನಾನು ಬದುಕಿರಲಾರೆ. ಈ ಬಾರಿಯೂ ನನ್ನ ನಿರಾಕರಿಸಬೇಡಿ."

" ಹೇಗೆ ನಿರಾಕರಿಸಲಿ ಕಲ್ಪನಾ – ನೀವೇ ನನ್ನ ಜೀವನ ಸರ್ವಸ್ವ. ಪಾಪದ ಕೊಳಚೆಯಲ್ಲಿ ಬಿದ್ದು ತೊಳಲುತ್ತಿದ್ದವನನ್ನು ಮೇಲಕ್ಕೆತ್ತಿ ಉದ್ಧಾರ ಮಾಡಿದಿರಿ. ನನ್ನ ತನು, ಮನ ಎರಡೂ ನಿಮ್ಮದು – ಅದನ್ನು ನಿಮಗೆ ಅರ್ಪಿಸಿದ್ದೇನೆ."

ಎಂದು ಹೇಳಿದ.

ಅದೇ ಮಾಘ ಮಾಸದಲ್ಲಿ ಕಲ್ಪನಾದೇವಿ, ವಿಜಯನ ಲಗ್ನ ವಿಜೃಂಭಣೆಯಿಂದ ನೆರವೇರಿತು.

ಕೀರ್ತಿ ಮತ್ತು ಅವನ ಮಂಡಳಿಗೆ ಲಗ್ನಪತ್ರಿಕೆಗಳು ಹೋಗಿದ್ದರೂ ಯಾರೂ ಮದುವೆಗೆ ಕಾಲಿಡಲಿಲ್ಲ.

೬

ಕೀರ್ತಿಯ ವ್ಯವಹಾರ ದಿನದಿನಕ್ಕೆ ಕೆಡುತ್ತ ಬಂದಿತು. ಸ್ಮಿತ್ತನ ಕಾಟ ಸಹಿಸಲಸಾಧ್ಯವಾಯಿತು. ಅವನ ಮಂಡಳಿ ಎಂದೋ ಚದುರಿ ಹೋಗಿತ್ತು.

ಕೀರ್ತಿ ವಿಧಿಯಿಲ್ಲದೆ ಮನೆಯನ್ನು ಸ್ಮಿತ್ತಿಗೇ ಮಾರಿ ಬಂದ ಹಣದಲ್ಲಿ ಉಳಿದ ಸಾಲಗಾರರಿಗೆ ಅಲ್ಪಸ್ವಲ್ಪ ಹಣವಿತ್ತು, ಕರುಣೆಯ ಕೈಗೆ ಇಪ್ಪತ್ತು ಸಾವಿರ ರೂಪಾಯಿ ಹಾಕಿ, ಉಳಿದ ಹಣದೊಂದಿಗೆ ಲಂಡನ್ನಿಗೆ ಪ್ರಯಾಣ ಮಾಡಿದ. ಕರುಣಾ ಜೀವಾನಂದಂ ಮನೆ ಸೇರಿಕೊಂಡಳು.

ಕೈಯಲ್ಲಿದ್ದ ಹಣ ಲಂಡನ್ನಿನಲ್ಲಿ ಖರ್ಚಾಗಲು ಕೀರ್ತಿಗೆ ಬಹಳ ದಿನ ಹಿಡಿಯಲಿಲ್ಲ. ಶ್ರೀಮಂತರ 'ಡಾರ್ ಚೆಸ್ಟರ್ ಹೊಟೇಲಿ' ನಿಂದ (Dorchester Hotel) ಅವನು 'ಅಪ್ಪಾಸ್ವಾಮಿ ರೆಸ್ಟುರಾ' ಗೆ ಬದಲಾಯಿಸಿಕೊಳ್ಳಬೇಕಾಯಿತು. ಕೀರ್ತಿ ಕೆಲಸ ಹುಡುಕಲಾರಂಭಿಸಿದ. 'ಮ್ಯಾಕ್ಸ್ ಇಸ್ಲಿಂಗರ್ ಬ್ಯಾಲೆಟ್ ಕಂಪೆನಿ' (Max Eslinger's Ballet Company) ಯವರು ತಮ್ಮ ಕೆಲವು ಪ್ರದರ್ಶನಗಳಲ್ಲಿ ಕೀರ್ತಿಯ 'ಓರಿಯಂಟಲ್

ಡ್ಯಾನ್ಸ್' ಗಳಿಗೆ ಸ್ಥಳ ಕೊಟ್ಟರು. ಕಂಪೆನಿಯ ಸೀಸನ್ ಮುಗಿದಿಪ್ಟು ಅವರು ನ್ಯೂಯಾರ್ಕಿಗೆ ಪ್ರಯಾಣ ಬೆಳಸಿದರು. ಕೀರ್ತಿಯನ್ನು ಜತೆಯಲ್ಲಿ ಕರೆದುಕೊಂಡು ಹೋಗಲಿಲ್ಲ.

ದಿನದಿನಕ್ಕೆ ಖರ್ಚುಗಳೇರುತ್ತ ಬಂದವು. ಅಪ್ಪಾಸ್ವಾಮಿಯ ಲೆಕ್ಕವೂ ಏರುತ್ತ ಬಂದಿತು. ಕೊನೆಗೆ ಅಪ್ಪಾಸ್ವಾಮಿಯ 'ಸ್ಯಾಟರ್‌ಡೇ ನೈಟ್ಸ್' (Saturday Nights) ಗಳಲ್ಲಿ ಕೀರ್ತಿ 'ನಾಟ್ಯ ಪ್ರದರ್ಶನ' ಮಾಡುವು ದೆಂದು ನಿರ್ಧರವಾಯಿತು. ಬಿ. ಬಿ. ಸಿ. ಯಲ್ಲಿ ಕೆಲಸ ಮಾಡುತ್ತಿದ್ದ ಕೆಲವು ಭಾರತೀಯ ವಾದ್ಯಗಾರರ ನೆರವು ಪಡೆದು ಕೀರ್ತಿ ಪ್ರದರ್ಶನಗಳನ್ನು ಸಾಗಿ ಸಿದ. ಅಪ್ಪಾಸ್ವಾಮಿಯಲ್ಲಿ ವಸತಿ, ಭೋಜನ ಪೂರೈಸುತ್ತಿತ್ತು.

'ಮುಂದೇನು ಗತಿ' ಎಂದು ಕೀರ್ತಿ ಯೋಚಿಸುತ್ತಿರುವಷ್ಟರಲ್ಲಿ ಅವನಿ ಗೊಂದು ಮಾರ್ಗ ಕಂಡುಬಂದಿತು. ಫಿಲ್ಮ್ ಕಂಪೆನಿಗಳನ್ನಾಶ್ರಯಿಸತೊಡ ಗಿದ. ಒಂದು ತಿಂಗಳು ಟ್ಯಾಕ್ಸಿಫೇರ್ ಖರ್ಚು ಮಾಡಿಕೊಂಡ ಮೇಲೆ 'ಸನ್ ಆಫ್ ಇಂಡಿಯಾ (Son of India) ಚಿತ್ರ ನಿರ್ಮಾಪಕರಿಂದ ಕರೆಬಂದಿತು. ಅವರು ಸೂಕ್ಷ್ಮವಾಗಿ ಕಥೆ ನಿರೂಪಿಸಿ 'ನೀವು ನಮ್ಮ ಚಿತ್ರದಲ್ಲಿ ಒಬ್ಬ ಹಿಂದೂ ಮಾಂತ್ರಿಕನ ವೇಷ ಹಾಕಬೇಕಾಗುತ್ತದೆ' ಎಂದು ಹೇಳಿದರು. ಕೀರ್ತಿ ಹಿಂದೆ ಮುಂದೆ ಆಲೋಚಿಸದೆ ಕಂಟ್ರ್ಯಾಕ್ಟಿಗೆ ಸಹಿ ಹಾಕಿ ಮುಂಗಡದ ಹಣ ಪಡೆದುಕೊಂಡ.

ಕೀರ್ತಿ 'ಸನ್ ಆಫ್ ಇಂಡಿಯಾ' ಚಿತ್ರದಲ್ಲಿ ಪಾತ್ರ ವಹಿಸುವ ವಿಷಯ ಕೇಳಿ ಅಪ್ಪಾಸ್ವಾಮಿ ಕನಲಿ ಕೀರ್ತಿಯನ್ನು ಹೋಟೇಲಿನಿಂದ ಹೊರಗೆ ಹಾಕಿದ. ಬಿ. ಬಿ. ಸಿ. ವಾದ್ಯಗಾರರು ಕೀರ್ತಿಯ ಪ್ರದರ್ಶನಕ್ಕೆ ವಾದ್ಯ ನುಡಿಸಲು ನಿರಾ ಕರಿಸಿದರು. ಲಂಡನ್ನಿನಲ್ಲಿದ್ದ ಭಾರತೀಯರು, ಭಾರತ ಪ್ರೇಮಿಗಳಾದ ಐರೋಪ್ಯರು ಕೀರ್ತಿಯನ್ನು ಅಸ್ಪೃಶ್ಯನಂತೆ ಕಾಣಲಾರಂಭಿಸಿದರು. ಕೀರ್ತಿಯ ಮೇಲೆ ಪತ್ರಿಕೆಗಳು ಕಟುಟೀಕೆಗಳನ್ನು ಮಾಡಿ ಅವನನ್ನು 'ಭಾರತ ದ್ರೋಹಿ' ಎಂದು ಕರೆದವು. 'ಯಾರು ಏನು ಬೇಕಾದರೂ ಹೇಳಿಕೊಳ್ಳಲಿ – ಕಲೋ ನಿಯಲ್ ಕಂಪೆನಿಯಿಂದ ಹಣ ಬಂದರೆ ಸಾಕು' ಎಂಬುದೇ ಕೀರ್ತಿಯ ಧೋರಣೆಯಾಯಿತು.

ಭಾರತಕ್ಕೆ ಅಪಮಾನಕರವಾದ ' ಸನ್ ಆಫ್ ಇಂಡಿಯಾ ' ಚಿತ್ರದಲ್ಲಿ ಕೀರ್ತಿ ಪಾತ್ರ ವಹಿಸುವ ವಿಷಯ ಜಗಜ್ಜಾಹೀರಾಯಿತು. ಭಾರತೀಯ ಪತ್ರಿಕೆಗಳು ಉಗ್ರವಾಗಿ ಟೀಕಿಸಿದುದಲ್ಲದೆ ಲಂಡನ್ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವಿಮರ್ಶೆಗಳನ್ನು ಎತ್ತಿ ಪ್ರಕಟಿಸಿದವು.

ಅಣ್ಣನ ಅಪಗತಿ ಕಂಡು ಕರುಣಾ ಕಣ್ಣೀರು ಸುರಿಸಿದಳು.

ಕಲ್ಪನಾದೇವಿಯ ಮನೆಯಲ್ಲಿಯೂ ಇದೇ ಮಾತು ಬಂದಿತು. ಎಲ್ಲರಿಗಿಂತ ಈ ಬಗ್ಗೆ ಹೆಚ್ಚು ಮುನಿದವರು ಡಾಕ್ಟರು.

" ಭಾರತಕ್ಕೆ ಸ್ವಾತಂತ್ರ್ಯ ಗಳಿಸಬೇಕೆಂದು ಇಲ್ಲಿ ಮಹಾತ್ಮಾ ಗಾಂಧಿಯವರು ಪ್ರಾಣ ಬಿಡುತ್ತಿದ್ದಾರೆ. ವಿದೇಶಗಳಲ್ಲಿ ಭಾರತದ ಕೀರ್ತಿ ಹೆಚ್ಚಿಸಬೇಕೆಂದು ಪಂಡಿತ ಜಹಾಹರಲಾಲ್ ನೆಹ್ರೂ ದೇಹ ತೇಯುತ್ತಿದ್ದಾರೆ. ಸಾವಿರಾರು ಮಂದಿ ಭಾರತ ಪುತ್ರ-ಪುತ್ರಿಯರು ಬ್ರಿಟಿಷರ ಸೆರೆಮನೆಗಳಲ್ಲಿ ಕೊಳೆಯುತ್ತಿದ್ದಾರೆ – ಈ ಸಂಧಿ ಸಮಯದಲ್ಲಿ ಕೀರ್ತಿಯಂಥವರು ಇಂಗ್ಲೀಷಿನವರ ನಾಲ್ಕು ಎಂಜಲ ಕಾಸಿಗೆ ಭಾರತದ ಅಪಪ್ರಚಾರ ಮಾಡುತ್ತಿದ್ದಾರೆ. ಈ ಅಪಪ್ರಚಾರ ತಡೆಗಟ್ಟಬೇಕು. " ಎಂದರು.

" ಹೇಗೆ ಸಾಧ್ಯ ಡ್ಯಾಡಿ " ಎಂದು ಕಲ್ಪನಾ ಕೇಳಿದಳು.

" ಹೇಗೆ ಸಾಧ್ಯವೆಂಬುದನ್ನು ನಾನು ತೋರಿಸಿಕೊಡುತ್ತೇನೆ. ನಾನು ಹೇಳಿದಂತೆ ಮಾಡಲು ಸಿದ್ಧವಾಗಿರುವೆಯಾ ಡಾರ್ಲಿಂಗ್ ? "

" ಹೇಳಿ ಡ್ಯಾಡಿ – ನನ್ನ ಕೈಯಲ್ಲಿ ಸಾಧ್ಯವಾಗುವುದಾದರೆ ನಾನು ಶ್ರಮ ಪಡಲು ಹಿಂಜರಿಯುವುದಿಲ್ಲ. "

" ನಿನ್ನ ಕೈಯಲ್ಲಿ ಸಾಧ್ಯವಾಗುವುದೇ - ನೀನು ಮಂಡಳಿಯೊಡನೆ ಲಂಡನ್ನಿಗೆ ಹೋಗಿ ' ನಾಟ್ಯ ಪ್ರದರ್ಶನ ' ಗಳನ್ನು ಕೊಡಬೇಕು. ಸನ್ ಆಫ್ ಇಂಡಿಯಾಗೆ ' ಡಾಟರ್ ಆಫ್ ಇಂಡಿಯಾ ' ಉತ್ತರ ಕೊಡಲಿ. "

" ಡ್ಯಾಡಿ – ಖರ್ಚೆಷ್ಟಾಗುವುದು ಬಲ್ಲಿರಾ ? "

" ಬಲ್ಲೆ ಕಲ್ಪಾ – ಐವತ್ತು ಸಾವಿರ ರೂಪಾಯಿ ಬೇಕಾಗಬಹುದು. ಹಣ ನಾನು ಒದಗಿಸುತ್ತೇನೆ - ಮಂಡಳಿ ನೀನು ಕೂಡಿಸು. ಭಾರತ

ಸಂಸ್ಕೃತಿಯ ವಿವಿಧ ಮುಖಗಳನ್ನು ನಿನ್ನ ಪ್ರದರ್ಶನ ಚಿತ್ರಿಸಲಿ. "

ತಂದೆಯ ಸಲಹೆ ಕಲ್ಪನೆಯನ್ನು ಆನಂದತುಂದಿಲಳನ್ನಾಗಿ ಮಾಡಿತು.

ಕಲ್ಪನಾ, ವಸುಂಧರಾ, ಆನಂದರಾಯರು, ವಿಜಯ ಯಾರಿಗೂ ಅರೆಕ್ಷಣ ಬಿಡುವಿಲ್ಲವಾಯಿತು. ಬೆಳಿಗ್ಗೆ ಸಂಜೆ ರಿಹರ್ಸಲ್‌ಗಳು - ಹೊಸ ಹೊಸ ವಸ್ತ್ರ ಭೂಷಣಗಳ ಸಿದ್ಧತೆ - ವಿಧಾಯಕ ವಾದ್ಯಮೇಳದ ಜೋಡಣೆ.

ಡಾಕ್ಟರು, ವಿಜಯ ಕಲೆತು ಒಂದು ಹೊಸ ವಸ್ತುವನ್ನು ರಚಿಸಿ ಕಲ್ಪನೆಯ ಕೈಗಿತ್ತರು. ' ಭಾರತದ ಅಮರ ಚಿತ್ರ ವಿಲಾಸ ' ( The Immortal Pagent of India. )

ಭಾರತದ ಅರಣ್ಯಕ ಜೀವನದಿಂದ ಕಥೆ ಆರಂಭವಾಗುತ್ತದೆ. ಮಹರ್ಷಿ ಯಾಜ್ಞವಲ್ಕ್ಯ, ಅವನ ಇಬ್ಬರು ಮಡದಿಯರು ಮೈತ್ರೇಯಿ, ಗಾರ್ಗಿಯವರ ವೃತ್ತಾಂತ. ಉಪನಿಷತ್ತಿನ ಘನ ಸಂದೇಶ. ಪೂರ್ಣ ಜೀವನದ ಆವಿಷ್ಕಾರ.

ಬುದ್ಧ ಭಗವಾನರ ಪ್ರವೇಶ. ಅವನ ಅಹಿಂಸಾ ಮಂತ್ರೋಪದೇಶ. ತಲೆ ಕಡಿಯಲು ಬಂದ ಅಂಗುಳೀಮಾಲನನ್ನು ಅಹಿಂಸಾವ್ರತದ ಕಡೆ ಭಗವಂತ ತಿರುಗಿಸಿ, ಅವನನ್ನು ಶಿಷ್ಯನನ್ನಾಗಿ ಅಂಗೀಕರಿಸಿದುದು.

ಕಳಿಂಗ ಯುದ್ಧದ ರಕ್ತಪಾತ ಕಂಡ ಅಶೋಕ ಬೌದ್ಧ ಧರ್ಮವನ್ನವಲಂಬಿಸಿ ಲೋಕದ ಎಂಟು ಮೂಲೆಗಳಿಗೆ ಭಿಕ್ಷುಕ ಭಿಕ್ಷುಣಿಯರನ್ನು ಅಹಿಂಸಾ ಧರ್ಮ ಬೋಧನೆಗೆ ಕಳಿಸುವುದು.

ಹರ್ಷ ಚಕ್ರವರ್ತಿಯ ಸಾಮ್ರಾಜ್ಯ ವೈಭವ. ಭಾರತದ ಲಲಿತಕಲೆಗಳ ಸ್ವರ್ಣಯುಗ.

ಅಕ್ಬರನ ಮುಘಲ ಸಾಮ್ರಾಜ್ಯ. ಹಿಂದೂ - ಮುಸ್ಲಿಮ ಐಕ್ಯತೆಯ ಕಾಲ. ಹಿಂದೂ - ಮುಸ್ಲಿಮ್ ಕಲೆಗಳ ದಿವ್ಯ ಸಂಗಮ.

ಬ್ರಿಟಿಷರ ಆಗಮನ. ಭಾರತದಲ್ಲಿ ಅನೈಕ್ಯತೆ. ದಾರಿದ್ರ್ಯದ ರುದ್ರ ತಾಂಡವ.

ಸ್ವಾತಂತ್ರ್ಯಸೂರ್ಯ ಗಾಂಧೀಜಿಯ ಆಗಮನ - ಭಾರತದ ಮುಕ್ತಿ - ವಂದೇಮಾತರಂ. - ಗಾಂಧೀಜಿಯ ಶಾಂತಿಸಂದೇಶ.

ಒಂದು ತಿಂಗಳು ಸತತ ' ರಿಹರ್ಸಲ್ ' ಸಾಗಿತು. ಲಂಡನ್ನಿನ ' ಆಲ್ಬ

ವಿಚ್ ಥಿಯೇಟರ್' ನಲ್ಲಿ ಪ್ರದರ್ಶನಗಳನ್ನು ಕೊಡಬೇಕೆಂಬುದೂ ನಿರ್ಧರ ವಾಗಿತ್ತು. ವಿಜಯ ವಿಸಾ, ಪ್ರಯಾಣ ಸಿದ್ಧತೆಗಳನ್ನು ನೋಡಿಕೊಂಡ.

ಲಂಡನ್ನಿನಲ್ಲಿದ್ದ ತಮ್ಮ ವೃತ್ತಿಬಂಧುಗಳಿಗೆ ಡಾಕ್ಟರು ಕಾಗದ ಬರೆದು ಕಲ್ಪನಾ ತನ್ನ ಮಂಡಳಿಯೊಡನೆ ಬರುವ ವಿಷಯ ತಿಳಿಸಿದರು.

ಡಾಕ್ಟರೂ, ಅವರ ಸಂಸಾರ ಮುಂಬಯಿಯ ವರೆಗೆ ಬಂದು ಮಂಡಳಿ ಯನ್ನು ಬೀಳ್ಕೊಟ್ಟರು. ಹಡಗು ಹತ್ತುವ ಮುನ್ನ ಕಲ್ಪನಾ ತಂದೆ, ತಾಯಿ, ಅಣ್ಣನ ಪಾದಮುಟ್ಟಿ ನಮಸ್ಕರಿಸಿದಳು. ವಿಜಯ ಅತ್ತೆ ಮಾವಂದಿರಿಗೆ ನಮಸ್ಕರಿಸಿ, ಶೇಖರನನ್ನಪ್ಪಿಕೊಂಡ.

ಡಾಕ್ಟರು ಕಲ್ಪನಾ, ವಿಜಯರ ಕೈಹಿಡಿದು

"ದೇವರು ನಿಮಗೆ ಒಳ್ಳೆಯದನ್ನು ಮಾಡಲಿ ಹೋಗಿ ಬನ್ನಿ— ಭಾರತದ ಕೀರ್ತಿ ಅಜರಾಮರವಾಗುವಂತೆ ಮಾಡಿ ಬನ್ನಿ. ನೀವು ಭಾರತದ ಸಾಂಸ್ಕೃ ತಿಕ ರಾಯಭಾರಿಗಳೆಂಬುದನ್ನು ಮರೆಯಬೇಡಿ."

ಎಂದು ಸಂದೇಶವಿತ್ತರು.

೭

ಲಂಡನ್ನಿನಲ್ಲಿದ್ದ ಭಾರತೀಯರೂ, 'ಭಾರತ ಮಿತ್ರ ಸಂಘ' ದ ಪೆಥಿಕ್ ಲಾರೆನ್ಸ್, ಫೆನರ್ ಬ್ರಾಕ್ವೆ, ಅಗಾಥಾ ಹ್ಯಾರಿಸನ್, ಮ್ಯುರೈಲ್ ಲೆಸ್ಟರ್ ಮೊದಲಾದ ಮಾನ್ಯರು ಹಡಗಿನ ನಿಲ್ದಾಣಕ್ಕೆ ಬಂದು ಕಲ್ಪನೆಗೂ ಅವಳ ಮಂಡಳಿಗೂ ಸ್ವಾಗತ ಬಯಸಿದರು. ಪತ್ರಿಕಾ ಪ್ರತಿನಿಧಿಗಳು ಕಲ್ಪನೆಯನ್ನು ಮುತ್ತಿಕೊಂಡು ಪ್ರಶ್ನಮಾಲೆ ಆರಂಭಿಸಿದರು. ವಿಜಯ ಅವರಿಗೆ

"ನಾವು ಇದೇ ಬರುತ್ತಿದ್ದೇವೆ. ನಾಳೆ 'ಪ್ರೆಸ್ ಕಾನ್‌ಫರೆನ್ಸ್' ಕರೆಯುತ್ತೇವೆ. ಆಗ ನಿಮ್ಮ ಪ್ರಶ್ನೆಗಳಿಗೆ ಉತ್ತರ ಕೊಡುತ್ತೇವೆ."

ಎಂದು ಹೇಳಿದ.

ಡಾರ್‌ಚೆಸ್ಟರ್ ಹೊಟೇಲಿನಲ್ಲಿಯೇ ಮಂಡಳಿಯ ಬಿಡಾರವಾಯಿತು. ಕಲ್ಪನಾ, ವಿಜಯ ತಮ್ಮ ರೂಮು ಸೇರಿ, ಟ್ರಂಕುಗಳನ್ನು ತೆಗೆಯುತ್ತಿರುವಲ್ಲಿ ಹೊಟೇಲಿನ ಲಾಬಿಯಿಂದ ಫೋನ್‌ಕಾಲ್ ಬಂದಿತು. ವಿಜಯ ಕೈಗೆ ಫೋನ್ ಎತ್ತಿಕೊಂಡು 'ಯಾರು' ಎಂದು ಕೇಳಿದ. 'ಮ್ಯಾದಾಂ ಕಲ್ಪನಾ ಅವ ರನ್ನು ನೋಡಲು ಯಾರೋ ಬಂದಿದ್ದಾರೆ.' – 'ಈಗ ನೋಡಲು ಸಾಧ್ಯವಿಲ್ಲ ವೆಂದು ಹೇಳಿ. ಅವರಿಗೆ ತುಂಬ ಆಯಾಸವಾಗಿದೆ.' ಅತ್ತಕಡೆ ಮಾತ ನಾಡುತ್ತಿದ್ದವರ ಧ್ವನಿ ಬದಲಾಯಿಸಿತು. 'ಮಾತನಾಡುತ್ತಿರುವವರು ಕ್ಯಾಪ್ಟನ್ ವಿಜಯವರೇನು' – 'ಹೌದು, ತಾವು ಯಾರು?' – 'ನಾನು ಡಾ. ಕೆನೆತ್ ವಾಕರ್.' ಆ ಹೆಸರು ಕೇಳಿದೊಡನೆಯೇ ವಿಜಯನಿಗೆ ರೋಮಾಂಚವಾಯಿತು. 'ಬನ್ನಿ ಸರ್. ದಯೆಯಿಟ್ಟು ಬನ್ನಿ' ಎಂದು ಹೇಳಿ ಕಲ್ಪನಾ ಫೋನ್ ಮಾಡಿದ್ದವರು ಯಾರು ಗೊತ್ತೇ?' – 'ಯಾರು?' ಎಂದು ಕಲ್ಪನಾ ಕೇಳಿದಳು.

"ಡಾಕ್ಟರ್ ಕೆನೆತ್ ವಾಕರ್."

"ಡಾಕ್ಟರ್ ಕೆನೆತ್ ವಾಕರ್."

ಎಂದು ಹೊಟೇಲಿನ ಆಳು ಡಾಕ್ಟರ ಪರಿಚಯ ಮಾಡಿಕೊಟ್ಟ.

ಕಲ್ಪನಾ ಭಾರತೀಯ ಪದ್ಧತಿಯಂತೆ ಡಾಕ್ಟರ್ ಪಾದಮುಟ್ಟಿ ಪ್ರಣಾಮ ಮಾಡಿದಳು. ವಿಜಯ ಅವರಿಗೆ ಕೈಮುಗಿದ.

"ನಾನು ಹಡಗಿನ ಬಳಿಗೇ ಬರಬೇಕೆಂದಿದ್ದೆ. ಸ್ವಲ್ಪ ವಿಲಂಬ ವಾಯಿತು. ಡಾಕ್ಟರುಗಳ ವಿಷಯ ನಿಮಗೆ ಗೊತ್ತೇಯಿದೆಯಲ್ಲ – ನಿಮ್ಮ ತಂದೆಯವರು ಹೇಗಿದ್ದಾರೆ?"

"ಚೆನ್ನಾಗಿದ್ದಾರೆ – ತಾವು ಸರ್."

"ಚೆನ್ನಾಗಿದ್ದೇನೆ."

"ನಾವು ಬರುವ ವಿಷಯ ತಮಗೆ ಹೇಗೆ ತಿಳಿಯಿತು."

"ನಿಮ್ಮ ತಂದೆ ಬರೆದು ತಿಳಿಸಿದ್ದರು. ಇಲ್ಲಿ ಎಲ್ಲಾ ಅನುಕೂಲವಾಗಿ ದೆಯೇ?"

"ಒಳ್ಳೆಯ ಹೊಟೇಲೆಂದು ಕಾಣುತ್ತದೆ."

" ಲಂಡನ್ನಿನಲ್ಲಿರುವ ಒಳ್ಳೆಯ ಹೊಟೇಲ್‌ಗಳಲ್ಲಿ ಇದೂ ಒಂದು. ನೀವು ವಿಶ್ರಾಂತಿ ತೆಗೆದುಕೊಳ್ಳಿ, ನಾನು ಬರುತ್ತೇನೆ. ನನ್ನಿಂದ ಯಾವಾಗ ಏನು ಕೆಲಸವಾಗಬೇಕಾದರೂ ತಿಳಿಸಿ. "

" ಥ್ಯಾಂಕ್ ಯು ಸರ್ ( Thank you Sir ). "

ಡಾಕ್ಟರ್ ವಾಕರ್ ಹೋದ ಮೇಲೆ ವಿಜಯ

" ಎಷ್ಟು ದೊಡ್ಡ ವ್ಯಕ್ತಿ – ಎಂಥ ವಿನಯ ! "

ಎಂದು ತನ್ನ ಮೆಚ್ಚುಗೆ ವ್ಯಕ್ತ ಪಡಿಸಿದ.

' ಕಲ್ಪನಾ ಮಂಡಳಿ ' ಯ ಪ್ರದರ್ಶನಗಳಾರಂಭವಾಗುವ ಮುನ್ನ ವಿಜಯ ಒಂದು ಕಾನ್‌ಫರೆನ್ಸ್ ತನ್ನ ಹೊಟೇಲಿನಲ್ಲಿಯೇ ಕರೆದ. ದೇಶ, ವಿದೇಶಗಳ ಪತ್ರಿಕಾ ಪ್ರತಿನಿಧಿಗಳು ಆಹ್ವಾನವನ್ನಂಗೀಕರಿಸಿ ಬಂದರು.

ಪತ್ರಿಕಾ ಪ್ರತಿನಿಧಿಗಳು ಚಿತ್ರ ವಿಚಿತ್ರ ಪ್ರಶ್ನೆಗಳನ್ನು ಕೇಳಲಾರಂಭಿಸಿದರು. ಕೆಲವು ಅಸಹ್ಯಕರವಾದ ಪ್ರಶ್ನೆಗಳೂ ಹೊರಟವು. ವಿಜಯ, ಕಲ್ಪನಾ ಇಬ್ಬರೂ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರವಿತ್ತರು.

" ಕಲೋನಿಯಲ್ ಫಿಲಂ ಕಂಪೆನಿಯವರು ತಯಾರಿಸುತ್ತಿರುವ ' ಸನ್ ಆಫ್ ಇಂಡಿಯಾ ' ಚಿತ್ರದ ವಿರುದ್ಧ ಪ್ರಸಾರ ಮಾಡಲು ನೀವು ಇಲ್ಲಿಗೆ ಬಂದಿರುವಿರಂತೆ ನಿಜವೇ ? "

" ನಾವು ಬಂದಿರುವುದು ಭಾರತದ ಬಗ್ಗೆ ಸರಿಯಾದ ಕಲ್ಪನೆಯನ್ನು ಆಂಗ್ಲರಿಗೆ ಮಾಡಿಕೊಡುವುದಕ್ಕೆ. ಯಾವ ವ್ಯಕ್ತಿಯ ಮೇಲಾಗಲಿ ಸಂಸ್ಥೆಯ ಮೇಲಾಗಲಿ ನಮಗೆ ದ್ವೇಷವಿಲ್ಲ. "

" ಸನ್ ಆಫ್ ಇಂಡಿಯಾ ಬಗ್ಗೆ ನಿಮ್ಮ ಅಭಿಪ್ರಾಯವೇನು ? "

" ಚಿತ್ರವೇ ಹೊರಗೆ ಬಂದಿಲ್ಲ – ಅದರ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುವುದು ಹೇಗೆ ? "

" ಚಿತ್ರದ ಕಥೆ, ನಿರೂಪಣೆಗಳೆಲ್ಲಾ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. ಅವುಗಳನ್ನು ನೀವು ನೋಡಿಲ್ಲವೇ ? "

" ನೋಡಿದ್ದೇವೆ. "

" ಅದರ ಮೇಲೆ ನಿಮ್ಮ ಅಭಿಪ್ರಾಯವೇನು ? "

"ಅಮೇರಿಕಾದಿಂದ ಬರುತ್ತಿರುವ ಚಿತ್ರಗಳು ಚೀಣಿಯರು, ನಿಗ್ರೋಗಳು, ಭಾರತೀಯರನ್ನು ಅವಹೇಳನ ಮಾಡುತ್ತಿವೆ. ಚೀಣಿಯೆಂದರೆ ಅಫೀಮುಬಡಕನಾದ ಕ್ರೂರಕರ್ಮಿ – ನಿಗ್ರೋಯೆಂದರೆ ಆಜನ್ಮದಾಸ – ಭಾರತೀಯನೆಂದರೆ ಸಂಪತ್ತಿನ ಶಿಖರದಲ್ಲಿದ್ದುಕೊಂಡು ದುರಾಚಾರಿಯಾಗಿರುವ ವ್ಯಕ್ತಿ ಎಂದವು ತೋರುತ್ತಿವೆ. ಒಂದು ರಾಷ್ಟ್ರದ ಮೇಲೆ ಇನ್ನೊಂದು ರಾಷ್ಟ್ರ ಈ ಬಗೆಯ ಅಪಪ್ರಚಾರ ಕೈಗೊಳ್ಳುವುದು ತಪ್ಪು. ಬ್ರಿಟನ್ ಈ ಬಗೆಯ ತಪ್ಪು ಹೆಜ್ಜೆಯನ್ನಿಟ್ಟಿರಲಿಲ್ಲ. ಕಲೋಸಿಯಲ್ ಫಿಲ್ಮ್ ಕಂಪೆನಿಯವರು ಹಾಲಿವುಡ್ಡಿನ ಕೆಟ್ಟ ಮೇಲ್ಪಂಕ್ತಿಯನ್ನನುಸರಿಸ ಹೊರಟಿರುವುದು ವಿಷಾದಕರ. ಭಾರತದ ಜನರೆಲ್ಲಾ ಶ್ರೀಮಂತರೂ ಅಲ್ಲ, ಮಂತ್ರವಾದಿಗಳೂ ಅಲ್ಲ. ಬ್ರಿಟನ್ನಿನಲ್ಲಿರುವಂತೆ ಭಾರತದಲ್ಲಿಯೂ ಕವಿಗಳು, ದಾರ್ಶನಿಕರು, ಕಲಾವಿದರು, ರಾಜ್ಯಸೇವಾಧುರಂಧರರೂ ಇದ್ದಾರೆ. ಪರಕೀಯರ ಆಕ್ರಮಣಕ್ಕೆ ಸಿಕ್ಕಿ ಭಾರತ ಇಂದು ಆರ್ಥಿಕ ದಾರಿದ್ರ್ಯವನ್ನನುಭವಿಸುತ್ತಿದೆ. ಆದರೆ ಅದರ ಆಧ್ಯಾತ್ಮಿಕ ಶಕ್ತಿಗೆ ಯಾವ ಬಡತನವೂ ಇಲ್ಲ. ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದ, ಅರವಿಂದ, ರಮಣ ಮಹರ್ಷಿ ಮೊದಲಾದ ಭಾರತೀಯ ಮಹಾ ಪುರುಷರು ಅದರ ಆಧ್ಯಾತ್ಮಿಕ ಸಂಪತ್ತನ್ನು ಕಾಯ್ದಿದ್ದಾರೆ. ಭಾರತ ಬ್ರಿಟನ್ನಿನ ಮೈತ್ರಿ ಬೆಸೆಯಬೇಕೆಂದೇ ನಾವಿಲ್ಲಿ ಬಂದಿದ್ದೇವೆ. ಕ್ಲೈವ್, ವಾರೆನ್ ಹೇಸ್ಟಿಂಗ್ಸ್ ಮೊದಲಾದ ಬ್ರಿಟಿಷರಿಂದ ನಮಗೆ ಅನ್ಯಾಯವಾಗಿದೆ. ಆದರೆ ಸರ್ ವಿಲಿಯಂ ಜೋನ್ಸ್, ಇ. ಬಿ. ಹ್ಯಾವಲ್, ಸೋದರಿ ನಿವೇದಿತಾ ಡಿಗ್ಬಿ, ಎಥಿಲ್ ಮ್ಯಾನಿಲ್, ಡಾ. ಕೆನೆತ್ ವಾಕರ್ ಮೊದಲಾದ ಧರ್ಮಶೀಲ ಬ್ರಿಟಿಷರು ಭಾರತಕ್ಕೆ ಅಪಾರ ಸೇವೆ ಮಾಡಿ, ಭಾರತ ಬ್ರಿಟನ್ನುಗಳ ಮಧುರ ಮೈತ್ರಿಯನ್ನು ಬೆಳಸಲು ಪ್ರಯತ್ನಿಸಿದ್ದಾರೆ. ನಾವು ಕ್ಲೈವ್, ವಾರನ್ ಹೇಸ್ಟಿಂಗ್ಸರ ಬ್ರಿಟನ್ ನೋಡಲು ಬಂದಿಲ್ಲ – ಷೇಕ್ಸ್‌ಪಿಯರ್, ಷೆಲ್ಲಿ, ಷಾಯವರ ಬ್ರಿಟನ್ ನೋಡಲು ಬಂದಿದ್ದೇವೆ."

"ಭಾರತದ ಲಲಿತಕಲೆ ಶ್ರೇಷ್ಠವಾದುದೋ ಬ್ರಿಟನ್ನಿನ ಲಲಿತಕಲೆ ಶ್ರೇಷ್ಠವಾದುದೋ ?"

"ನಿಮ್ಮ ಪ್ರಶ್ನೆ ತರ್ಕವಿರುದ್ಧವಾದುದು. ಭಾರತದ ಕಲೆಗಳನ್ನು ಅಳೆಯುವ ಮಾನದಂಡದಿಂದ ಬ್ರಿಟನ್ನಿನ ಕಲೆಗಳನ್ನಳೆಯಬಾರದು. ಎರಡೂ

ವಿಶಿಷ್ಟ ಸಂಸ್ಕೃತಿಗಳಿಗೆ ಸೇರಿದವುಗಳು. ಕಲೆ ಆಯಾ ನಾಡಿನ ಜನಜೀವನ ಸಂಸ್ಕೃತಿಯ ಪ್ರತೀಕ. ಭಾರತದ ಕಲೆ ಒಳಮುಖವಾಗಿದ್ದರೆ ಬ್ರಿಟನ್ನಿನ ಕಲೆ ( ಐರೋಪ್ಯ ಕಲೆ ) ಹೊರಮುಖವಾದುದು. ಒಂದಕ್ಕೊಂದು ಪೂರಕವೇ ವಿನಾ ಮಾರಕವಲ್ಲ. "

ಸಾಕಷ್ಟು ವೇಳೆಯಾಗಿತ್ತು. ಕಲ್ಪನಾ ಎದ್ದುನಿಂತು ಎಲ್ಲರಿಗೂ ಕೈ ಮುಗಿದು ' ಕಾನ್‌ಫರೆನ್ಸ್ ' ಮುಗಿಯಿತೆಂದು ನಯವಾಗಿ ಸೂಚಿಸಿದಳು.

ಪತ್ರಿಕಾನಿಧಿಗಳ ಬತ್ತಳಿಕೆಗಳಲ್ಲಿ ಇನ್ನೂ ನೂರಾರು ಪ್ರಶ್ನೆಗಳಿದ್ದವು. ಒಬ್ಬ ಪ್ರತಿನಿಧಿ ಕೇಳಿದ.

" ಉದಯಶಂಕರ್, ಕೀರ್ತಿ, ಮೇನಕಾ ಇವರ ಬಗ್ಗೆ ನಿಮ್ಮ ಅಭಿಪ್ರಾಯವೇನು ? "

" ಅವರೆಲ್ಲಾ ದಿವ್ಯ ಕಲಾವಿದರು. ಅವರ ಕಲಾ ಪ್ರಾವೀಣ್ಯದಿಂದ ನಾನು ಸ್ಫೂರ್ತಿಗೊಂಡಿದ್ದೇನೆ. ಅವರೆಲ್ಲಾ ನನ್ನ ಗುರುಸ್ಥಾನದಲ್ಲಿರುವ ಕಲಾ ವಿಭೂತಿಗಳು. "

ಕಲ್ಪನಾ ಮತ್ತೆ ಕೈಮುಗಿದು

" ಕ್ಷಮಿಸಬೇಕು – ನನಗೆ ಹೊತ್ತಾಗುತ್ತಿದೆ " ಎಂದಳು.

ಕ್ಯಾಮೆರಾಗಳು ಸಜ್ಜಾದವು. ಪತ್ರಿಕಾ ಪ್ರತಿನಿಧಿಗಳು ಕಲ್ಪನಾದೇವಿ ಮತ್ತು ಆಕೆಯ ಮಂಡಳಿಯ ಹಲವು ಚಿತ್ರಗಳನ್ನು ತೆಗೆದುಕೊಂಡರು.

ಮಾರನೆಯ ದಿನದ ಪತ್ರಿಕೆಗಳು ' ಸಂದರ್ಶನ ವಾರ್ತೆ ' ಯನ್ನು ಸಚಿತ್ರ ವಾಗಿ ಪ್ರಕಟಿಸಿದವು. ಭಾರತ ಬಗ್ಗೆ ಸಹಾನುಭೂತಿಯಿಂದಿದ್ದ ವಾಮಪಕ್ಷ, ಕಾರ್ಮಿಕ ಪಕ್ಷದ ಪತ್ರಿಕೆಗಳು ಕಲ್ಪನಾದೇವಿಯ ಬಗ್ಗೆ ಪ್ರಶಂಸನಾತ್ಮಕವಾಗಿ ಬರೆದುದಲ್ಲದೆ ' ಟೈಮ್ಸ್ ' – ' ಮ್ಯಾಂಚೆಸ್ಟರ್ ಗಾರ್ಡಿಯನ್ ' ಮೊದಲಾದ ಸಾಮ್ರಾಜ್ಯವಾದೀ ಪತ್ರಿಕೆಗಳು ಕೂಡ ಕಲ್ಪನಾದೇವಿಯ ಉದಾರ ದೃಷ್ಟಿ ಯನ್ನು ಪ್ರಶಂಸೆ ಮಾಡಿದವು.

ಸಂಜೆಯ ಪ್ರದರ್ಶನಕ್ಕೆ ಪತ್ರಿಕೆಗಳ ಪ್ರಸಾರ ಇಂಬುಗೊಟ್ಟಿತು. ಥಿಯೇಟರ್ ಕಿಕ್ಕಿರಿದು ತುಂಬಿತು.

ಕಲ್ಪನಾ ತನ್ನ ' ಮೇಕಪ್ ' (Make-up) ಮುಗಿಸಿಕೊಳ್ಳುತ್ತಿದ್ದಳು. ವಿಜಯ ಓಡಿಬಂದು

" ಲಾಂಗ್ ಡಿಸ್ಟೆನ್ಸ್ ಕಾಲ್ ಬಂದಿದೆ " ಎಂದು ಹೇಳಿದ.

ಕಲ್ಪನಾ ಫೋನ್ ಬಳಿಗೆ ಹೋಗಿ ರಿಸೀವರ್ ಕೈಗೆತ್ತಿಕೊಂಡಳು

" ಹೆಲೋ ! "

" ಹೆಲೋ ! "

" ಯಾರು ಮಾತಾಡುತ್ತಿರುವುದು ? "

" ನಾನು – ಕಲ್ಪನಾ – ನೀವು ಯಾರು ? "

" ನಾನು ಡಾರ್ಲಿಂಗ್ ಡ್ಯಾಡಿ – ಡ್ಯಾಡಿ ! "

" **ಡ್ಯಾಡಿ !** ಕಾಲು ಗಂಟೆಯಲ್ಲಿ ಪ್ರದರ್ಶನ ಆರಂಭಿಸುತ್ತೇನೆ ಡ್ಯಾಡಿ – Wish me good luck ! – ಡಾ. ಕೆನೆತ್ ವಾಕರ್ ಬಂದಿದ್ದರು. "

" ಪ್ರದರ್ಶನಕ್ಕೆ ಬಂದಿದ್ದಾರೆಯೇ ? "

" ಬಂದಿರಬಹುದು. ನಾನು ನೋಡಲಿಲ್ಲ. ಮನೆಯಲ್ಲಿ ಎಲ್ಲರೂ ಕ್ಷೇಮವೇ ? "

" ಎಲ್ಲರೂ ಚೆನ್ನಾಗಿದ್ದೇವೆ. ಪ್ರಯಾಣ ಆಯಾಸವಾಯಿತೇ ಡಾರ್ಲಿಂಗ್. "

" ಇಲ್ಲ ಡ್ಯಾಡಿ – ಸಮುದ್ರ ಪ್ರಶಾಂತವಾಗಿತ್ತು. ಮಮ್ಮಿ ಅಲ್ಲೇ ಇದ್ದಾಳೆಯೇ ? "

" ಇದ್ದಾಳೆ - ಮಮ್ಮಿ ಮಾತನಾಡುತ್ತಾಳೆ. "

" ಅಮ್ಮಾ........ "

" ಕಲ್ಪಾ – ಕಂದಾ, ಚೆನ್ನಾಗಿದ್ದೀಯಮ್ಮ. "

" ಚೆನ್ನಾಗಿದ್ದೇನಮ್ಮಾ. ಹತ್ತು ನಿಮಿಷಗಳಲ್ಲಿ ಪ್ರದರ್ಶನ ಆರಂಭಿಸುತ್ತೇನೆ – ಆಶೀರ್ವಾದ ಮಾಡಮ್ಮಾ. "

" ಮನಃಪೂರ್ವಕವಾಗಿ ಆಶೀರ್ವಾದ ಮಾಡುತ್ತಿದ್ದೇನಮ್ಮ. "

" ಇಲ್ಲಿಂದಲೇ ನಿನಗೂ, ಡ್ಯಾಡಿಗೂ ನಮಸ್ಕಾರ ಮಾಡುತ್ತಿದ್ದೇನೆ. "

ಡಾಕ್ಟರು ಫೋನ್ ಮತ್ತೆ ಕೈಗೆ ತೆಗೆದುಕೊಂಡು

" ಹೊತ್ತಿಗೆ ಸರಿಯಾಗಿ ಪ್ರದರ್ಶನ ಆರಂಭಿಸು ಡಾರ್ಲಿಂಗ್. ಇಂಗ್ಲಿಷಿನವರಿಗೆ ಗಡಿಯಾರವೇ ದೇವರು. "

" ಆಗಲಿ ಡ್ಯಾಡಿ – ನಮಸ್ಕಾರ್. "

" Cheerio child ! "

ಕಲ್ಪನಾ ರಿಸೀವರ್ ಕೆಳಗಿಟ್ಟಳು.

ಅವಳ ಕಣ್ಣುತುಂಬ ನೀರು ತುಂಬಿಕೊಂಡಿತ್ತು. ವಿಜಯನ ಪ್ರೇಮ ಹಸ್ತ ಅವಳನ್ನು ನೇವರಿಸಿತು.

" ಕಣ್ಣೀರು ಹಾಕಬಾರದು ಕಲ್ಪಾ – ಮೇಕಪ್ ಅಳಿಸಿ ಹೋಗುತ್ತದೆ." ಎಂದು ಸೂಚಿಸಿದ.

೮

ಕಲ್ಪನಾದೇವಿಯ ಪ್ರದರ್ಶನಗಳು ಲಂಡನ್ ನಗರವನ್ನು ಹುಚ್ಚೆಬ್ಬಿಸಿ ಕುಣಿಸಿತು. ಯಾರ ಬಾಯಲ್ಲಿಯೂ ಕಲ್ಪನಾದೇವಿಯ ಹೆಸರೇ !

ಪ್ರದರ್ಶನದ ಸೀಸನ್ ಮುಗಿಯುತ್ತ ಬಂದಿರಲು ಕಲ್ಪನಾ ವಿಜಯನಿಗೆ

" ಕೀರ್ತಿಯವರು ಎಲ್ಲಿದ್ದಾರೆ ಪತ್ತೆ ಮಾಡಿ. "

" ಏಕೆ ? "

" ಹೋಗಿ ಅವರನ್ನು ನೋಡಿ ಬರೋಣ. "

ವಿಜಯ ' ಸ್ಯಾಮ್ಯುಯಲ್ ಫ್ರೆಂಚ್ " ಕಂಪೆನಿಗೆ ಫೋನ್ ಮಾಡಿ ಕೀರ್ತಿಯ ವಿಳಾಸ ತಿಳಿದುಕೊಂಡ.

" ಎಲ್ಲಿದ್ದಾರಂತೆ ! "

" ಇಲ್ಲೇ ವೆಸೆಕ್ಸ್ ಹೊಟೇಲಿನಲ್ಲಿದ್ದಾರಂತೆ !

" ಬನ್ನಿ – ಹೋಗಿಯೇ ಬಂದು ಬಿಡೋಣ. "

ಎಂದಳು. ಕೀರ್ತಿಯನ್ನು ನೋಡುವುದು ವಿಜಯನಿಗೆ ಬೇಕಿಲ್ಲವಾಗಿದ್ದರೂ ಕಲ್ಪನೆಯ ಮಾತು ಮೀರಲು ಮನಸ್ಸಾಗಲಿಲ್ಲ.

' ವೆಸೆಕ್ಸ್ ಹೊಟೇಲ್ ' ಆಳು ಅವರಿಬ್ಬರನ್ನೂ ಕೀರ್ತಿಯ ರೂಮಿಗೆ ಕರೆದೊಯ್ದ.

ಕೀರ್ತಿ ಎರಡು ಬಾಹುಗಳನ್ನೂ ನೀಡಿ ಆದರಪೂರ್ವಕವಾಗಿ ಸ್ವಾಗತ ಬಯಸಿ

" ನನ್ನ ಅಭಿನಂದನೆ ಸ್ವೀಕರಿಸಿ ಕಲ್ಪನಾದೇವಿ " ಎಂದ.

" ನನ್ನ ಪ್ರದರ್ಶನಕ್ಕೇಕೆ ಬರಲಿಲ್ಲ ಕೀರ್ತಿಯವರೇ ? "

" ಪುರಸತ್ತಿಲ್ಲ – ಷೂಟಿಂಗ್ ನಡೆದಿದೆ – ಹಾಗೂ ಒಂದು ದಿನ ಬಂದಿದ್ದೆ – ಸ್ವಲ್ಪ ಹೊತ್ತಿದ್ದು ಹೊರಟು ಹೋದೆ. ಲಂಡನ್ನಿನ ಮೇಲೆ ಧಾಳಿ ನಡೆಸಿ ಬಿಟ್ಟಿರುವಿರಿ ? "

" ನೀವುಗಳೆಲ್ಲಾ ಉತ್ತು ಬಿತ್ತ ಭೂಮಿಯಲ್ಲಿ ಬೆಳೆದ ಫಲವನ್ನು ನಾನು ಅನುಭವಿಸುತ್ತಿದ್ದೇನೆ. ಇದರ ಸಂಪೂರ್ಣ ಯಶಸ್ಸು ನಿಮಗೆ ಸೇರಬೇಕಾದುದು – ನಾಟ್ಯಕಲೆಯನ್ನೇಕೆ ಬಿಟ್ಟಿರಿ ಕೀರ್ತಿಯವರೇ – ನಿಮ್ಮಂಥ ಕಲಾವಿದರು ಭಾರತದಲ್ಲಿ ಎಷ್ಟು ಮಂದಿ ಸಿಗಲು ಸಾಧ್ಯ ? "

" ಕಲ್ಪನಾದೇವಿ – ನನ್ನ ಜೀವನ ಮುರಿದ ದೋಣಿಯಾಯಿತು. ಹೋಗಲಿ ಬಿಡಿ ಆ ವಿಷಯವೇಕೆ ?

" ನಾನೊಂದು ಮಾತು ಹೇಳುತ್ತೇನೆ. ಅಹಂಕಾರದಿಂದ ಆಡುತ್ತಿದ್ದೇನೆಂದು ಭಾವಿಸಬೇಡಿ. "

" ಇಲ್ಲ. ಹೇಳಿ. "

" ಈಗಲೂ ಈ ಫಿಲಂ ಕಂಟ್ರಾಕ್ಟ್ ಬಿಟ್ಟುಬಿಡಿ. ನನ್ನ ಮಂಡಳಿಗೆ ಬನ್ನಿ. ನೀವೇ ಈ ಮಂಡಳಿಯನ್ನು ನಡೆಸಿ. ನಾನು ನಿಮ್ಮ ಕೈಕೆಳಗೆ ಕೆಲಸ ಮಾಡಲು ಸಿದ್ಧಳಾಗಿದ್ದೇನೆ. ನಿಮ್ಮಂಥ ಕಲಾವಿದರು ಭಾರತದ ಅಪಪ್ರಚಾರ ಮಾಡಲು ಹೊರಟಿರುವ ಚಿತ್ರದಲ್ಲಿ ಪಾತ್ರ ವಹಿಸುವುದು ವಿಹಿತವಲ್ಲ. "

" ನನ್ನ ಕಥೆ ಮುಗಿದುಹೋಯಿತು ಕಲ್ಪನಾದೇವಿ. ಇನ್ನು ನಾನು ಭಾರತಕ್ಕೆ ಕಾಲಿಡುವುದಿಲ್ಲ. ನನ್ನ ಮನೆ, ಮಠ, ಸಂಪತ್ತು, ಕೀರ್ತಿ ಎಲ್ಲಾ ನಾಶವಾಗಿ ಹೋಯಿತು. "

" ನಿಮ್ಮ ಕಲೆ ಅವೆಲ್ಲವನ್ನೂ ಮತ್ತೆ ದೊರಕಿಸಿ ಕೊಡಬಲ್ಲುದು. "

" ನಿಮ್ಮ ಔದಾರ್ಯಕ್ಕೆ ನಾನು ತುಂಬ ಋಣಿಯಾಗಿದ್ದೇನೆ. ನಾನು ಭಾರತಕ್ಕೆ ಬರಲಾರೆ. ಏನೆಂದು ಈ ಹಾಳು ಮುಖ ಭಾರತದಲ್ಲಿ ತೋರಿಸಲಿ– ನನ್ನನ್ನು ದೇವರೆಂದು ಭಾವಿಸಿ ಪೂಜಿಸಿದ ಜನಕ್ಕೆ ದ್ರೋಹ ಮಾಡಿದೆ - ನಿಮ್ಮ ಜೀವನವನ್ನೇ ಹಾಳು ಮಾಡಲೆತ್ನಿಸಿದೆ - ಕ್ಯಾಪ್ಟನ್ ವಿಜಯ ಅವರ ಮನಸ್ಸು ಕೆಟ್ಟು ಅವರು ಪಾಪದ ಹಾದಿ ಹಿಡಿಯುವುದಕ್ಕೆ ನಾನೇ ಕಾರಣವಾದೆ. "

" ಆದದ್ದಾಯಿತು. ಈಗ ಆ ಮಾತೇಕೆ ? ನನ್ನ ಜತೆ ಬನ್ನಿ - ಭಾರತ ನಿಮಗೆ ಬೇಡವಾದರೂ ನೀವು ಭಾರತಕ್ಕೆ ಬೇಕು.

ಕೀರ್ತಿಗೆ ದುಃಖ ಉಕ್ಕಿ ಬಂತು. ಕಣ್ಣೀರು ಮಿಡಿಯಿತು. ಮುಖ ಮುಚ್ಚಿಕೊಂಡು

" ಇಲ್ಲಿಂದ ಹೊರಟು ಹೋಗಿ ಕಲ್ಪನಾದೇವಿ - ನನ್ನನ್ನು ಮರೆತುಬಿಡಿ - ಪುನಃ ನನ್ನನ್ನು ನೋಡುವ ಪ್ರಯತ್ನ ಮಾಡಬೇಡಿ. "

ಎಂದು ಕಟುವಾಗಿ ನುಡಿದ. ಕಲ್ಪನಾ ತನ್ನ ಪರ್ಸಿನಿಂದ ಒಂದು ಕವರು ತೆಗೆದು ಕೀರ್ತಿಯ ಮೇಜಿನ ಮೇಲಿಟ್ಟು ವಿಜಯನೊಂದಿಗೆ ಹೊರಟು ಬಿಟ್ಟಳು.

ದಾರಿಯಲ್ಲಿ ಬರುವಾಗ ಕಲ್ಪನಾ

" ನಾನೊಂದು ಕೆಲಸ ನಿಮ್ಮನ್ನು ಕೇಳದೆ ಮಾಡಿದೆ ವಿಜಯ– ನೀವು ಕ್ಷಮಿಸಬೇಕು. "

" ಏನು ಮಾಡಿದಿರಿ ? "

" ಕೀರ್ತಿಯವರಿಗೆ ಐದು ನೂರು ಪೌಂಡುಗಳಿಗೆ ಒಂದು ಚೆಕ್ ಕೊಟ್ಟು ಬಂದೆ. – ನಾವು ನಾಲ್ಕು ದಿನವಾದರೂ ಅವರ ಶಿಷ್ಯಳಾಗಿದ್ದೆ. ನನ್ನ ಹೆಸರು ಪ್ರಕಾಶಕ್ಕೆ ಬಂದುದೇ ಅವರಿಂದ. "

" ನೀವು ಅನುಚಿತವಾದುದನ್ನೇನೂ ಮಾಡಲಿಲ್ಲ. ಅನುಚಿತವಾದು ದನ್ನು ಮಾಡುವುದು ನಿಮಗೆ ಸಾಧ್ಯವೇ ಇಲ್ಲ. "

" ವಿಜಯ - ವಿಜಯ್ ! "

ಲಂಡನ್ನಿನ ಪ್ರವಾಸ ಮುಗಿಯುತ್ತ ಬಂದಿತು. ಇಂಡಿಯಾ ಲೀಗ್, ಬ್ರಿಟಿಷ್ ಫಿಲ್‌ಹಾರ್ಮೋನಿಕ್ ಸೊಸೈಟಿ, ಇಂಟರ್ ನ್ಯಾಷನಲ್ ಇನ್‌ಸ್ಟಿಟ್ಯೂಟ ಆಫ್ ಕಲ್ಚರ್ ಮೊದಲಾದ ಸಂಸ್ಥೆಯವರು ಕಲ್ಪನಾದೇವಿಯನ್ನೂ ಮಂಡಳಿಯನ್ನೂ ಬರಮಾಡಿಕೊಂಡು ಆದರಿಸಿದರು. ಡಾ. ಕೆನೆತ್ ವಾಕರ್ ತಮ್ಮ ಮನೆಯಲ್ಲಿ ಕಲ್ಪನಾದೇವಿಗೂ ಮಂಡಳಿಗೂ ಸೊಗಸಾದ ಔತಣ ಏರ್ಪಡಿಸಿ ಪ್ರಮುಖ ಕವಿಗಳು, ಕಲಾವಿದರು, ಡಾಕ್ಟರುಗಳನ್ನೂ ಕರೆದಿದ್ದರು.

ಎಲ್ಲರಿಂದಲೂ 'ಭಲೆ' ಎನ್ನಿಸಿಕೊಂಡು ಕಲ್ಪನಾದೇವಿ ಮಂಡಳಿಯೊಡನೆ ಮಾತೃಭೂಮಿಗೆ ಪ್ರಯಾಣ ಬೆಳಸಿದಳು.

ಮುಂಬಯಿ ಡಾಕ್ಸ್‌ನಲ್ಲಿ ಸೂಜಿ ಮೊನೆಯೂರಲು ಸ್ಥಳವಿಲ್ಲ. ಕಲ್ಪನಾ ಮುಖ ಕಂಡೊಡನೆಯೇ ಪತ್ರಿಕಾ ಪ್ರತಿನಿಧಿಗಳು ಆಕೆಯಿದ್ದಲ್ಲಿಗೆ ಧಾವಿಸಿದರು. ಮುಂಬಯಿಯ ಮೇಯರ್ ಕಲ್ಪನಾದೇವಿಯನ್ನು ಸ್ವಾಗತಿಸಿ ಹಾರ ತುರಾಯಿ ಅರ್ಪಿಸಿದರು.

ಕಲ್ಪನೆಗೆ ಇವುಗಳೊಂದೂ ಬೇಕಾಗಿರಲಿಲ್ಲ. ಆ ಗುಂಪಿನಲ್ಲಿ ಅವಳ ಕಣ್ಣುಗಳೇನನ್ನೋ ಅರಸುತ್ತಿದ್ದವು. ದೂರ ಒಂದು ಮೂಲೆಯಲ್ಲಿ ಡಾಕ್ಟರು ಕಲ್ಯಾಣಮ್ಮನವರು, ಶೇಖರ್, ಸುಂದರಿ ನಿಂತಿದ್ದರು. ಕಲ್ಪನಾ ಜನಜಂಗುಳಿಯ ಮಧ್ಯೆ ದಾರಿ ಬಿಡಿಸಿಕೊಂಡು ತಾಯಿ ತಂದೆಯ ಬಳಿಗೆ ಹೋಗಿ ಅವರ ಪಾದಗಳ ಮೇಲೆ ಉರುಳಿದಳು. ಕಲ್ಯಾಣಮ್ಮನವರು ಮಗಳನ್ನೆತ್ತಿ ಅಪ್ಪಿಕೊಂಡರು. ಡಾಕ್ಟರು ಕಣ್ಣಿನಿಂದ ಕನ್ನಡಕ ತೆಗೆದು ಕರವಸ್ತ್ರದಿಂದ ಅದನ್ನು ಒರೆಸಲಾರಂಭಿಸಿದರು.

ಎಲ್ಲರೂ ಊರು ತಲುಪಿದರು.

ತನ್ನ ವರಮಾನವನ್ನು ಕಲ್ಪನಾ ಮಂಡಳಿಯ ಕಲಾವಿದರಿಗೆಲ್ಲ ಸಮವಾಗಿ ಹಂಚಿದಳು. ತಂದೆಯಿಂದ ತೆಗೆದುಕೊಂಡಿದ್ದ ಹಣವನ್ನು ಅವರಿಗೆ ಒಪ್ಪಿಸಿದಳು.

"ಈ ಹಣ ನನಗೆ ಬೇಡ ಡಾರ್ಲಿಂಗ್."

"ನಾನು ತೆಗೆದುಕೊಂಡೇನು ಮಾಡಲಿ ಡ್ಯಾಡಿ."

"ಕಲ್ಪನಾ ಕಲಾಮಂದಿರ ಸ್ಥಾಪನೆಯಾಗಬೇಡವೇ?" ಎಂದರು.

ಕಲ್ಪನೆಯ ದೇಹ ಸೋತಿತ್ತು. ಆದರೆ ಮನಸ್ಸು ಉತ್ಸಾಹಗೊಂಡಿತ್ತು. ನಾಲ್ಕು ದಿನಗಳ ವಿಶ್ರಾಂತಿ ಅಗತ್ಯವೆಂದು ಡಾಕ್ಟರು ಮಗಳಿಗೆ ಹೇಳಿದ್ದರು. ಕಲ್ಪನೆಯ ದೇಹಕ್ಕೆ ಕಡ್ಡಾಯವಾಗಿ ವಿಶ್ರಾಂತಿ ಲಭಿಸಿತ್ತು. ಆದರೆ ಮನಸ್ಸಿಗೆಲ್ಲಿ ವಿಶ್ರಾಂತಿ !

"ವಿಜಯ್, ತಂದೆ ಹೇಳಿದ್ದು ಕೇಳಿದಿರಾ ?"

"ಕೇಳಿದೆ ಡಿಯರ್. 'ಕಲ್ಪನಾ ಕಲಾಮಂದಿರ' ದ ವಿಷಯ !"

"ಅಷ್ಟು ದೊಡ್ಡ ಜವಾಬ್ದಾರಿ ಹೊರಲು ನನಗೆ ಸಾಧ್ಯವೇ ?"

"ನಿಮಗಲ್ಲದೆ ಇನ್ನು ಯಾರಿಗೆ ಸಾಧ್ಯ ?"

"ಈ ಕೆಲಸಕ್ಕೆ ಕೈಹಾಕು ಎಂದು ನೀವು ಧೈರ್ಯ ಕೊಟ್ಟರೆ ಆರಂಭಿಸುತ್ತೇನೆ."

"ಮಡಿಯುವವರು ನೀವು - ನಾನೇನು ಮಾಡುತ್ತಿರುವುದು ?"

"ನಿಜ - ನನ್ನ ದೇಹ ಕೆಲಸ ಮಾಡುತ್ತಿದೆ ವಿಜಯ್ – ಆದರೆ ಅದರೊಳಗೆ ಆತ್ಮವೊಂದು ಸೇರಿಕೊಂಡು ಈ ಕೆಲಸಗಳೆಲ್ಲವನ್ನೂ ಮಾಡಿಸುತ್ತಿದೆ. ಆತ್ಮವಿಲ್ಲದ ದೇಹದಿಂದೇನು ಪ್ರಯೋಜನ ವಿಜಯ್."

"ಕಲ್ಪನಾ - ನೀವು ದೇವಿ"

ಎಂದು ವಿಜಯನ ಹೃದಯ ಮರುನುಡಿಯಿತು.



### ಓದಿ ಸಂತೋಷ ಪಡಿರಿ !

# ಬೆಳಗಿದ ಪ್ರತಿಭಾ ಕಿರಣಗಳು.

| ಕಾದಂಬರಿಗಳು | | ರೂ. | ಆ |
|---|---|---|---|
| ಅನ್ನಪೂರ್ಣಾ ಮಂದಿರ | ಶೆಟ್ಟಿ | ೨ | ೦ |
| ಅಶೋಕ ಚಕ್ರ | ಮಿರ್ಜಿ ಅಣ್ಣಾರಾಯ | ೩ | ೮ |
| ಆಶಾಬಾಳು | ಪಿ. ಶ್ರೀಧರರಾಯ | ೧ | ೪ |
| ಇಂದ್ರಜಾಲ | ನವಗಿರಿನಂದ | ೪ | ೦ |
| ಎರಡು ಸೆಳೆತ | ಮುಲ್ಲಾರಿ | ೧ | ೧೨ |
| ಕಳ್ಳರ ಕೈಚಳಕ ( ಪತ್ತೇದಾರಿ ) | ರಮೇಶ | ೧ | ೪ |
| ಕರೀಬೆಕ್ಕು ,, | ,, | ೧ | ೪ |
| ಕಾಲಯಾನ | ಭಾರತೀಸುತ | ೧ | ೧೦ |
| ಕೊಂದವರು ಯಾರು ? (ಪತ್ತೇದಾರಿ) | ಜೋಶಿ | ೧ | ೪ |
| ಕೊಲ್ಗಂಬ | ಹೊಸಮನೆ | ೦ | ೧೪ |
| ಗಂಡು-ಹೆಣ್ಣಿನ ಸಮಸ್ಯೆ | ಕುಪ್ಪಮ್ಮ | ೩ | ೦ |
| ತರಲಾ | ಜೋಶಿ-ದೇಶಪಾಂಡೆ | ೧ | ೦ |
| ದಲಿತ ಕುಸುಮ | ಹೊಸಮನೆ | ೨ | ೦ |
| ದೇವರ ಸಾಮ್ರಾಜ್ಯ | ಶ್ರೀಕಂಠಯ್ಯ | ೨ | ೦ |
| ದೇವರೆಲ್ಲಿ | ರಮಾಕಾಂತ | ೪ | ೦ |
| ಧರ್ಮಸಂಕಟ | ವಾಡೇದ | ೨ | ೦ |
| ನಿರ್ದೋಷಿ | ಕುಮಟಾ | ೨ | ೦ |
| ನೂರಜಹಾನ | ಗಲಗಲಿ | ೧ | ೦ |
| ನೇತಾಜಿ | ಮುಲ್ಲಾರಿ | ೧ | ೬ |
| ಪತಿ | ನವಗಿರಿನಂದ | ೧ | ೮ |
| ಪತಿವ್ರತೆಯ ಪ್ರಭಾವ | ಕೌಜಲಗಿ | ೧ | ೪ |
| ಪರಾವಲಂಬಿ | ಜನಾರ್ದನ ಗುರ್ಕಾರ | ೨ | ೮ |
| ಪುನರ್ಮಿಲನ | ವಾಡೇದ | ೨ | ೮ |
| ಪೂಜಾಫಲ | ನೆರಂಗ | ೧ | ೫ |
| ಬಿರುಗಾಳಿ | ಪ್ರೊ. ಫಡಕೆ | ೩ | ೮ |
| ಬೆಳವಲದ ಭಾಗ್ಯಲಕ್ಷ್ಮಿ | ಶೇ. ಗೋ. ಕು. | ೨ | ೮ |
| ಭೂಮಾತೆ ಮಂದಿರ | ಪರ್ಲ್ ಬಕ್-ಶರತ್ | ೧ | ೮ |
| ಮರೆಯಲಾರದ ಮಡದಿ | ಯೋಗೀಶರಾವ | ೨ | ೦ |
| ಮಾಧವಲೀಲೆ | ವೆಂಕಟೇಶಯ್ಯ | ೧ | ೮ |
| ಮಾಲತೀಮಂದಿರ | ಹೊಸಮನೆ | ೨ | ೦ |

| | | ರೂ. | ಆ |
|---|---|---|---|
| ಮೃತ್ಯುದೂತ | ವಿಶ್ವಾಮಿತ್ರ | ೧ | ೮ |
| ರಂಗವಿಲಾಸಿನಿ | ಮಲ್ಲಾರಿ | ೩ | ೦ |
| ರಮಾನಾಥ | ಪ್ರೇಮಚಂದ | ೩ | ೦ |
| ರಾಜಲಕ್ಷ್ಮಿ | ಶರಚ್ಚಂದ್ರ | ೧ | ೮ |
| ವಿಜಯಾ | ,, | ೧ | ೮ |
| ವೃಂದ | ವೆಂಕೋಬಾಚಾರ್ಯ | ೧ | ೮ |
| ವೈಕುಂಠನ ಮೃತ್ಯುಪತ್ರ | ಶರತ್ | ೧ | ೮ |
| ಶಕುಂತಲಾ ( ಸಾಮಾಜಿಕ ) | ಪ್ರೊ. ಫಡಕೆ | ೨ | ೧೨ |
| ಷೋಡಶಿ | ಶರತ್ | ೨ | ೮ |
| ಸಮ್ರಾಟ್ ಹರ್ಷವರ್ಧನ | ನಾಗೇಶ | ೨ | ೦ |
| ಸಾವಿನ ಉಡಿಯಲ್ಲಿ | ಎನ್ಕೆ | ೩ | ೦ |
| ಸತ್ಸೇವೆ | ನವಗಿರಿನಂದ | ೩ | ೮ |
| ಸುಭಾಸ ಸೀಮೋಲ್ಲಂಘನ | ಮಲ್ಲಾರಿ | ೧ | ೮ |
| ಸ್ವರ್ಣಭೂಮಿ | ಮಲ್ಯ | ೧ | ೮ |

## ಕಥಾಸಂಕಲನಗಳು

| | | | |
|---|---|---|---|
| ಗೃಹದಾಹ | ಪ್ರೇಮಚಂದ | ೧ | ೮ |
| ಘಾಟೀ ಮುದುಕ | ದೇವುಡು | ೧ | ೮ |
| ಚಂದ್ರತಾರೆ | ವರದರಾಜ | ೧ | ೪ |
| ಚಕಮಕಿ | ಬೇಂದ್ರೆ | ೨ | ೦ |
| ನಿಸರ್ಗದುಡಿಯಲ್ಲಿ | ಅನೇಕರು | ೧ | ೮ |
| ಪಂಜರದ ಹಕ್ಕಿ | ಮಲ್ಲಾರಿ | ೦ | ೧೪ |
| ಪುತ್ರೋತ್ಸವ | ದೀಕ್ಷಿತ | ೧ | ೦ |
| ಪ್ರಣಯ ಸಮಾಧಿ | ಮಿರ್ಜಿ | ೧ | ೪ |
| ಬಾಳ್ನೋಟಗಳು | ನಾಯ್ಕ | ೦ | ೬ |
| ಹೊಸ ಬೆಳಕು | ವೆಂ. ಮು. ಜೋಶಿ | ೧ | ೮ |

## ನಾಟಕಗಳು

| | | | |
|---|---|---|---|
| ಬಾಯಬಂಡಾಯ | ಬೇಂದ್ರೆ | ೧ | ೮ |
| ರೇಡಿಯೊ ನಾಟಕಗಳು | ಬೀಚಿ | ೧ | ೮ |

**ಸಮಾಜ ಪುಸ್ತಕಾಲಯ, ಧಾರವಾಡ.**